ಹೆಸರುವಾಸಿ ಮಹಾತ್ಮಾ ಗಾಂಧಿಯವರದು. ಲೋಕದ ಯಾವ ಖ್ಯಾತಿವಂತರೊಂದಿಗಾದರೂ ಇವರನ್ನು ತೂಗಬಹುದು. ಇವರು ಆ ಯಾರಿಗೂ ಕಡಮೆಯೆಂದು ಕಾಣುವುದಿಲ್ಲ.

ಆದರೆ ನಮಗೆ ಇಷ್ಟು ಸಾಲದು. ಒಂದು ದೇಶದ ಬೆಲೆ ಒಂದು ಸಂಸ್ಕೃತಿಯ ಬೆಲೆ, ಒಂದು ನಡತೆಯ ಬೆಲೆ ಮತ್ತೊಂದರ ಬೆಲೆಯನ್ನು ಅವಲಂಬಿಸಿ ನಿಲ್ಲಬಾರದು. ಪುಣ್ಯಕರ್ಮದ ಪ್ರಶಂಸೆ ಭೂಮಿಯನ್ನೂ ಸ್ವರ್ಗವನ್ನೂ ಮುಟ್ಟುತ್ತದೆ, ಹಾಗೆ ಅದು ಮುಟ್ಟಿದಾಗ ಅದನ್ನು ಮಾಡಿದವನು ಪುರುಷನಾಗುತ್ತಾನೆ, ಎಂದು ಯುಧಿಷ್ಠಿರಯಕ್ಷರ ಸಂಭಾಷಣೆಯಲ್ಲಿ ಹೇಳಿದೆ. ಒಳ್ಳೆಯತನ ಭೂಮಿ ಅಷ್ಟನ್ನು ಒಪ್ಪಿಸಿದರೆ ಸಾಲದು. ಅದು ಸ್ವರ್ಗವನ್ನೂ ಒಪ್ಪಿಸಬೇಕು. ಈ ಸ್ವರ್ಗವೆನ್ನುವುದು ನಮ್ಮ ಅಂತರ್ಯವು ಇನ್ನೊಬ್ಬರ ನಲುವಾಗಿ ಅಲ್ಲದೆ ಸ್ವಾಂತದ ನಲುವಾಗಿ ಬಯಸುವ ಶ್ರೇಷ್ಠತೆ. ಈ ಶ್ರೇಷ್ಠತೆಯನ್ನು ಸ್ವಪ್ನದಲ್ಲಾದರೂ ಕಂಡ ಜೀವ ತಾನು ಮತ್ತೊಂದರಷ್ಟು ಚೆನ್ನಾಗಿದೇನೆಂದು ಹೇಳಿ ತೃಪ್ತಿಪಡಲಾರದು; ನನ್ನಿಂದ ಸಾಧ್ಯವಾದಷ್ಟೂ ಒಳ್ಳೆಯವನಾಗಿದೇನೆ ಎನ್ನುವುದರಲ್ಲಿ ತೊಡಗುತ್ತದೆ. ನಡೆದು ನಡೆದಂತೆ ಇದರ ದಿಗಂತ ದೂರ ದೂರ ಸಾರುತ್ತದೆ. ನಾನು ಎನ್ನುವುದು ಅಡಗಿ ಯಾವ ಹೊತ್ತಿನಲ್ಲಿ ವಿಶ್ವ ಎನ್ನುವುದು ಮಾತ್ರ ಮನುಷ್ಯನ ಗುರಿಯಾಗಿ ನಿಲ್ಲುತ್ತದೋ ಅಂದು ಮನುಷ್ಯನು ತಾನಿರುವ ಸ್ಥಳದಲ್ಲಿ ದಿಗಂತವನ್ನು ಸಾಧಿಸಿಕೊಳ್ಳುತ್ತಾನೆ; 'ಯೋಽಸಾವಸೌ ಪುರುಷಃ ಸೋಽಹಮಸ್ಮಿ' ಎನ್ನುವ ಧೈರ್ಯವನ್ನು ಪಡೆಯುತ್ತಾನೆ. ನಾನುಂಟೋ ಮೂರು ಲೋಕವುಂಟೋ ಎನ್ನುವುದು ಸಾಮಾನ್ಯನ ಸ್ಥಿತಿ. ಮೂರು ಲೋಕದ ಯಾವ ಒಂದು ಕಣವುಂಟೋ ನಾನುಂಟು, ಎನ್ನುವುದು ಇಂಥ ಸಿದ್ಧ ಜೀವನದ ಸ್ಥಿತಿ. ಮಾನವನ ಮುಂಬರಿವಿನ ಎಲ್ಲೆ ಇದು. ಇದನ್ನು ಬಿಟ್ಟು ಮನುಜವರ್ಗಕ್ಕೆ ತಕ್ಕ ಧ್ಯೇಯವಿಲ್ಲ. ಇದನ್ನು ಮುಟ್ಟದೆ ಉನ್ನತ ಜೀವಿಗಳಿಗೆ ತೃಪ್ತಿಯಿಲ್ಲ.

ಈ ಯುಗಕ್ಕೆ ಈ ಧ್ಯೇಯವನ್ನು ಒಂದು ಗುರಿಯೆಂದು ತೋರಿಸಿಕೊಡುವ ಪುಣ್ಯ ಮಹಾತ್ಮಾ ಗಾಂಧಿಯವರದಾಯಿತು. ಮಾನವಕುಲ

ಮೊದಲಲ್ಲಿ ಸಣ್ಣ ಸಣ್ಣ ಗುಂಪಾಗಿದ್ದು ಆ ಮೇಲೆ ದೊಡ್ಡ ದೊಡ್ಡ ಗುಂಪಾಗಿರುವುದನ್ನು ಕಲಿತು, ಒಂದು ದೇಶದ ಮಕ್ಕಳೆಂದು, ಒಂದು ಬಣ್ಣದ ಜನರೆಂದು, ಒಂದು ಮತದ ಮಕ್ಕಳೆಂದು, ಒಂದು ಸಂಸ್ಕೃತಿಯ ಅನುಯಾಯಿಗಳೆಂದು, ಮತ್ತಷ್ಟು ದೊಡ್ಡ ಸಮೂಹಗಳೊಳಗೆ ಮೈತ್ರಿಯಿಂದಿರುವುದನ್ನು ಅಭ್ಯಾಸ ಮಾಡುತ್ತಿದೆ. ಆದರೆ ಮನುಜರು ಪ್ರಪಂಚದ ಶಾಲೆಯಲ್ಲಿ ಕಲಿಯಬೇಕಾದ ಪಾಠ ಇಷ್ಟರಲ್ಲಿ ಮುಗಿಯುವುದಿಲ್ಲ. ಪಾಠ ಮುಂದರಿದು ಎಲ್ಲ ಬಣ್ಣವೂ ಒಂದು ಬಣ್ಣದ ಭೇದಗಳು, ಎಲ್ಲ ದೇಶವೂ ಒಂದು ಭೂಮಿಯ ಅಂಗಾಂಗ ಭಾಗಗಳು, ಎಲ್ಲ ಸಂಸ್ಕೃತಿಯೂ ಒಂದು ಸಂಸ್ಕೃತಿಯ ಸಾಧನೆಯಲ್ಲಿ ಸಿದ್ಧಿಸಿರುವ ಅದರ ಅಂಶಗಳು, ಎಲ್ಲ ಮತವೂ ಒಂದು ಮತವನ್ನು ಅರಿಯುವ ಯತ್ನದಲ್ಲಿ ಕಂಡ ಶಾಖೆಗಳು, ಎನ್ನುವುದು ಈ ಕುಲಕ್ಕೆಲ್ಲ ತಿಳಿಯಬೇಕು. ಮಾನವ ಕುಲದ ಇತಿಹಾಸ ಈ ಮುಖವಾಗಿ ಹೊರಟಿದೆ. ಒಂದೊಂದು ಹೊತ್ತು ಇದು ಹೌದೊ ಅಲ್ಲವೊ ಎಂಬ ಶಂಕೆ ಹುಟ್ಟುವಂತೆ ಜನಾಂಗಗಳು ನಡೆದುಕೊಳ್ಳುತ್ತವೆ. ಆದರೆ ಅದೇ ಜನಾಂಗಗಳ ಬೆಳವಣಿಗೆಯನ್ನು ಒಟ್ಟಿನಲ್ಲಿ ನೋಡಿದರೆ ಅವು ಕೂಡ ಈ ಮುಖದಲ್ಲಿ ಬೆಳೆದಿರುವುದು ಕಾಣುತ್ತದೆ. ಲೋಕವೇ ಒಂದು ಎನ್ನುವ ಸೂತ್ರ ಮನುಜಕುಲದ ಸತ್ಯಸೂತ್ರ, ಮಂಗಳಸೂತ್ರ. ಇದನ್ನು ಬಹು ಪೂರ್ವದಿಂದ ನಮ್ಮ ದೇಶ ಜಪಿಸಿದೆ, ತಕ್ಕಮಟ್ಟಿಗೆ ಅನುಷ್ಠಾನ ಮಾಡಿದೆ. ಅವನತಿಯ ದೆಸೆಯಲ್ಲಿ ನಮ್ಮ ಜನತೆ ಇದನ್ನು ಮರೆತಂತಿತ್ತು; ಅನ್ಯದ ಬಡತನ ಧರ್ಮದ ಬಡತನ ಎಂದು ತಿಳಿದಂತಿತ್ತು. ಇದನ್ನು ಸರಿಪಡಿಸುವುದಕ್ಕೆ ಸ್ವಾಮಿ ವಿವೇಕಾನಂದರು ಮೊದಲು ಮಾಡಿದರು. ಅವರು ಆರಂಭಿಸಿದ ಕಾರ್ಯವನ್ನು ಇನ್ನೊಂದು ದಾರಿಯಲ್ಲಿ ಬೆಳೆಸಿ ಮಹಾತ್ಮರು ಭರತವರ್ಷದ ಧ್ಯೇಯ ಲೋಕದ ಧ್ಯೇಯ ಎಂದು ತೋರಿಸಿಕೊಟ್ಟು ತಾವು ಧನ್ಯರಾದರು; ದೇಶಕ್ಕೆ ಕೀರ್ತಿ ತಂದರು; ಮನುಜ ವರ್ಗಕ್ಕೇ ಮಹಿಮಾ ಪುರುಷರೆಂದು ಪ್ರಖ್ಯಾತರಾದರು.

ಇಂಥ ಮಹನೀಯರ ಜೀವನದ ಒಂದು ಚಿತ್ರವನ್ನು ಶ್ರೀಮಾನ್ ಕೃಷ್ಣಶರ್ಮರವರು ಇಲ್ಲಿ ರಚಿಸಿದಾರೆ. ಹಿರಿಯ ಒಂದು ಜೀವನವನ್ನು

ಅರಿಯುವ ಅಧಿಕಾರದ ಮುಖ್ಯ ಅಂಶ ಅದನ್ನು ಕುರಿತ ಗೌರವ. ಜೊತೆಗೆ ಆ ಹಿರಿಯ ಜೀವನ ಯಾವ ಗುಣಗಳಿಂದ ಕೂಡಿದೆ ಎಂದು ಗ್ರಹಿಸಬಲ್ಲ ಸೂಕ್ಷ್ಮಬುದ್ಧಿ ಇರಬೇಕು. ಇದರ ಮೇಲೆ ಲೋಕಾನುಭವ ಆವಶ್ಯಕ. ವಿಷಯ ಸಂಗ್ರಹವಂತೂ ಆವಶ್ಯಕವೆಂದು ಬೇರೆ ಹೇಳಬೇಕಿಲ್ಲ. ಶ್ರೀಮಾನ್ ಕೃಷ್ಣಶರ್ಮರವರಿಗೆ ಈ ಅಧಿಕಾರ ಸಂಪತ್ತು ಎಲ್ಲ ಇದೆ. ಇವರು ನಮ್ಮ ಜನತೆಯನ್ನು ಬಲ್ಲವರಾಗಿರುತ್ತ ದೇಶಪ್ರೇಮ ಭಾಷಾ ಪ್ರೇಮದಿಂದ ಪ್ರೇರಿತರಾಗಿ ದೇಶಸೇವೆ ಭಾಷಾಸೇವೆಯಲ್ಲಿ ನಿರತರಾಗಿದ್ದಾರೆ. ಕಷ್ಟನಿಷ್ಠುರದಲ್ಲಿ ಜೀವನವನ್ನು ನಡೆಸಬೇಕಾಗಿ ಬಂದು ಇವರು ಕ್ಷಮಾಶೀಲರೂ ಪ್ರಸನ್ನ ಮಾನಸರೂ ಆಗಿದಾರೆ. ಗಾಂಧೀಜೀಯವರ ಸಾಮೀಪ್ಯದಲ್ಲಿ ನಡೆದು ನುಡಿದು ಅವರ ನಡೆ ನುಡಿಗಳನ್ನು ನೋಡಿ ಕೇಳಿ ಅವರ ಬಾಳನ್ನು ವರ್ಣಿಸಲು ಆವಶ್ಯಕವಾದ ವಿಷಯಸಂಗ್ರಹ ವನ್ನೂ ಮಾಡಿದ್ದಾರೆ. ಈ ಕಾರಣದಿಂದ ಇವರ ಈ ಗ್ರಂಥ ಮಹಾತ್ಮರ ಜೀವನದ ಅಂತಸ್ಸತ್ವವನ್ನೇ ತಿಳಿಸಿಕೊಡಬಲ್ಲದಾಗಿದೆ.

ಕೇವಲ ವಿಷಯದ ದೃಷ್ಟಿಯಿಷ್ಟರಿಂದಲೇ ಅಮೂಲ್ಯವಾಗಿ ಇರ ಬಹುದಾಗಿದ್ದ ಈ ಗ್ರಂಥ ಶ್ರೀ ಕೃಷ್ಣಶರ್ಮರ ಸಾಹಿತ್ಯ ಕೌಶಲದಿಂದ ಮತ್ತಷ್ಟು ಶ್ರೇಷ್ಠತೆಯನ್ನು ಪಡೆದಿದೆ. ಯಾವ ಸಾಹಿತ್ಯದಲ್ಲಿಯೂ ಗದ್ಯ ಅಥವಾ ವಚನ ಸಾಹಿತ್ಯ ಸಾವಕಾಶವಾಗಿಯೇ ಬರುತ್ತದೆ. ನಮ್ಮ ಸಾಹಿತ್ಯದ ಗದ್ಯರಚನೆ ಚಂಪೂಗ್ರಂಥಗಳ ಕಾಲದಿಂದಲೂ ವಾಡಿಕೆಯಲ್ಲಿ ಇದ್ದಿದೆಯಾದರೂ ಅದು ಬಹುಮುಖವಾದದ್ದು ಈಚೆಗೆ. ಬಹುಮುಖ ವಾದ ಕಾರಣದಿಂದ ನಮ್ಮ ಈಗಣ ಗದ್ಯಲೇಖನ ಬಹುವಿಧದ ಸೌಂದರ್ಯ ವನ್ನು ಬೆಳೆಸಿಕೊಂಡಿದೆ. ಶ್ರೀ ಕೃಷ್ಣಶರ್ಮರ ಈ ಗ್ರಂಥದ ಲೇಖನದಲ್ಲಿ ಅದು ವಿಚಿತ್ರವಾದ ಒಂದು ಸೌಂದರ್ಯವನ್ನು ಪಡೆದಿದೆಯೆಂದು ನನಗೆ ಕಾಣುತ್ತಿದೆ. ಶ್ರೀ ಶರ್ಮರವರು ಕಥನ ವರ್ಣನ ಟೀಕೆ ಇವನ್ನು ಯಾವುದೂ ಅತಿಯಾಗದಂತೆ ಒಂದು ಹದದಲ್ಲಿ ಬೆರೆಸಿ ಬರೆದಿರುವ ಈ ಗ್ರಂಥದ ರೀತಿ ಇಂಥ ಕೃತಿಗೆ ಚೆನ್ನಾಗಿ ಒಪ್ಪುವ ಅತ್ಯುತ್ತಮ ರೀತಿ. ಈ ವಿಷಯವನ್ನು ನಾನು ಬರೆಯುವುದಾಗಿದ್ದರೆ ಇಲ್ಲಿ ಅಲ್ಲಿ ಒಂದು ಮಾತು

# ಬಿನ್ನಹ

ಈ ಪುಸ್ತಕ ಬಯಲಿಗೆ ಬಂದುದರ ತಪ್ಪು ಎಲ್ಲವೂ ಶ್ರೀ ಬೇಂದ್ರೆಯವರದು. 'ವರ್ಧಾಯಾತ್ರೆ'ಗೆ ಮುನ್ನುಡಿಯನ್ನು ಬರೆದಾಗ ಅವರು ಅದನ್ನೇ ಹಿಗ್ಗಿಸಲು ಹೇಳಿದರು. ಕೊನೆಗೆ ಬೇರೆ ಪುಸ್ತಕವಾಗಿಯಾದರೂ ಬರೆಯಲು ಹೇಳಿದರು. ತಮ್ಮ ಅತೃಪ್ತಿಯನ್ನು ಆ ಮುನ್ನುಡಿಯಲ್ಲಿ ಆಡಿ ತೋರಿಸಿದರು. ಅವರು ಆ ಮಾತನ್ನೇ ನಾಲ್ಕಾರು ಸಲ ಒತ್ತಿ ಹೇಳಿರದಿದ್ದರೆ ಈ ಪುಸ್ತಕ ಬರೆಯಬೇಕಾದ ಸಂದರ್ಭ ಏನೂ ಇರಲಿಲ್ಲ. ಅಂತಲೇ ಆ ತಪ್ಪು ಏನಿದ್ದರೂ ಅವರದು. ನಾನು ನಿಮಿತ್ತಮಾತ್ರ.

'ಪರ್ಣಕುಟಿ'ಯನ್ನು ಓದಿ ಮುಗಿಸಿದ ಮೇಲೆ ಇದು ಗಾಂಧೀ ವಿಚಾರ ವಿಮರ್ಶೆಯೂ ಅಲ್ಲ, ಅದರ ದೋಹನವೂ ಅಲ್ಲ ಅನಿಸಬಹುದು. ಹಾಗೆ ಅನಿಸಿದರೆ ಅದು ಸರಿ. 'ಗಾಂಧೀದರ್ಶನ'ದ ಬಗ್ಗೆ ಬರೆಯುವ ಯೋಗ್ಯತೆ ನನ್ನದಲ್ಲ. ಕನ್ನಡನಾಡಿನಲ್ಲಿ ಗಾಂಧೀಜಿಯನ್ನು ಅರಿತು, ಅವರ ಧರ್ಮವನ್ನು ಅರಗಿಸಿಕೊಂಡ ಹಿರಿಯರು ಅನೇಕರು ಇದಾರೆ. ಆ ಕೆಲಸ ಅವರಿಗೆ ಸೇರಿದುದು. ಇದು ಬರೀ ಒಂದು ಚಿತ್ರ. ವರ್ಧಾಯಾತ್ರೆಯಲ್ಲಿ ಮೂಡಿದ್ದ ಚಿತ್ರವನ್ನೇ ಇಲ್ಲಿ ಅರಳಿಸಲಾಗಿದೆ. ವರ್ಧಾದಿಂದ ಇಲ್ಲಿ ಸೇವಾಗ್ರಾಮಕ್ಕೆ, ಪರ್ಣಕುಟಿಗೆ ಯಾತ್ರೆ ನಡೆದಿದೆ.

ಪರ್ಣಕುಟಿಯಲ್ಲಿ ನಾನು ಕಂಡುದು ಏನು ಎಂಬುದನ್ನು ಇಲ್ಲಿ ಚಿತ್ರಿಸಿಲ್ಲ. ಯಾತ್ರಿಕನಂತೆ ಆ ಸನ್ನಿವೇಶವನ್ನು ವರ್ಣಿಸಿಲ್ಲ. ಗಾಂಧೀಜಿಯನ್ನು ನಾನು ನೋಡಿದುದು ಅದೇ ಮೊದಲು ಅಲ್ಲ. ಇಪ್ಪತ್ತು ವರುಷದ ಹಿಂದೆಯೇ—೧೯೧೯ರಲ್ಲಿ—ಗಾಂಧೀಜೀ ಬೆಂಗಳೂರಿಗೆ ಬಂದಿದ್ದಾಗ ಶಾಲೆ ತಪ್ಪಿಸಿ ಎಷ್ಟೋ ಜನ ಮೈಸೂರಿಂದ ಬಂದಿದ್ದೆವು. ಆ ದಿನ ರಾತ್ರಿ ರೈಲಿನಲ್ಲಿ ನಾವು ಪಟ್ಟ ಉತ್ಸಾಹ; ಮರುದಿನ ದಂಡಿನಲ್ಲಿ ಸಭೆ ನಡೆದಾಗ ಮಹಾಕಾಯ ಷೌಕತ್ ಅಲಿಯೊಡನೆ ಈ ಇಲಿಯಂಥ ಮನುಷ್ಯ ಬಂದುದು; ರಪರಪ ಮಳೆ ಹೊಡೆಯುತ್ತಿದ್ದರೂ ಯಾರೂ ಕದಲದೆ ಕೂತು ಕೇಳಿದುದು—ಅಂಥದು ನಡೆದುದು ಅದೇ ಮೊದಲು ನಮಗೆ—; ಎಲ್ಲವೂ

ಕಣ್ಣಿಗೆ ಕಟ್ಟಿದಂತಿದೆ. ಅಲ್ಲಿಂದ ಮುಂದೆ ಗಾಂಧೀಕಿ ಜೈ ಎಂಬ ಕೂಗು ಕೇಳಿಸದ ಗಳಿಗೆಯೇ ಇಲ್ಲ.

ಮುಂದೆ ಪರದೇಶೀ ವಸ್ತ್ರದಹನದ ಉತ್ಸವಗಳಲ್ಲಿ, ಕಚೇರಿ ಶಾಲೆಗಳ ಬಹಿಷ್ಕಾರ–ರಾಷ್ಟ್ರೀಯ ಶಾಲೆಗಳ ಸ್ಥಾಪನೆಯಲ್ಲಿ, ೧೯೨೪ರ ಐತಿಹಾಸಿಕ ಸಂದರ್ಭದಲ್ಲಿ ಗಾಂಧೀಜಿಯ ಚಿತ್ರವೊಂದು ಮನಸಿನಲ್ಲಿ ಮೂಡುತ್ತ ಬಂತು. ಬೆಳಗಾವಿಯ ಕಾಂಗ್ರೆಸ್ಸು ಅದಕ್ಕೆ ಅಲ್ಲೊಂದು ಬಣ್ಣ ಇಲ್ಲೊಂದು ಬಣ್ಣ ಕೊಟ್ಟಿತು. ಆ ಬೆಳಕಿನಲ್ಲಿ ಗಾಂಧೀ ಸಾಹಿತ್ಯವನ್ನು ಓದುವ ಆಸೆ ಆಯಿತು. ಇದೆಲ್ಲದರ ಪರಿಣಾಮವನ್ನೂ 'ಪರ್ಣಕುಟಿ' ಯಲ್ಲಿ ಕಾಣಬಹುದು.

ಆದರೂ 'ಪರ್ಣಕುಟಿ' ಮುಖ್ಯವಾಗಿ ೧೯೩೮-೩೯ರಲ್ಲಿ ನನ್ನ ಮನಸ್ಸಿನಲ್ಲಿ ಮೂಡಿದ ಭಾವಗಳ, ಭಾವನೆಗೆ ಬಂದ ಬಣ್ಣಗಳ ಚಿತ್ರ. ಆಗ ನನ್ನದು ಬಲವಾದ ರಾಜಕೀಯ ಆಂದೋಳನ. ಹೈದರಾಬಾದಿನ ಆ ಪ್ರಕರಣ ಎಲ್ಲರಿಗೂ ತಿಳಿದಿದೆ. ಆ ಕಾರಣದಿಂದ ವರ್ಧಾಕ್ಕೆ ಹೋದರೂ ಹಿಂದಿನಿಂದ ಮನಸಿನಲ್ಲಿ ಮನೆಮಾಡಿಕೊಂಡಿದ್ದ ವಿಚಾರಭಾವಗಳನ್ನು ಮೊಲಕು ಹಾಕಬೇಕಾಯಿತು. ಆ ಪ್ರಯತ್ನದಲ್ಲಿ ಕಾಣಬಂದ ಚಿತ್ರಗಳಲ್ಲಿ ಇದು ಕೆಲವು ಗೆರೆ ಮಾತ್ರ.

ಗಾಂಧೀಜೀ ಅನಂತರೂಪಿ. ಅವರನ್ನು ಬೇರೆ ಬೇರೆಯಾಗಿ ಗುರುತಿಸಿಕೊಂಡವರಿದ್ದಾರೆ. ರಾಜಕಾರಣದಲ್ಲಿ ಸಲಹೆ ಕೇಳಲೆಂದೇ ಹೋಗಿದ್ದರೂ ಮನಸಿನಮೇಲೆ ಮುದ್ರಿತವಾದುದು ಅವರ ಧಾರ್ಮಿಕ ಜೀವನ, ಅವರ ಸಂಸ್ಕೃತಿ. ಪರ್ಣಕುಟಿಯ ಅಂಗಳದಲ್ಲಿ ನಡೆದ ಪ್ರಾರ್ಥನೆಯೇ ಆ ಗುಡಿಯ ಮಹಾದ್ವಾರ. ಅಲ್ಲಿಂದ ಒಳಹೊಕ್ಕು ವಿಶಾಲವಾದ ಪ್ರಾಕಾರದಲ್ಲಿ ಅಲೆದಾಡಿದೇನೆ. ಅಲ್ಲಿ ಕಂಡುಬಂದ ಬೇರೆ ಬೇರೆ ಪ್ರತಿಮೆಗಳನ್ನೂ ನೋಡಿದೇನೆ.

ಪ್ರಾರ್ಥನೆಯ ಬಲದಮೇಲೆ ನಿಂತ ಆ ಬಾಳಿನಲ್ಲಿ ದರಿದ್ರನಾರಾಯಣನೇ ಆರಾಧ್ಯದೇವತೆ. ಖಾದಿಯೇ ಆ ದೇವತೆಯ ಪೂಜಾವಿಧಾನ. ಆ ಪೂಜೆಯಲ್ಲಿ ಕಣ್ಣಿಗೆ ಸುಲಭವಾಗಿ ಕಾಣದ ಒಂದು ಸೊಬಗು ಇದೆ.

ಇದೇ ಸೊಬಗು, ಅದೇ ಸೊಗಸು ಎಂದು ಹೇಳಬಲ್ಲವರು ಯಾರು? ಹೀಗೆ ಆಲೋಚನೆ ಮಾಡುತ್ತ ಸೊಗಸು ಎಂಬುದರ ಮೂಲ ಏನು, ಗಾಂಧೀಜೀ ಅದಕ್ಕೆ ಏನು ಹೇಳುತ್ತಾರೆ–ಎಂದುಕೊಂಡಾಗ ಗಾಂಧೀಜಿಯ ಬಾಳಿನಲ್ಲಿ ನಿಜವಾದ ಕಲೆ ಇದೆ ಅನಿಸುತ್ತದೆ. ಆ ಅಂತಃಕರಣದ ರಸಿಕತೆ ಸತ್ಯದಲ್ಲಿ ಹುಟ್ಟಿ ಸತ್ಯದಿಂದ ಬೆಳೆದು ಬಂದುದು ಎಂಬುದು ಹೊಳೆಯುತ್ತದೆ.

ಹಾಗೆಯೇ ಕಲೆಯ ಕಣ್ಣಿಂದ ಗಾಂಧೀಜಿಯನ್ನು ನೋಡಿದರೆ ಉಳಿದ ಎಲ್ಲ ಪ್ರಕರಣಗಳೂ ತಿಳಿಯಾಗುತ್ತವೆ. ಆ ಕಲಾಪುರುಷನ ಬದುಕು ಮಾನವ ಸಂಬಂಧಗಳಲ್ಲಿ – ಹೆಂಗುಸರೊಡನೆ ಮಕ್ಕಳೊಡನೆ, ತನ್ನ ಕುಟುಂಬದೊಡನೆ–ಹೇಗೆ ರೂಪುಗೊಂಡಿದೆ; ಹೇಗೆ ಆ ರೀತಿಯಲ್ಲಿ ಒಂದು ಉಚ್ಚ ಸಂಸ್ಕೃತಿ, ಆಳವಾದ ಸಿದ್ಧಾಂತ ಇದೆ ಎಂಬುದು ಅರ್ಥವಾಗುತ್ತದೆ.

ಆ ಕಲೆಗೆ, ಆ ಸಾಹಿತ್ಯಕ್ಕೆ, ಆ ವಿನೋದಧ ರುಚಿಗೆ, ಆ ಸಲಿಗೆಯ ಸ್ವಭಾವಕ್ಕೆ, ವಿಶ್ವಕುಟುಂಬದ ಭಾವನೆಗೆ–ಎಲ್ಲಕ್ಕೂ ಆ ಸತ್ಯದೃಷ್ಟಿಯೇ ಆಧಾರ. ಎಲ್ಲಕ್ಕೂ ಸತ್ಯಶೋಧನೆಯ ಹದ ಇದೆ. ಕಸ್ತೂರಬಾನೊಡನೆ ಅವರು ನಡೆಸಿದ ಸಂಸಾರದಲ್ಲಿಯೂ ಅದೇ ಹೆಜ್ಜೆ. ದರಿದ್ರನಾರಾಯಣ ಅವರ ವ್ಯವಹಾರ ದೇವತೆಯಾದರೆ ಸತ್ಯನಾರಾಯಣ ಅವರ ಅಂತರಂಗದ ಇಷ್ಟದೇವತೆ.

ಆ ದೇವತೆಯ ಕಲ್ಪನೆ ಅವರಿಗೆ ಸ್ಪಷ್ಟವಾಗಿದೆ. ಅದರ ಸ್ಥಿರವಾದ ಅರಿವೇ ಅವರ ಕೈದೀಪ. ತಮ್ಮ ಗುರಿ, ತಮ್ಮ ಸಾಧನೆಯ ಹಾದಿ ಎಲ್ಲಾ ಅದೇ. ಆ ಸತ್ಯದ ಬೆಳಕು ಅವರಿಗೆ ಗೀತೆಯಲ್ಲಿ ನಂದಾದೀಪವಾಗಿ ಸದಾ ಕಾಣಬರುತ್ತಿದೆ. ಗೀತೆಯನ್ನು ಅವರು ಅಷ್ಟು ಬಲವಾಗಿ ನಂಬಿದಾರೆ.

ಹೀಗಾಗಿ 'ಪರ್ಣಕುಟಿ'ಯ ಈ ಕೆಲವು ಗೆರೆಗಳ ಮಸಕು ಚಿತ್ರದಲ್ಲಿ ಕಾಣುವ ವ್ಯಕ್ತಿತ್ವ ಸತ್ಯಾರಾಧಕನಾದ ಒಬ್ಬ ಮಹಾಕವಿಯದು, ಕಲರಸಿಕನದು. ಆತನ ರಾಜಕೀಯ ಸಿದ್ಧಾಂತಗಳ ಚರ್ಚೆಯ ಗೋಜಿಗೆ ಹೋಗಿಲ್ಲ. ಆ ಉದ್ದೇಶವೂ ಇಲ್ಲ.

ಅಂತಲೇ ಈ ಪುಸ್ತಕವನ್ನು ಓದುವವರು ಇದರಲ್ಲಿ ನಾನು ವರ್ಧಾದಲ್ಲಿ ಕಳೆದ ಕಾಲದ ದಿನಚರಿಯೆಂದಾಗಲಿ, ಪ್ರವಾಸ ಸಾಹಿತ್ಯವೆಂದಾಗಲಿ ತಿಳಿದು ಓದಬಾರದು. ವರ್ಧಾಯಾತ್ರೆಯೂ ಅಷ್ಟೆ. ಪ್ರವಾಸಸಾಹಿತ್ಯವೆಂದು ನಾನು ಬರೆದಿಲ್ಲ. ಯಾತ್ರಿಕನಂತೆ ಓಡಾಡಿ ಕಣ್ಣಿಗೆ ಬಿದ್ದ ಚಿತ್ರಗಳನ್ನು ಚಿತ್ರಿಸಿಲ್ಲ. ಪರ್ಣಕುಟಿಯಲ್ಲಿಯೂ ಗಾಂಧೀಜಿಯ ವಿಚಾರ ಸಂಗ್ರಹದ ಆಸೆಯಿಲ್ಲ. ವಿಮರ್ಶೆ ಮಾಡುವ ಚಪಲವೂ ಇಲ್ಲ. ಎರಡರಲ್ಲಿಯೂ ನನ್ನ ಮನಸನ್ನೇ ಬಯಲಿಗೆಳೆದು ಓದುಗರ ಕಣ್ಣೆದಿರು ಒಡ್ಡಿದೇನೆ.

ಹಿರಿಯರಾದ ಮಾಸ್ತಿಯವರು ಕನ್ನಡದ ಕಿರಿಯರಿಗೆ ಅನೇಕ ರೀತಿಗಳಲ್ಲಿ ದೊಡ್ಡ ನಿಧಿ. ಅವರು ಮುನ್ನುಡಿಯ ಕುಂಕುಮವನ್ನು ಇಟ್ಟರೆ ಕಾವ್ಯಕನ್ಯೆ ದೀರ್ಘಸುಮಂಗಲಿಯಾಗುತ್ತಾಳೆ. ಆ ಕೈಗುಣ ಅವರಲ್ಲಿದೆ. ಆ ಹರಕೆ ಹಿರಿಯ ಮನಸ್ಸಿನದು. ಅದರ ಸಾಫಲ್ಯ ಆ ಮನಸಿನ ಗುಣ. ಅಂಥವರು ಈ ಪುಸ್ತಕಕ್ಕೆ ಮುನ್ನುಡಿ ಬರೆಯಲೊಪ್ಪಿದುದು ನನ್ನ ಭಾಗ್ಯ. ಇದಕ್ಕೂ ಗೆಳೆಯ ಬೇಂದ್ರೆಯವರೇ ಕಾರಣ. ಇಬ್ಬರಿಗೂ ನಾನು ಕೃತಜ್ಞ.

ಗೆ. ಚುಳಕಿ ಗೋವಿಂದರಾಯರು ತಮ್ಮ ಎಲ್ಲ ಕೆಲಸದಲ್ಲಿಯೂ ತೆರವು ಮಾಡಿಕೊಂಡು ಆದರದಿಂದ ಕರಡು ತಿದ್ದಿದಾರೆ. ಗೆಳೆಯ ಕುಲಕರ್ಣಿ ಶೇಷಗಿರಿರಾಯರು ಎರಡೂ ಪುಸ್ತಕಗಳನ್ನು ಪ್ರಕಟಿಸುವ ಭಾರ ಹೊತ್ತು ನನ್ನ ಕೆಲಸ ತುಂಬಾ ಹಗುರಮಾಡಿದಾರೆ. ಕನ್ನಡದಲ್ಲಿ ಪುಸ್ತಕಪ್ರಕಟನ ಕಾರ್ಯ ಎಷ್ಟು ಅನರ್ಥಕಾರಿ ಎಂಬುದನ್ನು ಅರಿತ ನಾನು ಆ ಗೆಳೆತನಕ್ಕೆ ಕೃತಜ್ಞನಾಗದಿರುವುದು ಹೇಗೆ?

**ಕೃಷ್ಣಶರ್ಮ**

ಉಬ್ಬರದಲ್ಲೂ ಇಳಿತದಲ್ಲೂ
ಜೊತೆಗೇ ತೇಲುತ್ತ
ಸವಿಗೊಡುವ ಸಂಗಾತಿ
**ಪ್ರಮೀಲಾಗೆ**

## ಇದೇ ಗ್ರಂಥಕರ್ತರಿಂದ

| | | |
|---|---|---|
| ವರ್ಧಾಯಾತ್ರೆ | ... | ೧—೦—೦ |
| ದೀಪಮಾಲೆ | ... | ೧—೦—೦ |
| ಕನ್ನಡದ ಕಿಡಿಗಳು | ... | ೦—೮—೦ |
| ನಿರ್ಭಾಗ್ಯ ಬೋರೇಗೌಡ | ... | ೦—೪—೦ |
| ದಕ್ಷಿಣದ ಇತಿಹಾಸ | ... | ೦—೬—೦ |
| ಯತಿರಾಜ ರಾಮಾನುಜ | ... | ೦—೩—೦ |



## ಭಾರತೀಯ ಕಥಾವಳಿ

[ಹಿಂದುಸ್ತಾನದ ಬೇರೆ ಬೇರೆ ಪ್ರಾಂತೀಯ ಭಾಷೆಗಳ ಕಥಾಸಂಗ್ರಹಗಳು.]

| | | |
|---|---|---|
| ತೆಲುಗಿನ ಕತೆಗಳು | ... | ೦—೮—೦ |
| ಆಸಾಮೀ ಕತೆಗಳು | ... | ೦—೮—೦ |
| ತಮಿಳು ಕತೆಗಳು | ... | ೦—೮—೦ |

(ಅಚ್ಚಿನಲ್ಲಿ)

ಮಲಯಾಳೀ ಕತೆಗಳು
ಗುಜರಾತೀ ಕತೆಗಳು
ಉರ್ದೂ ಕತೆಗಳು
ಹಿಂದೀ ಕತೆಗಳು
ಮರಾಠೀ ಕತೆಗಳು
ಬಂಗಾಲೀ ಕತೆಗಳು
ಕನ್ನಡ ಕತೆಗಳು
ಭಾರತೀಯ ಕತೆಗಳು

ದೊರೆಯುವ ಸ್ಥಳ

**ಸಾಧನ ಮುದ್ರಣಾಲಯ ಧಾರವಾಡ**



ಸೇವಾಗ್ರಾಮದ ಆಶ್ರಮ

# ಪರ್ಣಕುಟಿ

ಗಾಂಧೀಜೀ ಎಂದರೆ ಒಬ್ಬ ವ್ಯಕ್ತಿಯಲ್ಲ. ಅದು ಒಂದು ಪಂಥ. ಶಿಲ್ಪದಲ್ಲಿ ಜಕಣಾಚಾರಿ ಇದ್ದ ಹಾಗೆ. ಜಕಣಾಚಾರಿ ಎಂಬ ಒಬ್ಬ ವ್ಯಕ್ತಿ ಇದ್ದಿರಬಹುದು. ನಮಗೆ ಆ ನಾಮರೂಪಗಳಲ್ಲಿ ಈಗ ರುಚಿಯಿಲ್ಲ. ಜಕಣಾಚಾರಿ ಶಿಲ್ಪದ ಒಂದು ಹಾದಿ.

ಗಾಂಧೀಜಿಯ ವ್ಯಕ್ತಿಯನ್ನೂ ವರ್ಣಿಸುವುದು ಕಷ್ಟವಲ್ಲ. ಅದರ ಅಗತ್ಯವೂ ಕಡಮೆ. ನಮ್ಮ ದೇಶದಲ್ಲಿ ಕೋಟ್ಯಾನುಕೋಟಿ ಜನ ಅವರನ್ನು ಪ್ರತ್ಯಕ್ಷವಾಗಿ ನೋಡಿದಾರೆ. ಅವರ ಹಾಗೆ ಹಿಂದುಸ್ತಾನದ ಹಳ್ಳಿಗಳನ್ನು ತಿರುಗಿದವರು ಯಾರೂ ಇಲ್ಲ. ಕೋಟಿ ಗುಡಿಸಿಲಲ್ಲಿ ಅವರ ಚಿತ್ರ ಇದೆ. ಕೋಟಿ ಬಾಯಲ್ಲಿ ಮಹಾತ್ಮಾಗಾಂಧೀಕಿ ಜೈ ಎಂಬ ಹರಕೆ ಸದಾ ಕೇಳಿಸುತ್ತದೆ. ದೊಡ್ಡ ದೊಡ್ಡ ಸಭೆಗಳಲ್ಲಿ ಲಕ್ಷೋಪಲಕ್ಷ ಜನ ಗಾಂಧೀಜಿಯ ಬರವಿಗಾಗಿ ಕಣ್ಣಲ್ಲೇ ಜೀವತುಂಬಿಕೊಂಡು ಕೂತಿರುತ್ತಾರೆ. ಆ ಉತ್ಸಾಹದಲ್ಲಿ ಅವರ ಉಸಿರೇ ನಿಂತ ಹಾಗೆ ಇರುತ್ತದೆ. ಮಾತು ಆ ಭಾವಕ್ಕೆ ಭಂಗ. ನಿಶ್ಯಬ್ದವಾಗಿ ಗಳಿಗೆಯೊಂದು ಯುಗದಂತೆ ಮನಸ್ಸೆಲ್ಲ ಬರಿದುಮಾಡಿ ಕುಳಿತಿರುತ್ತಾರೆ. ಇದೇನು? ಜನವೆಲ್ಲ ಒಂದೇ ಮೈಯ ಹಾಗೆ ಎದ್ದು ನಿಂತರು. ಓಹೋ! ಗಾಂಧೀಜೀ ಬಂದರು, ಬಂದರು ಎನ್ನುವುದರೊಳಗಾಗಿ ಬಂದೇ ಬಿಟ್ಟರು.

ಮಾತಾಡಿದೇನೆ'–ಎಂದರು ಇವರು. ಅವನ ಸಂತೋಷಕ್ಕೆ ಪಾರವೇ ಇಲ್ಲವಾಯಿತು. 'ಹೋ! ಗಾಂಧಿಯನ್ನು ನೋಡಿ ಮಾತಾಡಿಸಿದವರನ್ನು ಒಬ್ಬರನ್ನು ನಾನು ನೋಡಿದ್ದೆ ಎಂತ ಎಲ್ಲರಿಗೂ ಹೇಳಬಹುದು'–ಎಂದು ಹೇಳಿದ.

ವ್ಯಕ್ತಿಮಾತ್ರಕ್ಕೆ ಈ ಗೌರವ ಸಾಧ್ಯವಲ್ಲ. ಅಂತಲೇ ಗಾಂಧೀಜೀ ಒಂದು ಪಂಥ ಎಂಬುದು. ಆದರೂ ಗಾಂಧೀಜಿಯನ್ನು ವ್ಯಕ್ತಿ ಎಂಬ ಬೆಳಕಿನಲ್ಲಿ ಅರಸದೆ ಇದ್ದರೆ ಆ ಪಂಥವೂ ಕೈಜಾರಿ ಹೋದೀತು. ಆ ಪಂಥದ ಒಳಬೆಳಕು ಪರಿಶುದ್ಧ; ಅದರಲ್ಲಿ ಮಾನವತ್ವ ತುಂಬಿದೆ ಎಂಬುದು ತಿಳಿಯುದಾದೀತು. ಆ ಎರಡೂ ಮಾತು ಒಂದರ ಹೊರಮೈ–ಒಳಮೈ; ಬೇರೆ ಬೇರೆ ಅಲ್ಲ.

ಗಾಂಧೀಜಿಯನ್ನು ಹೀಗೆ, ಅವರು ಇಂಥವರು ಎಂದು ಹೇಳಲು ಯಾರಿಗಾದರೂ ಎದೆ ಬಹಳ ಬೇಕು. ಅವರನ್ನು ನೆನೆದರೆ ಬೇರೆ ಬೇರೆ ಚಿತ್ರ ಕಣ್ಣ ಮುಂದೆ ನಿಂತಾವು. ನಾನಾ ಭಾವ ಮನಸಿನಲ್ಲಿ ಮೂಡಿಯಾವು. ಸರೋಜಿನೀದೇವಿ ಹೇಳಿದ ಹಾಗೆ ಗಾಂಧೀಜೀ ಬಹುರೂಪಿ. ಕೆಲವರಿಗೆ ನಗೆಗಾರ ಗಾಂಧಿ ನೆನಪಾದರೆ ಕೆಲವರಿಗೆ ಹಟಗಾರ ಗಾಂಧಿಯ ನೆನಪಾಗುತ್ತದೆ. ಒಬ್ಬರಿಗೆ ಗಾಂಧೀ ಶುದ್ಧ ಬೈರಾಗಿ. ಇನ್ನೊಬ್ಬರಿಗೆ ಉತ್ತಮ ಗೃಹಸ್ಥ. ಚಾಣಾಕ್ಷ ರಾಜಕಾರಣಿ ಎಂದು ಕೆಲವರಿಗೆ. ಖಾದೀ ಗೊಡ್ಡು ಎಂದು ಕೆಲವರಿಗೆ. ಜಗದ್ವಂದ್ಯ ಕರ್ಮಯೋಗಿ ಎಂದು ಕೆಲವರಿಗೆ ಅನಿಸಿದರೆ ಬರೀ ಹುಚ್ಚು ಎಂದು ಕೆಲವರು ತಿಳಿದಿದಾರೆ. ಒಬ್ಬೊಬ್ಬರದು ಒಂದು ನೋಟ. ಎಲ್ಲರೂ ಆನೆಯನ್ನು ಮುಟ್ಟಿದವರೇ.

ಆ ಮಹಾಜೀವ ನಡೆದ ಹಾದಿಯೂ ಅಷ್ಟೇ; ಒಂದು ಚಳುವಳಿಯಲ್ಲ, ಒಂದು ಕೆಲಸವಲ್ಲ, ಕಡೆಗೆ ಒಂದು ದೇಶವೂ ಅಲ್ಲ. ಸಾಧನೆಯ ಮಾರ್ಗವೂ ಎಂಥದು? ಒಂದು ಖಾದೀಯೆ; ಒಂದು ಹರಿಜನ ಸೇವೆಯೆ; ಅಸಹಕಾರವೆ, ಶಾಸನೋಲ್ಲಂಘನವೆ; ಸಹಕಾರವೆ, ಶಾಸನನಿರ್ಮಾಣವೆ;

ಬಹಿಷ್ಕಾರವೆ, ಉಪವಾಸವೆ? ಬ್ರಹ್ಮಚರ್ಯವೆ, ಭಕ್ತಿಯೆ? ಒಂದು ವಿಧವಲ್ಲ, ಒಂದು ರೂಪವಲ್ಲ. ಒಂದು ದಿನ ದಂಡಧಾರಿಯಾಗಿ ಸೀತಾವಿವೋಚನೆಗಾಗಿ ಹೊರಟ ರಾಮನಂತೆ ಸತ್ಯಾಗ್ರಹಿಗಳ ಗುಂಪಿನೊಡನೆ ದಂಡೀಯಾತ್ರೆಗೆ ಹೊರಟರು. ಇನ್ನೊಂದು ಹೊತ್ತಿನಲ್ಲಿ ಪರದೇಶೀ ಬಟ್ಟೆಗಳನ್ನು ರಾಶಿ ಹಾಕಿಸಿ ಸುಡುತ್ತ ಊರಿಂದೂರಿಗೆ ಲಂಕಾದಹನದ ಕಥೆ ನೆನಪಿಗೆ ತರುತ್ತ ತಿರುಗಾಡಿದರು. ಬಡವರನ್ನು ತಲೆಯ ಮೇಲೆ ಹೊತ್ತು ದರಿದ್ರ ನಾರಾಯಣನನ್ನು ಪೂಜಿಸಿದರು. ಶ್ರೀಮಂತರ ಬೆನ್ನು ತಟ್ಟಿ ಸತ್ಯದ ಹಾದಿಗೆ ಎಳೆದು ಲಕ್ಷ್ಮೀನಾರಾಯಣನನ್ನು ಗುರುತಿಸಿದರು.

ಇಂಥ ಜೀವಿಯ ಸನ್ನಿಧಿಯಲ್ಲಿ ಹಿಂದುಸ್ತಾನಕ್ಕೆ ಹಿಂದುಸ್ತಾನವೇ ತಲೆಬಾಗಿ ನಿಂತಿರುವುದರಲ್ಲಿ ಏನು ಆಶ್ಚರ್ಯ? ಹಿಂದುಸ್ತಾನಕ್ಕೂ ಗಾಂಧೀಜಿಗೂ ಒಂದು ವಿಲಕ್ಷಣ ಸಂಬಂಧ ಬೆಳೆದಿದೆ. ಮಾತೇ ಇಲ್ಲದೆಯೆ ಭಾವ ಅರಿತುಕೊಳ್ಳುವ ಬಲ ಎರಡೂ ಕಡೆಯಲ್ಲೂ ಇದೆ. ಅದರ ಪರಿಣಾಮ ಗಾಂಧೀಜೀ ಅಂದರೆ ಹಿಂದುಸ್ತಾನ, ಹಿಂದುಸ್ತಾನ ಅಂದರೆ ಗಾಂಧೀಜೀ ಎಂಬ ಹಾಗೆ ಆಗಿದೆ.

ಗಾಂಧೀಜಿಯ ಈ ಅವರ್ಣನೀಯ ಪ್ರಭಾವವನ್ನು ನೆನದರೆ ಒಂದು ಚಿತ್ರ ಕಣ್ಣಿಗೆ ಕಟ್ಟಿ ನಿಲ್ಲುತ್ತದೆ. ಅವರ ಜೀವನದ ಈ ವಿಲಕ್ಷಣ ಶಕ್ತಿಯ ನೆಲೆ ಎಲ್ಲಿದೆ ಎಂಬ ವಿಚಾರ ಒಂದಾಗ ಒಂದು ನೋಟ ನೆನಪಿಗೆ ಬರುತ್ತದೆ. ಗಾಂಧೀಜಿಯ ಹೆಸರನ್ನು ಕೇಳಿದರೆ ಸಾಕು. ನೂರಾರು ಮೈಲು ದಾಟಿ ಆ ಧ್ವನಿ ಕೇಳಿಬರುತ್ತಿದೆ.

ಒಂದೇ ಮನಸ್ಸಿನಿಂದ ಅಖಂಡ ಶ್ರದ್ಧೆಯಿಂದ ಗುಂಪಿಗೆ ಗುಂಪೇ ರಾಮಧುನ್ ಹಾಡುತ್ತಿದಾರೆ. ರಾಮನಾಮವು ಕಡಲಿನ ತೆರೆಗಳಂತೆ ಉಕ್ಕಿ ಬರುತ್ತಿದೆ. ಪರಿಮಳ ಗಾಳಿಯಲ್ಲಿ ಹರಡಿದಂತೆ ಸುತ್ತಲಿನ ಬಯಲಲ್ಲಿ ನವಿಯಾಗಿ ಕರಗಿ ಹೋಗುತ್ತಿದೆ. ಯಜ್ಞನಾರಾಯಣನ ಕುಡಿಗಳು ಮೇಲೇರಿ ಹೋಗುವಂತೆ ಮುಗಿಲಿನ ಕಡೆ ಸಾಗಿ ಹೋಗುತ್ತಿದೆ. ನಸುಕಿನ ಕತ್ತಲು. ಮೇಲೆ ಕಾಣುವ ಚಿಕ್ಕೆಗಳ ಬೆಳಕಿನಲ್ಲಿ ಮೋರೆ ಅಸ್ಪಷ್ಟ

ವಾಗಿವೆ. ಜಗತ್ತಿಗೆ ಜಗತ್ತೇ ನಿಶ್ಶಬ್ದವಾಗಿದೆ. ಸಾವಿನಲ್ಲೂ ಜೀವ ಕೂಸರಿ ಸಿಲ್ಲುವ ಹಾಗೆ ಸರ್ವವ್ಯಾಪಿಯಾದ ಮೌನದಲ್ಲಿ ಈ ರಾಮನಾಮ.

ಪಕ್ಕದಲ್ಲೇ ಪರ್ಣಕುಟಿ. ಸುತ್ತಲೂ ಶಿಷ್ಯವರ್ಗ—ಅಥವಾ ಜೊತೆಗಾರರು. ನಡುವೆ ಪದ್ಮಾಸನದಲ್ಲಿ ಬಾಪೂಜಿ. ಆಶ್ರಮದ ಗುಡಿಸಲಾಗಲಿ ದೂರದ ಗಿಡಮರಗಳಾಗಲಿ ಕಾಣವು. ಗಾಂಧೀಜಿಯ ಮೋರೆ ಪೂರಾ ಅರಳಿದ ಕಮಲದ ಹೂವಿನಂತೆ ವರ್ಣಿಸಲು ಬಾರದ ಒಂದು ಆನಂದದಿಂದ ತುಂಬಿದೆ. ಪ್ರಕಾಶಮಾನವಾದ ವಿದ್ಯುದ್ದೀಪದ ಬೆಳಕಿನ ಕಾಂತಿ ಸುತ್ತಲೂ ಹರಡಿದಂತೆ ಆ ಆನಂದದ ತೆರೆಗಳು ಸುತ್ತಲೂ ಹೊಳೆಹೊಳೆವ ರೂಪಿನಿಂದ ಹರಿದಿವೆ. ಅಲ್ಲಿ ನೆನಪು-ತಿಳಿವು ಇದ್ದೂ ಇಲ್ಲದಂತೆ ಕರಗಿ ಹೋಗಿದೆ. ಆಟವಾಡಿ ಸೋತು ನಿದ್ದೆಗೆ ಬಂದ ಮಗುವಿನ ಮೈಮೇಲೆ ತಾಯಿ ಹೊದಿಸಿದ ತನ್ನ ಸೆರಗಿನಂತೆ ಅಖಂಡ ಶಾಂತಿಯು ಒಂದು ಭಾವ ತುಂಬ ಕವಿದಿದೆ.

ನೂರಾರು ಮೈಲು ದಾಟಿ ಈಗಲೂ ಕೇಳಿಸುತ್ತಿದ್ದ ಹಾಗೆ ಆಗಿಸುತ್ತದೆ. ಅದೇ ಧ್ವನಿ. ಅದೇ ಗಾಂಭೀರ್ಯ.

'ರಘುಪತಿ ರಾಘವ ರಾಜಾರಾಂ
ಪತಿತ ಪಾವನ ಸೀತಾರಾಂ'

## ತಳಹದಿ

‘ದಿನಾಲೂ ಪ್ರಾರ್ಥನೆ ಭಗವದ್ಗೀತೆಯ ಪಾರಾಯಣಗಳಿಂದ ದಿನಗೆಲಸ ಮೊದಲು ಮಾಡುತ್ತಾರೆ’—ಎಂದು ಗಾಂಧೀಜಿಯ ತಪ್ಪುಗಳನ್ನು ಎಣಿಸುತ್ತ ಜಿನ್ನಾ ಸಾಹೇಬರು ಮೊನ್ನೆ ಮೊನ್ನೆ ಹೇಳಿದರು. ಗಾಂಧೀಜಿಯ ತಪ್ಪೊಪ್ಪುಗಳ ನಿರ್ಣಯ ಮಾಡಲು ಜಿನ್ನಾ ಸಾಹೇಬರೇ ಶಕ್ತರು. ನಮಗೆ ಕಾಣುವುದು ಇಷ್ಟು. ಪ್ರಾರ್ಥನೆ ಆ ಪಟ್ಟಿಯಲ್ಲಿದೆ. ಗಾಂಧೀಜಿಯ ಮುಖ್ಯ ಅವಗುಣಗಳಲ್ಲಿ–ಚಾಳಿಗಳಲ್ಲಿ–ಪ್ರಾರ್ಥನೆಯೂ ಒಂದು.

ಪ್ರಾರ್ಥನೆ ಇಲ್ಲದೆ ಗಾಂಧೀಜಿಗೆ ದಿನ ಬೆಳಗಾಗುವುದಿಲ್ಲ. ಒಂದು ದಿನ ಕೋಳಿ ಕೂಗದೆ ಬಿಟ್ಟರೂ ಬಿಟ್ಟೀತು. ಗಾಂಧೀಜಿಯ ಪ್ರಾರ್ಥನೆ ಮಾತ್ರ ನಿಲ್ಲಲಾರದು. ಬೆಳಕು ನೆಳಲುಗಳಂತೆ ಪ್ರಾರ್ಥನೆ ಕರ್ಮಗಳು ಅವರ ಜೀವನದಲ್ಲಿ ಒಂದನ್ನೊಂದು ಎಡಬಿಡದೆ ಅನುಸರಿಸುತ್ತವೆ. ಅವರ ಎಲ್ಲ ಕರ್ಮದ ತಳಹದಿ–ತುದಿ ಪ್ರಾರ್ಥನೆಯೆ. ಅರಿತು ಮಾಡಿದ ಕರ್ಮ, ಅನಾಸಕ್ತ ಕರ್ಮ ಪ್ರಾರ್ಥನೆಯೆಂದೇ ಅವರ ನಂಬಿಗೆ. ಪ್ರಾರ್ಥನಾ ಬಲವೇ ಅವರಿಗೆ ಚರಮ ಬಲ.

ಪ್ರಾರ್ಥನೆಯಲ್ಲೇನಿದೆ? ಬರೀ ಮೂಢ ಸಂಪ್ರದಾಯ. ಆಸ್ತಿಕರು ಮಾಡಿದ ಒಂದು ಕುಹಕ ಎಂಬವರುಂಟು. ಅವರಿಗೆ ಪ್ರಾರ್ಥನೆ ಅರ್ಥವಿಲ್ಲದ ಸುಳ್ಳು ವೇಷವಾಗಿ ತೋರುತ್ತದೆ. ಗಾಂಧೀಜಿಗೆ ‘ಪ್ರಾರ್ಥನೆಯೇ

ಸತ್ಯ, ಉಳಿದುದೆಲ್ಲ ಅಸತ್ಯ ಎಂದರೂ ಅತಿಶಯೋಕ್ತಿಯಾಗಲಾರದು. ಸ್ತುತಿ ಪ್ರಾರ್ಥನೆ ಧ್ಯಾನ–ಇವು ಕುರುಡು ನಂಬಿಗೆಯಲ್ಲ. ಅನ್ನ ನೀರಿಗಿಂತ, ಕೂಡುವುದು–ಓಡಾಡುವುದಕ್ಕಿಂತ ಹೆಚ್ಚಿನ ಸತ್ಯ.' ಅದು ಕುಹಕವೂ ಅಲ್ಲ ಕಪಟವೂ ಅಲ್ಲ. 'ಪ್ರಾರ್ಥನೆ ಬಿಕ್ಕೆ ಬೇಡುವುದಲ್ಲ. ಅದು ಆತ್ಮದ ಕಾಮನೆ. ನಮ್ಮ ದೌರ್ಬಲ್ಯ ಅಸಹಾಯತೆಗಳ ನೆನಪು. ನಾವು ಜೇನೆ ಮುಪ್ಪು ಮುಂತಾದವು ಶ್ರೇಷ್ಠಾತಿಶ್ರೇಷ್ಠರಿಗೂ ಕೂಡ ಅನರ–ನಮ್ಮ ಅಲ್ಪತ್ವವನ್ನು ಯಾವಾಗಲೂ ನೆನಪು ಮಾಡುತ್ತವೆ. ನಾವಿನ ನಡುವೆ ನಾವು ಬದುಕುತ್ತಿದೇವೆ. ಕಣ್ಣು ಮುಚ್ಚಿ ತೆಗೆಯುವುದರೊಳಗಾಗಿ ನಾವು ಮಾಡಿದುದೆಲ್ಲ ಮಣ್ಣುಪಾಲಾಗುತ್ತಿದೆ. ಇದ್ದಕ್ಕಿದ್ದಂತೆಯೇ ನಮಗೆ ತಿಳಿಯುವ ಮೊದಲೆ ನಾವೆ ಹೋಗಿಬಿಡುತ್ತೇವೆ. ಹಣವಂತರಿಗೆ ಹಣ ಕೊಡಬಹುದಾದ ಸಕಲ ಸುಖವೂ ಉಂಟು; ಅಭಿಮಾನ ನೀಡಬಹುದಾದ ಸಕಲೋಪಚಾರವೂ ಉಂಟು; ಆದರೇನು? ಎಂಥ ಲಕ್ಷ್ಮೀಕುಮಾರ ರಿಗೂ ಮಹಾಸಂಕಟದ ಗಳಿಗೆ ಇವೆ. ಆಗ ಅವರಿಗೂ ಬಾಳು ಬೇಸರ ವಾಗುತ್ತದೆ. ಅಂಥ ಗಳಿಗೆಯಲ್ಲಿಯೇ ನಮಗೆ ದೇವರ ಅರಿವು ಆಗುವುದು. ನಮ್ಮ ಬದುಕಿನ ಆಡಿಯುಡಿಯನ್ನು ತೋರಿಸುತ್ತ ನಡೆಸುವವನ ನೆನಪು ಆಗುವುದು. ಅದೇ ಪ್ರಾರ್ಥನೆ! ಸಂಕಟ ಬಂದರೆ ವೆಂಕಟರಮಣ ಅಲ್ಲವೆ?

ಅಂಥ ಪರೀಕ್ಷಾ ಸಮಯದಲ್ಲಿ ಭಕ್ತಿ ಪ್ರಪತ್ತಿಗಳು ನಮ್ಮ ಈಸು ಗುಂಬಳಕಾಯಿ. 'ಆಗ ಎಲ್ಲವು ಬೆಳ್ಳಂಬೆಳಕು. ಯಾವುದೂ ನಾಶವಾ ಗದು. ನಾಶವೆಂಬುದು ಬರೀ ತೋರಿಕೆ. ಆಗ ನಾವು ನಾಶಗಳು ಸುಳ್ಳು ಎಂಬುದು ತಿಳಿದೀತು' ಆದರೆ ಭಕ್ತಿ ಪ್ರಪತ್ತಿಗಳು ಪಾಂಡಿತ್ಯದಲ್ಲಿ ಇಲ್ಲ, ಬುದ್ಧಿಯಲ್ಲಿಯೂ ಇಲ್ಲ. 'ಪಾಂಡಿತ್ಯ ವೇದಾಂತಗಳು ಸಮಯದಲ್ಲಿ ನೆರ ವಾಗಲಾರವು. ಅವು ಒಡಕು ಈಸುಗುಂಬಳ. ಬೇಕಾದ ಹಾಗೆ ನಾವು ಶಾಸ್ತ್ರಗಳ ಚರ್ಚೆ ಮಾಡಬಹುದು, ವಾದಿಸಬಹುದು. ನಡುನೀರೊಳಗೆ ಇಳಿದಾಗ, 'ಕುತ್ತು ಬಂದು ಇದಿರಿಗೆ ಕೂತಾಗ ಹುಡುಗರಂತೆ ಆಡು ತ್ತೇವೆ, ಅಳುತ್ತೇವ, ಬೇಡುತ್ತೇವೆ; ನಮ್ಮ ಬುದ್ಧಿ ಎಳ್ಳಷ್ಟೂ ಕೆಲಸಕ್ಕೆ

ಬರುವುದಿಲ್ಲ.' ಬರೀ ಬುದ್ಧಿ ಸಾಲದು. ಬುದ್ಧಿಗೆ ಮೀರಿದ ಆತ್ಮಜ್ಞಾನವು ಬೇಕು. ಅದೇ ನಿಜವಾದ ಸಮಾಧಾನ! *

ಅಂತಲೇ ಉಪಾಸನೆ ಪ್ರಾರ್ಥನೆಗಳು ಬರಿಯ ಮಾತಿನ ಮಾಲೆಯಲ್ಲ. 'ವಾಣೀ ವೈಭವವಲ್ಲ. ಅದರ ಹುಟ್ಟು ನಾಲಗೆಯಲ್ಲಿಲ್ಲ, ಹೃದಯಾಂತರಾಳದಲ್ಲಿ. ಹೃದಯದ ಮೈಲಿಗೆಯೆಲ್ಲ ತೊಳೆದು ಭಕ್ತಿಯನ್ನು ತುಂಬಿ ಪರಿಶುದ್ಧವಾಗಿಸಿದರೆ, ಎಲ್ಲ ತಂತಿಗಳನ್ನೂ ಶೃತಿಮಾಡಿಟ್ಟರೆ ಅಶ್ರುತ ವೀಣಾರವ ಹೊರಟೀತು.' ಆ ಭಾಗ್ಯ ಬರದಿದ್ದರೂ ಕಾಮಕ್ರೋಧಾದಿ ವಿಕಾರಗಳನ್ನು ಹೃದಯದಿಂದ ತೊಳೆಯಲು ಪ್ರಾರ್ಥನೆ ನೋಲು ಗಾಣದ ಉತ್ತಮ ಸಾಧನೆ. ಆದರೆ ಅದರಲ್ಲಿ ಅತ್ಯಂತ ವಿನಯವಿರಬೇಕು.'

ನಮ್ಮ ಬಾಳಿನಲ್ಲಿ ಅನೇಕ ಸಲ ನಮ್ಮ ಪ್ರಯತ್ನವಿಲ್ಲದೆಯೆ ಕೆಲವು ಪ್ರಸಂಗ ನಡೆಯುವುದುಂಟು. ನಾವು ಏನೇನೊ ಬಯಸುತ್ತೇವೆ. ಕೋಟಿ ಆಸೆ ನಮ್ಮದು. ಆದರೆ ಅದನ್ನು ಸಾಧಿಸುವ ಬಲ ನಮಗಿಲ್ಲ. ನಮ್ಮ ಪ್ರಯತ್ನ ಅದಕ್ಕೆ ಸಾಲದು. ಒಮ್ಮೊಮ್ಮೆ ಅಂಥ ಕೆಲಸಗಳೂ ಕೈಗೂಡಿ ಬರುತ್ತವೆ. 'ನನ್ನ ಪ್ರಯತ್ನದಿಂದಲೇ ಸಾಧ್ಯವಾಗಲಾರದ ಅನೇಕ ವಿಷಯ ನನ್ನ ಬಾಳಿನಲ್ಲಿ ನಡೆದಿವೆ. ಅದು ನನ್ನ ಪ್ರಾರ್ಥನೆಯ ಫಲ, ಬೇಡಿದ ಬೇಡಿಕೆಗೆ ಉತ್ತರ ಎಂದು ಜೊತೆಗಾರರಿಗೆ ಹೇಳಿದೇನೆ. ಅದೇ ಸರಿ. ಸಂಕಟ ಬಂದಾಗ ಅನಿರೀಕ್ಷಿತವಾಗಿ ಸಹಾಯ ಬಂದು ತೊಂದರೆ ಪರಿಹಾರವಾಗುತ್ತದೆ. ಅದಕ್ಕೆ ಏನೆನ್ನಬೇಕು ? 'ದೇವರು ನನ್ನ ವಿಪತ್ತಿನಲ್ಲಿ ಆಶ್ರಯವಾದ. ಬದುಕಿಸ ಬೇರೆ ಬೇರೆ ಮನೆಗಳಲ್ಲಿ ನನಗೆ ಈ ಅನುಭವ ಆಗಿದೆ. ಎಷ್ಟೋ ಆಧ್ಯಾತ್ಮಿಕ ಪ್ರಯೋಗಗಳಲ್ಲಿ ವಕೀಲಿಯಲ್ಲಿ ಸಂಸ್ಥಾಸಂಚಾಲನೆಯಲ್ಲಿ ರಾಜಕೀಯ ವ್ಯವಹಾರದಲ್ಲಿ ನನಗೆ ಒದಗಿದ ವಿಪತ್ತುಗಳಲ್ಲಿ ದೇವರು ನನ್ನನ್ನು ಕಾಯ್ದನೆಂದು ಹೇಳಬಲ್ಲೆ. ಉಪಾಯ ಒಂದೂ ಕಾಣದಾಗ, ಗೆಳೆಯರು ಕೈ

---

* ಅಕ್ಕರವು ಲೇಖಕ್ಕೆ ತರ್ಕ ತಾ ವಾದಕ್ಕೆ ।
ಮಿಕ್ಕ ಓದುಗಳು ತಿರುಪೆಗೆ, ಮೋಕ್ಷಕ್ಕೆರ ।
ಡಕ್ಕರವೆ ಸಾಕು ಸರ್ವಜ್ಞ ॥

ಬಿಟ್ಟಾಗ. ಆಸರೆ ಕಳೆದಾಗ ಎಲ್ಲಿಂದಲೋ ಹೇಗೋ ಆ ಸಹಾಯ ಒಂದೊದಗುವುದು ಎಂದು ನನಗೆ ಅನುಭವವಾಗಿದೆ.' ಆರ್ತತ್ರಾಣಪರಾಯಣನಲ್ಲವೆ ದೇವರು!

ಇದೆಲ್ಲ ಬರಿಯ ಚಮತ್ಕಾರ. ಅವರವರ ಕರ್ಮದಂತೆ ಅವರವರಿಗೆ ಫಲ—ಎಂದು ಅನೇಕರಿಗೆ ಅನಿಸುತ್ತದೆ. ಗಾಂಧೀಜಿಗೆ ಇಂಥ ಕರ್ಮ ಸಿದ್ಧಾಂತವು ಬರದು. ಕರ್ಮಕ್ಕೇನು ಸರ್ವಶಕ್ತಿ ಇದೆಯೆ? ಕರ್ಮವೇ ಎಲ್ಲವೂ ಎಂದರೆ ಸರಿಯೆ? 'ಕರ್ಮ ನೆರವಾಗಲಾರದು. ಕರ್ಮವು ಅನುಲ್ಲಂಘನೀಯ ನಿಯಮ. ಅದನ್ನು ಮೀರಲಾಗದೆಂದು ಬಲ್ಲೆ. ಆದರೂ ಗಳಿಗೆಗಳಿಗೆಯೂ ಏನೋ ಒಂದನ್ನು ಮಾಡುತ್ತ ಕರ್ಮಶೀಲನಾಗಿ ಹಳೆಯ ಗಂಟಿಗೆ ಹೊಸ ಕರ್ಮವನ್ನು ಸೇರಿಸುತ್ತಿದೇನೆ. ಹಳದನ್ನು ಕಳೆದು ಹೊಸದು ಕೂಡಿಹಾಕುತ್ತಿದೇನೆ. ಹಿಂದೆ ಮಾಡಿದುದರ ಫಲ ಇಂದಿನ ಪುಣ್ಯ ಎನ್ನಬಾರದು. ನಿನ್ನೆಯದು ಬೇಗನೆ ಮುಗಿದೀತು. ನಾಳೆಗಾಗಿ, ಮುಂದಿನ ಕಾಲಕ್ಕಾಗಿ, ಪ್ರಾರ್ಥನೆಯಿಂದ ಅದನ್ನು ಕಟ್ಟಬೇಕು.' ಕರ್ಮವನ್ನು ನಂಬಿಕೂತರೆ ಸುಖವಿಲ್ಲ. 'ಬರೀ ಕರ್ಮಕ್ಕೆ ಬಲವಿಲ್ಲ. ಈ ಬೆಂಕಿಯ ಕಡ್ಡಿ ಹಚ್ಚಬೇಕೆನ್ನುತ್ತೇನೆ. ಹೊರಗಿನಿಂದ ಸಹಾಯ ಬರದಿದ್ದರೆ ಅದು ಸಾಧ್ಯವಾಗದು. ಕಡ್ಡೀ ಗೀಚುವುದರೊಳಗಾಗಿ ನನ್ನ ಕೈ ಸ್ತಂಭಿತವಾದೀತು. ಇದ್ದುದು ಒಂದೇ ಕಡ್ಡಿ ಗಾಳಿಗೆ ಆರಿಹೋಗಬಹುದು. ಅದೇನು ಆಕಸ್ಮಿಕ ಪ್ರಸಂಗವೋ ದೈವವೋ ಮತ್ತೇನಾದರೂ ಶಕ್ತಿಯೋ? ಯಾವುದೇ ಇರಲಿ ಅದನ್ನು ನಂಬದೆ ಇರುವುದು ಅಸಾಧ್ಯ. ದೇವರ ಬಲವಿಲ್ಲದೆ ಜಗತ್ತಿನ ಎಲ್ಲ ಕಷ್ಟ ಪರಂಪರೆಗಳನ್ನೂ ಬೇಸರದ ಉಸಿರು ಬಿಡದೆ ಸಹಿಸುವುದು ನರನಿಗೆ ಮೀರಿದುದು. ಅವನ ಬಲವೇ ನಮ್ಮ ಬಲ. ಆ ಸರ್ವಶಕ್ತಿಗೆ ನಮ್ಮ ದುಃಖದುಗುಡಗಳನ್ನು ಒಪ್ಪಿಸಬಲ್ಲವರಿಗೇ ಆ ಬಲ!

'ನಾನು ದೇವರನ್ನು ನಂಬುವುದಿಲ್ಲ ಎಂದು ಹೇಳುವುದು ಬಹಳ ಸುಲಭ. ಇದೇ ಅಲ್ಲ; ಎಂಥ ಮಾತನ್ನಾದರೂ ತನ್ನ ಬಗ್ಗೆ ಆಡಲಿ ದೇವರು ಸುಮ್ಮನೆ ಇರುತ್ತಾನೆ.' ಆತ ನಮ್ಮ ನುಡಿ ಕೇಳುವುದಿಲ್ಲ. 'ನಮ್ಮ ನಡೆ ನೋಡುತ್ತಾನೆ.' ಆತನು ಇಲ್ಲವೆಂದು ತಿಳಿದು ಆತನ ನಿಯಮವನ್ನು

ಮೀರಿದರೆ ಹಿಂದೆಯೇ ಶಿಕ್ಷೆ ಕಾದಿದೆ. ನಿಯಮ ಮುರಿದುದಕ್ಕೆ ಕೋಪ ಬಂತು ಎಂದಲ್ಲ. 'ಆ ಶಿಕ್ಷೆ ಪ್ರತೀಕಾರದ್ದಲ್ಲ; ಮುಯ್ಯಿಗೆ ಮುಯ್ಯಿ ಅಲ್ಲ. ಅದು ಹಾದಿಗೆ ಹಚ್ಚುವ ಶಿಕ್ಷೆ. ಪ್ರಾಯಶ್ಚಿತ್ತಾಯುಧ ಒತ್ತಾಯ.' ಸರಿಸರಿ, ಇದೆಲ್ಲ ಹಳೆಯ ಕಂತೆ. ದೇವರು ಇದ್ದರೆ ಪ್ರಮಾಣಿಸಿ ಕೊಡ ಬಹುದಲ್ಲ? ಹಾಗೆ 'ತೋರಿಸಿ ಕೊಡಲು ಸಾಧ್ಯವಿಲ್ಲ. ತೋರಿಸಿ ಕೊಡ ಬೇಕಾದ ಅಗತ್ಯವೂ ಇಲ್ಲ. ಆತನ ಇರವು ನಮಗೆ ಅನಿಸದೆ ಇದ್ದರೆ ನಮಗೇ ನಷ್ಟ.'

ಇದ್ದರೂ ಇರಲಿ. ನಾವೇಕೆ ಆ ದೇವರನ್ನು ಬೇಡಿಕೊಳ್ಳಬೇಕು. ಆಗಬೇಕಾದದ್ದು ಆಗಿಯೇ ತೀರುತ್ತೆ ಎನ್ನುವವರು ಇದಾರೆ. ಬೌದ್ಧ ಪಂಡಿತರೊಬ್ಬರು ಒಂದು ಸಲ ಗಾಂಧೀಜಿಗೆ ಗಂಟುಬಿದ್ದರು. ಬೇಡಿ ಕಾಡಿ ದೇವರ ಮನಸ್ಸನ್ನು ಬದಲಾಯಿಸಬಹುದೆ? ದೇವರು ಅಷ್ಟು ಚಪಲ ಚಿತ್ತನೆ? ಎಂದು ಕೇಳಿದರು.

'ದೇವರ ಚಿತ್ತ ಹಾಗೆ ಬದಲಾಯಿಸಬಲ್ಲೆನೆ? ಎಲ್ಲೆಲ್ಲೂ ಎಲ್ಲದ ರಲ್ಲೂ ದೇವರು ಇದಾನಷ್ಟೆ. ನನ್ನಲ್ಲೂ ದೇವರು ಇದಾನೆ ಅಲ್ಲವೆ? ಧ್ಯಾನ-ಪ್ರಾರ್ಥನೆ ಎಂದರೆ ನನ್ನೊಳಗಿನ ದೇವರನ್ನು ಎಚ್ಚರಗೊಳಿಸುವುದು.'

ಆ ಪಂಡಿತರಿಗೆ ಸ್ವಲ್ಪ ದಡ ಸಿಕ್ಕಹಾಗಾಯಿತು. 'ಹಾಗಾದರೆ ಅದು ಪ್ರಾರ್ಥನೆಯಾದೀತೆ? ಪ್ರಾರ್ಥನೆ ಎಂದರೆ ಬೇಡಿಕೆ'– ಎಂದರು.

ಗಾಂಧೀಜೀ ತರ್ಕದಲ್ಲಿ ಬಹಳ ಹರಿತ. ಕೂಡಲೆ ಕೇಳಿದರು. 'ಯಾಕಾಗಬಾರದು? ನನ್ನೊಳಗೆ ಆತ್ಮ ಇಲ್ಲವೆ? ನನ್ನ ಪೂರ್ಣ ಅನುಭವಕ್ಕೆ ಇನ್ನೂ ಬಾರದ ಪುರುಷೋತ್ತಮ ಇಲ್ಲವೆ? ನನ್ನನ್ನೇ ಅಂದರೆ ಆ ಪುರುಷೋತ್ತಮನನ್ನೇ ನಾನು ಬೇಡಿದೆ ಎನ್ನುವ. ಆದ್ದರಿಂದ ಪ್ರಾರ್ಥನೆ ಎಂದರೆ ಸರ್ವವ್ಯಾಪಿಯಾದ ದೈವದಲ್ಲಿ ಲೀನವಾಗಲು ಮಾಡಿದ ಸದಾ ಧ್ಯಾನ; ಬಯಸಿದ ಕೊನೆಯಿಲ್ಲದ ಬಯಕೆ.'

ನಾವೇ ಪುರುಷೋತ್ತಮನಾದರೆ ನಮ್ಮೊಳಗೇ ದೈವವಿರುವುದು ನಿಜವಾದರೆ ನಮ್ಮ ಹೊರಗಿರುವ ದೇವರನ್ನೂ ನಾವು ಪ್ರಾರ್ಥಿಸಲೇಕೆ? ತನ್ನ ನಾಭಿಯಲ್ಲಿಯ ಕಸ್ತೂರಿ ಇಟ್ಟುಕೊಂಡು ಸುತ್ತಲೂ ಅರಸಿ

ನೋಡುವ ಕಸ್ತೂರಿ ಮೃಗದಂತೆ ಈ ಹೊರಗಣ ದೇವರ ಭಕ್ತಿಯೇಕೆ? ಆತ್ಮ ಪೂಜೆಯೇ ಸಾಕು. ಆದರೆ ಈ ತರ್ಕ ಸರಿಯಲ್ಲ. ನಾವು 'ಅನಂತನಾದ ಬ್ರಹ್ಮನ ಅಂಶವೇ ನಿಜವಾದರೂ ಕೇವಲ ಅಣುಮಾತ್ರ. ಆದುದರಿಂದಲೇ ಆ ಬ್ರಹ್ಮನಿಂದ ಹೊರಗೆ ಇದ್ದಂತೆ ಭಾಸವಾಗುತ್ತದೆ. ಅದನ್ನು ನಾವು ಮಾಡಿದೆವು, ಇದನ್ನೂ ನಾವು ಮಾಡಿದೆವು ಎಂದು ಹೇಳಿದೊಡನೆಯೆ ನಮ್ಮ ಅಲ್ಪತ್ವವೂ ಅಯೋಗ್ಯತೆಯೂ ಮನಸಿಗೆ ನಾಟುತ್ತವೆ. ಮತ್ತೊಂದು ಶ್ರೇಷ್ಠ ಶಕ್ತಿಯ ಸಹಾಯ ಬೇಕು ಎನಿಸುತ್ತದೆ.' ಹಾಗೆಯೆ ಆದರೂ ಇಲ್ಲಿಲ್ಲದ ದೇವರು ಅಲ್ಲೆಲ್ಲೋ ಇದಾನೆಯೆ? ನಮ್ಮ ಸುತ್ತಲೂ ಇಲ್ಲದವನು ಮುಗಿಲಲ್ಲಿ ಬರುತ್ತಾನೆಯೆ? ಮುಗಿಲಿಗೆ ಬೇಡಿದರೆ ಏನು ಬಂತು? ಗಾಂಧೀಜಿಗೆ 'ಮುಗಿಲ ನಡುವೆ ದೇವರು ಇದಾನೆಂಬುದೂ ಆತನನ್ನು ಬೇಡುವುದೂ ಸರಿ.' ದೂರದ ನಂಟರ ಮೇಲೆಯೇ ಮಮತೆ ಹೆಚ್ಚಲ್ಲವೆ. 'ಆತನು ಎಷ್ಟೆಷ್ಟು ದೂರವೋ ಅಷ್ಟಷ್ಟು ಆತನ ಆಸೆ ಹೆಚ್ಚೀತು. ಅಷ್ಟಷ್ಟು ನನ್ನ ಭಾವನೆಯಲ್ಲಿ ಆತ ಮೂಡಿ ಬಂದಾನು. ಆತನ ಇದುರಿನಲ್ಲಿ ನಾನು ನಿಂತೇನು. ಭಾವನೆ ಬೆಳಕಿಗಿಂತಲೂ ವೇಗ. ದೇವರಿಗೂ ನನಗೂ ನಡುವೆ ಲೆಕ್ಕ ಮಾಡಲಾರದಷ್ಟು ದೂರ ಇದ್ದರೂ ಅದೆಲ್ಲ ಮಾಯವಾಗುತ್ತದೆ. ದೇವರು ನಮಗೆ ಅತಿ ದೂರದಲ್ಲೂ ತೀರ ನನಿಯದಲ್ಲೋ ಇದಾನೆ.

ನಮ್ಮ ಸಂಸ್ಕೃತಿಯಲ್ಲಿ ಪ್ರಾರ್ಥನೆಗೆ ತುಂಬಾ ಮಹತ್ವವಿದೆ. ತತ್ ತ್ವಂ ಅಸಿ ಎಂದು ತಿಳಿಸಿ, ಅಹಂ ಬ್ರಹ್ಮಾಸ್ಮಿ ಎಂದು ಡಂಗುರ ಹೊಡೆದ ಭಗವತ್ಪಾದ ಶಂಕರಾಚಾರ್ಯರೂ ಕೂಡ 'ಭಜ ಗೋವಿಂದಂ' ಎಂದು ಬೋಧಿಸಿದರು. ಅಷ್ಟೇ ಅಲ್ಲ. ಆರ್ತರಾಗಿ 'ಮಮದೇಹಿ ಕರಾವಲಂಬಂ' ಎಂದು ಆ ಬ್ರಹ್ಮನನ್ನು ಬೇಡಿದರು. ಅದ್ವೈತವನ್ನೇ ನಂಬಲಿ. ಚಾರ್ವಾಕವನ್ನೇ ಹೇಳಲಿ ನಮಗಿಂತ ಹೆಚ್ಚಾದ ದೇವರು ಒಬ್ಬನಿದಾನೆಂದೂ, ಆತನ ಕಾಯುವ ಕೈ ಸದಾ ನಮಗಾಗಿ ಕಾದೇ ಇದೆಯೆಂದೂ ನಂಬದವರು ಇಲ್ಲವೇ ಇಲ್ಲ ಎಂದರೂ ಸುಳ್ಳಾಗಲಿಕ್ಕಿಲ್ಲ. ದೇವರು ನಮ್ಮ ಹೃದ್ದೇಶದಲ್ಲಿ ನೆಲೆಸಿದಾನೆ. ದೇವರೇ ನಮ್ಮ ಜೀವ ಜೀವಾಳ. ನಮ್ಮ

ಸರ್ವಸ್ವ. ಆದರೆ ನಾವೇ ದೇವರೆಂಬ ಮಾತು ಬರಿಯ ತರ್ಕದ ಮಾಯೆ. ಮಾನವನ ಅನುಭವಕ್ಕೆ ಅದು ಎಲ್ಲಿಯೋ ಕಡಮೆ ಬೀಳುತ್ತದೆ. ಪಾಶ್ಚಾತ್ಯರಲ್ಲಿ ಹೆಸರಾದ ನಾಸ್ತಿಕ ಒಬ್ಬ ತನ್ನ ಅಂತ್ಯಕಾಲದಲ್ಲಿ 'ದೇವರೆ! ನೀನು ಇರುವುದೇ ನಿಜವಾದರೆ ಜೀವ ಎಂಬುದೂ ಇರುವುದಾದರೆ ನನ್ನ ಜೀವವನ್ನು ರಕ್ಷಿಸು'—Oh God! if there is a God, save my soul, if there is a soul—ಎಂದು ಪ್ರಲಾಪಿಸಿದನಂತೆ.

ಗಾಂಧೀಜೀ ಆಶ್ರಮದಲ್ಲಿರಲಿ ಪ್ರವಾಸದಲ್ಲಿರಲಿ; ಎಲ್ಲೇ ಇರಲಿ, ದಿನವೂ ಎರಡು ಸಲ–ಸಂಜೆ ಮುಂಜಾನೆ–ಪ್ರಾರ್ಥನೆ ನಡೆಸುತ್ತಾರೆ. ಬೆಳಕು ಇನ್ನೂ ಕತ್ತಲೆಯ ಬಸುರಿನಲ್ಲಿರುವಾಗಲೇ ಮುಂಜಾನೆಯ ಪ್ರಾರ್ಥನೆ. ಸೇವಾಗ್ರಾಮದಲ್ಲಿ ಪರ್ಣಕುಟಿಯ ಮುಂದೆ ದೊಡ್ಡ ಅಂಗಳವಿದೆ. ರಾತ್ರಿಯ ಹೊತ್ತು ಮುಗಿಲು ಸಾವಿರ ಕಣ್ಣಿಂದ ಆಶ್ರಮದ ಕಾವಲು ಕಾಯುತ್ತಿರುತ್ತದೆ. ಗಾಂಧೀಜಿಗೆ ಅದೊಂದು ಸ್ಫೂರ್ತಿ, ರಕ್ಷೆ. ಬಯಲು ಅವರಿಗೆ ಬಹಳ ಪ್ರೀತಿ ಬಯಲಿನಲ್ಲಿ ಚಿಕ್ಕೆಗಳ ಕೆಳಗೆ ಅವನ್ನು ನೋಡುತ್ತ ಮಲಗುವುದು ಅವರ ರೂಢಿ ಬೆಳಿಗ್ಗೆ ೪–೨೦ಕ್ಕೆ ಸಂಜೆ ೭ಕ್ಕೆ ದಿನವೂ ಆ ಅಂಗಳದಲ್ಲಿ ಚಿಕ್ಕೆಗಳ ತಂಪಾದ ಬೆಳಕಿನಲ್ಲಿ ಪ್ರಾರ್ಥನೆ. ಆಗ ಆಶ್ರಮವಾಸಿಗಳೆಲ್ಲರೂ ಸೇರುತ್ತಾರೆ. ಹೊರಗಿನವರೂ ಬರಬಹುದು. ಯಾರಾದರೂ ಇರಲಿ ಬಿಡಲಿ ಗಾಂಧೀಜಿಯ ಪ್ರಾರ್ಥನೆ ಗೊತ್ತಾದ ವೇಳೆಗೆ ನಡೆಯಲೇಬೇಕು. ಲಂಡನ್ನಿಗೆ ಹೋಗಿದ್ದಾಗ ಬ್ರಿಟಿಷ ಬಿಷಪ್ಪರ ಗುಂಪು ಗಾಂಧೀಜಿಯ ದರ್ಶನ ಸಂಜೆ ಏಳು ಗಂಟೆಗೆ ಮಾಡಿಕೊಳ್ಳುವುದಾಗಿ ಗೊತ್ತುಮಾಡಿದರು. ದೀನಬಂಧು ಆಂಡ್ರೂಸರು ಆ ಸಮಾರಂಭವನ್ನು ಏರ್ಪಾಡುಮಾಡಿದ್ದರು.

'ಬಾಪು, ಏಳು ಗಂಟೆಗೆ ಬಿಷಪ್ಪರ ಸಭೆ' ಎಂದು ಆಂಡ್ರೂಸರು ನೆನಪು ಮಾಡಿದರು.

'ಪ್ರಾರ್ಥನೆಯ ಹೊತ್ತಲ್ಲವೆ ಅದು' ಎಂದರು ಬಾಪು ಗಾಬರಿಯಾಗಿ.

'ಸ್ವಲ್ಪ ಮುಂಚೆಯೋ ಆ ಮೇಲೋ ಮಾಡಿದರಾಯಿತು' ಎಂದು

ದೀನಬಂಧು ಸೂಚಿಸಿದರು. ಗಾಂಧೀಜೀ ತೀರ್ಮಾನಿಸಿದರು. 'ದಾರಿಯಲ್ಲಿ ಮೋಟಾರಿನಲ್ಲಿ ನಡೆಸೋಣ.'

ಪ್ರಾರ್ಥನೆಗೆ ನಿಜವಾಗಿ ಒಂದೇ ನಿಯಮ. ಅದು 'ಐಕ್ಯಾನುಸಂಧಾನ. ದೇವರ ಅನುಗ್ರಹಯಾಚನೆ.' ಉಳಿದುವೆಲ್ಲ ಮುಖ್ಯವಲ್ಲ. ಆನುಷಂಗಿಕ. ಪ್ರಾರ್ಥನೆಗೆ ಇಷ್ಟೇ ಹೊತ್ತೆಂದಾಗಲಿ ಇದೇ ರೀತಿ ಎಂದಾಗಲಿ ನಿಯಮ ಇಲ್ಲ. 'ಮಾತೇ ಬೇಡ. ಯಾನ ಇಂದ್ರಿಯ ಸಾಧನೆಯೂ ಬೇಡ.' ದೇವ, ಮಾತೆಮಗೆ ಬೇಡ ಭಾವವೊಂದಿರಲಿ ಎಂದು ಕವಿ ಹಾಡಿಲ್ಲವೆ?' 'ಇವೆಲ್ಲ ಅವರವರ ರುಚಿಗೆ ತಕ್ಕಂತೆ. ನಮ್ಮ ಬಾಳಿನಲ್ಲಿ ಪ್ರಾರ್ಥನೆಯ ಗಳಿಗೆಗಳು ಬೆಲೆ ಕಟ್ಟಲಾರದ ಗಳಿಗೆಗಳು. ಈ ವಿಧಾನಗಳೆಲ್ಲ ನಮಗೆ ವಿನಯ ವಿವೇಕಗಳನ್ನು ಕಲಿಸುವ ಸಾಧನ. ದೇವರ ಇಷ್ಟವಿಲ್ಲದೆ ಹುಲ್ಲುಕಡ್ಡಿಯೂ ಅಲುಗಾಡಲಾರದೆಂದೂ ನಾವು ಆ ಕುಂಬಾರನ ಕೈಯ ಮಣ್ಣೆಂದೂ ತಿಳಿಸುವ ಸಾಧನ. ಹಿಂದೆ ಮಾಡಿದುದನ್ನು ಆಳೆದು ಸುರಿದು ನಮ್ಮ ದೌರ್ಬಲ್ಯವನ್ನೂ ಅರಿತು ಕ್ಷಮೆಬೇಡಿ, ಮುಂದೆ ಉತ್ತಮರಾಗಲು ಬಲವನ್ನು ಅರ್ಥಿಸುವ ಸಂಧಿಗಳು ಇವು. ಒಬ್ಬರಿಗೆ ಒಂದೇ ಮಿನಿಟಾದರೆ ಸಾಕು. ಒಬ್ಬರಿಗೆ ಇಪ್ಪತ್ತು ನಾಲ್ಕು ತಾಸು ಆದರೂ ಸಾಲದು.'

ಪರಾಶರ ಭಟ್ಟರು ರಾಮಾನುಜೀಯ ಪಂಥದವರಲ್ಲಿ ಒಂದು ದೊಡ್ಡ ಜೀವ. ಅವರು ಭಗವದಾರಾಧನ ಕ್ರಮವನ್ನು ತಮ್ಮ ಶಿಷ್ಯನೊಬ್ಬನಿಗೆ ಹೇಳಿ ಕೊಟ್ಟರು. ಸರಿಯಾಗಿ ಒಂದು ಜಾವದ ಹೊತ್ತಿನ ಕೈಂಕರ್ಯ. ಆ ಶಿಷ್ಯ ಅದನ್ನು ನಡೆಸಿಕೊಂಡಿದ್ದ. ಒಂದು ದಿನ ಗುರು ಶಿಷ್ಯರಿಬ್ಬರೂ ಮತ್ತೆ ಸೇರಿದರು. ಶಿಷ್ಯನ ಆರಾಧನೆ ಮೊದಲಾದಾಗ ಗುರುಗಳು ಇನ್ನೂ ಪ್ರಾರಂಭವೇ ಮಾಡಿರಲಿಲ್ಲ. ಇವನ ಆರಾಧನೆ ಮುಗಿಯುವುದರೊಳಗಾಗಿ ಯಾವಾಗಲೋ ಐದು ನಿಮಿಷದಲ್ಲಿ ತಮ್ಮ ಆರಾಧನೆ ಮುಗಿಸಿ ಬಿಟ್ಟರು. ಶಿಷ್ಯನಿಗೆ ಸಂದೇಹ ಬಿತ್ತು. ತನಗೆ ಜಾವ ಹೊತ್ತೇಕೆ? ಗುರುಗಳಿಗೆ ಐದು ನಿಮಿಷ ಸಾಕೆ? ಭಟ್ಟರನ್ನು ಕೇಳಿಯೇ ಬಿಟ್ಟ. ಭಟ್ಟರು ಹೇಳಿದರು—'ಅದು ನಿನ್ನ ಯೋಗ್ಯತೆಗೆ ತಕ್ಕ ಹಾಗೆ.' ಜಾವ ಹೊತ್ತು ಮಾಡಿಯೂ ಶಿಷ್ಯನ ಮನಸಿಗೆ ಆ ಏಕಾಗ್ರತೆ ಬಂದಿರಲಿಲ್ಲ.

ಗಳಿಗೆಯೋ ತಾಸೋ ಪ್ರಾರ್ಥನೆ ಮಾಡಿದರೆ ಮಾಡಬಹುದಾಗಲಿ ಪ್ರಾರ್ಥನೆಯ ಭಾಷೆಯೇ ನಮಗೆ ತಿಳಿಯುದಲ್ಲ. ಅರ್ಥವಾಗದ ಸಂಸ್ಕೃತ ದಿಂದ ನಮಗೇನು ಲಾಭ? ಈ ಪ್ರಶ್ನೆ ಸಹಜವಾಗಿಯೇ ಬರುತ್ತದೆ. ನಮ್ಮ ನಮ್ಮ ತಾಯಿನುಡಿಯಲ್ಲೇ ಸ್ತೋತ್ರಗಳು ಇದ್ದರೆ ಒಳ್ಳೆಯದು ಎನಿಸು ತ್ತದೆ. ನಮಗೆ ತಿಳಿಯದ ನುಡಿಯಲ್ಲಿ ನಾವೇನು ಬೇಡಬೇಕು? ಆದರೆ ಗಾಯತ್ರಿಯಂಥ ಮಂತ್ರ ಮತ್ತೊಂದು ದೊರೆತೀತೆ? ಅದನ್ನು ಕನ್ನಡಕ್ಕೆ ಭಾಷಾಂತರಿಸಿ ಜಪಿಸಿದರೆ ಮೂಲ ಮಂತ್ರದ ಫಲ ದೊರೆತೀತೆ? ಮೂಲ ಮಂತ್ರದ ಛಂದೋನಾದದಲ್ಲೂ ಒಂದು ವಿಶೇಷ ಅರ್ಥವಿದೆ. ಭಾಷಾಂತರ ದಲ್ಲಿ ಅದು ಬರಬೇಕು ಹೇಗೆ?' ಅದು ಏಕಮೇವವಾದುದು. ಪುರಾತನ ವಾದುದು.'ಶಬ್ದಕ್ಕೆ ಒಂದು ಪರಂಪರೆ ಇದೆ, ಇತಿಹಾಸವಿದೆ. ಆ ಪರಂಪರಾ ಪ್ರಾಪ್ತವಾದ ಒಂದು ಪೂಜ್ಯತೆ ಇದೆ' ಆ ಸೊತ್ತು ಕಳೆಯಬಾರದು. 'ರಾಮನಾಮವು ಕೋಟ್ಯಾನುಕೋಟಿ ಹಿಂದೂ ಜನರ ಹೃದಯವನ್ನು ಮೀಟುವ ಹಾಗೆ ಖುದಾ—God ಶಬ್ದಗಳು ಅದರ ಅರ್ಥ ತಿಳಿದರೂ ಕೂಡ ಮೀಟಬಲ್ಲವೆ?' ಹೀಗೆಂದರೆ ಅರ್ಥವಿಲ್ಲದೆಯೆ ಶ್ಲೋಕ ಮಂತ್ರ ಗಳನ್ನು ಪಟಗುಟ್ಟಬೇಕು ಎಂದಲ್ಲ. 'ಅದರ ಅರ್ಥ ಸರಿಯಾಗಿ ತಿಳಿದು ಕೊಳ್ಳಬೇಕೆಂದು ಹೇಳುವ ಅಗತ್ಯವೇ ಇಲ್ಲ.'

ಪ್ರಾರ್ಥನೆ ದಿನದಿನದ ಆತ್ಮನಿವೇದನ. ಪದೇಪದೇ ಮಾಡುವ ಪ್ರಪತ್ತಿ. ಅದನ್ನು ಬರಿಯ ಜಪಮಾಲೆ ತಿರುಗಿಸಿಯೋ ಸ್ತೋತ್ರಗಳ ಗಿಳಿ ಪಾಠ ಒಪ್ಪಿಸಿಯೋ ಮಾಡಿದರೆ ಫಲವಿಲ್ಲ. ಕತ್ತೆ ಬೂದಿಯಲಿ ಹೊರಳೆ ಭಕ್ತನಾತಪ್ಪುದೆ? 'ಕೋತಿಗೆ ಜಪಸರ ಕೊಟ್ಟರೆ ಅದೂ ಮಣಿ ಎಣಿ ಸೀತು. ಬಂದ ಭಾಗ್ಯವೇನು?' ಆದರೆ ಮನುಷ್ಯ ಕತ್ತೆಯೂ ಅಲ್ಲ ಕೋತಿಯೂ ಅಲ್ಲ. ಅಭ್ಯಾಸವು ಅವನ ಸಾಧನೆಗಳಲ್ಲಿ ಒಂದು. ಅದು ಒಂದೇ ಎಂದರೂ ಸಂದೀತು. ಮಗು ಒಂದೊಂದೇ ಅಕ್ಷರ ಕಲಿತಾಗ ಗಿಳಿಪಾಠ. ವರ್ಣಮಾಲೆಯೆಲ್ಲ ಪಾಠವಾಗಿ ಅಕ್ಷರಗಳನ್ನು ಜೋಡಿಸಿ ಪದಗಳನ್ನು ಗುರುತಿಸುವಾಗ ಹಿಂದಿನ ಗಿಳಿಪಾಠವೆಲ್ಲ ಕಳಿತುಬರುತ್ತದೆ. ಮನಸ್ಸೆಂಬ ಮರ್ಕಟದ ಕುಣಿದಾಟಕ್ಕೆ ಜಪ-ಧ್ಯಾನಗಳು ಮಹದೌಷಧ.

'ಮಕ್ಕಳಿಗೆ ಎಳೆತನದಲ್ಲಿಯೆ ಪ್ರಾರ್ಥನೆಯ ಪದ್ಧತಿಯನ್ನು ಕಲಿಸಬೇಕು.' ಅವರು ಬೆಳೆದು ಬಾಳಿಸಲ್ಲಿ ವಿಪತ್ತಿಗೆ ಗುರಿಯಾದಾಗ ಅದು ಅವರನ್ನು ಕಾಯುವ ಕೈಯಾದೀತು.

ಹಿಂದೂ ಮುಸ್ಲಿಮ ಸಖ್ಯಕ್ಕಾಗಿ ಗಾಂಧೀಜೀ ೧೯೨೪ರಲ್ಲಿ ೨೧ ದಿನ ಉಪವಾಸ ಮಾಡಿದರು. ಅದರ ಫಲವಾಗಿ ಐಕ್ಯ ಸಭೆಯೊಂದು ದಿಲ್ಲಿಯಲ್ಲಿ ನಡೆಯಿತು. ದಿಲ್ಲಿಯಲ್ಲೇ ಮೌಲಾನಾ ಮಹಮ್ಮದಾಲಿಯ ಮನೆಯಲ್ಲಿ ಆಗ ಗಾಂಧೀಜೀ ಇದ್ದುದು. ಅವರ ಮನೆಯ ಮಾಳಿಗೆಯ ಮೇಲೆ ಮಲಗಿರುತ್ತಿದ್ದರು. ಅಲ್ಲಿ ನಡೆಯುತ್ತಿದ್ದ ಪ್ರಾರ್ಥನೆಯ ವರ್ಣನೆಯನ್ನು ದೀನಬಂಧು ಆಂಡ್ರೂಸರು ಮಾಡಿದಾರೆ.

'ಸಂಜೆಯ ಪ್ರಾರ್ಥನೆಯ ಹೊತ್ತು. ಮನೆಯೊಳಗೆ ಇದ್ದವರನ್ನೆಲ್ಲ-ಸ್ವಯಂಸೇವಕರನ್ನೂ ಸಹ—ಬಾಪು ಕರೆಸಿದರು. ದಿನಾಲೂ ಸಾಬರಮತಿ ಆಶ್ರಮದಲ್ಲಿ ಹೇಳುತ್ತಿದ್ದ ಗೀತಾ ಶ್ಲೋಕಗಳನ್ನು ಎಲ್ಲರೂ ಸೇರಿ ಹೇಳಿದರು. ಇಂದ್ರಿಯಾಭಿಲಾಷೆಯ ಸೆಳೆತದಿಂದ ಹೇಗೆ ಆತ್ಮವು ದೇಹವನ್ನು ತನ್ನ ಕಡೆಗೆ ಗೆದ್ದುಕೊಳ್ಳುತ್ತದೆ ಎಂಬುದನ್ನು ಆ ಶ್ಲೋಕಗಳಲ್ಲಿ ವರ್ಣಿಸಿದೆ. ಕೊನೆಗೆ ಬರುವುದು ಹಾಗೆ ಗೆದ್ದವರ ಹೃದಯದಲ್ಲಿ ತುಂಬಿ ಬರುವ ಶಾಂತಿಯ ಚಿತ್ರ. ಸುತ್ತಲೂ ಬೆಳದಿಂಗಳು ಚೆಲ್ಲಿತ್ತು. ಹುಣ್ಣಿಮೆಗೆ ನಾಲ್ಕು ದಿನ ಉಳಿದಿವೆ. ನನ್ನ ಇದುರಿನಲ್ಲಿದ್ದ ಮೂರ್ತಿಯ ತೇಜೋಪೂರ್ಣ ಮುಖವನ್ನು ದಿಟ್ಟಿಸಿ ನೋಡಿದೆ. ಹೇಳುತ್ತಿದ್ದ ಶ್ಲೋಕಗಳ ಅರ್ಥ ಚೆನ್ನಾಗಿ ಹೊಳೆಯಿತು. ಗೀತೆ ಆದ ಮೇಲೆ ಕಬೀರನ ಕೃತಿಯೊಂದನ್ನು ಬಾಲಕೃಷ್ಣ ಹಾಡಿದ. ಕಬೀರ ದೈನ್ಯದಿಂದ ಕ್ಷಮಾಯಾಚನೆ ಮಾಡುತ್ತಿದಾನೆ. ತಾನು ಪಾಪಿಗಳ ಮುಖಂಡ. ತನಗೆ ಅನ್ಯಗತಿ ಇಲ್ಲ. ದೇವರೇ ಗತಿ. ವ್ರತ ಉಪವಾಸ ದೀಕ್ಷೆಗಳ ಕಾಲದಲ್ಲಿ ಇಂಥ ಕೀರ್ತನೆಗಳೇ ಗಾಂಧೀಜಿಗೆ ತುಂಬಾ ಇಷ್ಟ; ತುಂಬಾ ಸಮಾಧಾನ. ತರುವಾಯ ವಿನೋಬಾಜಿಯ ಕಠೋಪನಿಷತ್ತಿನ ರಮ್ಯ ಪ್ರವಚನ. ಅದಾದ ಮೇಲೆ ದೀರ್ಘ ಮೌನ. ಕಡೆಗೆ ಒಬ್ಬೊಬ್ಬರೇ ಎದ್ದು ಹೋದರು. ಬಾಪು ಒಬ್ಬರೇ ಉಳಿದರು.

ಬೆಳಗ್ಗೆ ನಾಲ್ಕು ಗಂಟೆಗೆ ಮೊದಲೇ ಪ್ರಾರ್ಥನೆಗೆ ಕರೆದರು. ಚಂದ್ರ ಕಾಣಿಸುತ್ತಿರಲಿಲ್ಲ. ಬಹಳ ಕತ್ತಲೆ. ಮೂಡಲ ಗಾಳಿ ತಣ್ಣಗೆ ಕೊರೆಯುತ್ತಿತ್ತು. ಶುಕ್ರೋದಯವಾಗಿ ಆ ಚಿಕ್ಕೆ ನಿಗಿನಿಗಿ ಹೊಳೆಯುತ್ತಿತ್ತು. ಗಾಳಿಗೆ ಅಲುಗಾಡುತ್ತಿದ್ದ ಗಿಡಮರಗಳ ಅಸ್ಪಷ್ಟ ಆಕಾರ ಕಾಣುತ್ತಿದ್ದವು. ಆಗ ಅಲ್ಲಿ ತುಂಬಿದ್ದ ಮೌನರಸವನ್ನು ವರ್ಣಿಸಲು ಸಾಧ್ಯವಿಲ್ಲ. ಗುಜರಾತಿಯ ಕೀರ್ತನೆಯೊಂದನ್ನು ಪ್ರತ್ಯೇಕವಾಗಿ ಆ ದಿನ ಹಾಡಲಾಯಿತು. ಅದೇ ಉಪವಾಸದ ಕೊನೆಯ ದಿನ. ಧೀರರದು ದೇವರದಾರಿ. ಹೇಡಿಯದಲ್ಲ. ಪೂರಾ ಆತ್ಮತ್ಯಾಗಮಾಡಬಲ್ಲವರಿಗೇ ದೇವರು ಸಿಕ್ಕಾನು. ಅವನಿಗಾಗಿ ಎಲ್ಲವನ್ನೂ ತೊರೆಯಬೇಕು. ಆಳವಾಗಿ ಕಡಲೊಳಗೆ ಮುಳುಗಿದವ ಮುತ್ತು ತಂದಾನು. ಮೇಲೆ ಕೂತವನಿಗೆ ಏನಿದೆ? ಬರೀ ಮರಳು. ಇದು ಆ ಕೀರ್ತನೆಯ ಭಾವ.

ಗಾಂಧೀಜೀ ಪ್ರಾರ್ಥನೆಯಲ್ಲಿ ಕೂತಾಗ ಪದ್ಮಾಸನಾಸೀನನಾದ ಬುದ್ಧದೇವನ ನೆನಪಾಗುತ್ತದೆ. ಆ ಮೋರೆಯಿಂದ ವಿಶ್ವಪ್ರೇಮದ ಭ್ರಾತೃಭಾವಗಳು ಕಿರಣಗಳಂತೆ ಹರಿಯುವಹಾಗೆ ಅನಿಸುತ್ತದೆ.

ಈ ಪ್ರಾರ್ಥನೆಗಳಲ್ಲಿ ಜಾತಿಮತ ವಿಪಕ್ಷತೆ ಇಲ್ಲ. ಯಾವ ಪಂಗಡದ ಅಭಿಮಾನವೂ ಇಲ್ಲ. ಕ್ರೈಸ್ತರ ಕೀರ್ತನೆಗಳೂ ಆಗಬಹುದು. ಕೊರಾನಿನ ಆಯಾತಗಳೂ ಆಗಬಹುದು. ನಮ್ಮಲ್ಲೇ ಸಾವಿರ ಭೇದಗಳಿವೆಯಲ್ಲ; ದೇವರ ಹೆಸರಿನವು, ದೇವರ ರೂಪದವು ಮುಂತಾದುವು. ಗಾಂಧೀಜೀ ಜನ್ಮತಃ ವೈಷ್ಣವರು. ವೈಷ್ಣವದ ಜೊತೆಗೆ ಜೈನರ ಪ್ರಭಾವವೂ ಎಳೆತನದಲ್ಲಿ ಇವರ ಮೇಲೆ ಬಿತ್ತು. ಇತರ ಧರ್ಮಗಳ ಗಾಢ ಪರಿಚಯವೂ ಮುಂದೆ ಆಯಿತು. ಇದೆಲ್ಲ ಅವರ ಮನಸ್ಸನ್ನು ಪಂಥಾಭಿಮಾನದ ಸಂಕೋಚದಿಂದ ಸತ್ಯಾಭಿಮಾನದ ಸಾರ್ವತ್ರಿಕತೆಗೆ ಒಯ್ಯಿತು. ಆಶ್ರಮದ ಪ್ರಾರ್ಥನೆಯ ವೈವಿಧ್ಯವು ಅವಕ್ಕೆ ಸಾಕ್ಷಿಯಾಗಿದೆ. ಅದಕ್ಕಿಂತಲೂ ಹೆಚ್ಚಾಗಿ ಆ ವೈಶಾಲ್ಯವನ್ನು ಪ್ರಾರ್ಥನೆಯಲ್ಲಿ ಸಾಧಾರಣವಾಗಿ ಮೊದಲಿಗೆ ಬರುವ ಶ್ಲೋಕ ತಿಳಿಸುತ್ತದೆ.

**ಯಂ ಶೈವಾ ಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ ।**
**ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯಾಯಿಕಾಃ ॥**
**ಅರ್ಹನ್ನಿತ್ಯತಿ ಜೈನ ಶಾಸನರತಾಃ ಕರ್ಮೇತಿ ಮೀಮಾಂಸಕಾಃ ।**
**ಸೋಽಯಂ ವೈ ವಿದಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ಹರಿಃ ॥**

ಈ ಪ್ರಾರ್ಥನೆಗಳು ಸಾಮೂಹಿಕ ಪ್ರಾರ್ಥನೆಗಳು. ನಾಲ್ಕು ಜನ ಸೇರಿ ಮಾಡುವಂಥವು. ಗಾಂಧೀಜಿಗೆ ಸಾಮೂಹಿಕ ಪ್ರಾರ್ಥನೆಯಲ್ಲಿ ಬಲವಾದ ನಂಬಿಗೆ. 'ಅದು ಅದ್ಭುತವಾದುದು. ಒಂಟೊಂಟಿಯಾಗಿ ಮಾಡ ಲಾರದ ಕೆಲಸವನ್ನು ನಾವು ಗುಂಪುಕಟ್ಟಿ ಮಾಡುತ್ತೇವೆ. ದೃಢವಾದ ಭಕ್ತಿಯಿಲ್ಲದವರಿಗೆ ಸಾಮೂಹಿಕ ಪ್ರಾರ್ಥನೆ ಹಿರಿದಾದ ಶಾಂತಿ–ಸಮಾ ಧಾನವೆಂಬುದು ಸಾಧಾರಣ ಅನುಭವದ ಮಾತು.' ಕ್ರೈಸ್ತರಲ್ಲಿ, ಮುಸ್ಲಿಮು ರಲ್ಲಿ ಈ ತೆರದ ಪ್ರಾರ್ಥನೆ ಬಹಳ. ನಮ್ಮಲ್ಲೂ ಉತ್ಸವಾದಿಗಳಲ್ಲಿ ಗುಡಿ ಗಳಲ್ಲಿ ಜನ ಕಲೆತು ಭಗವತ್ಪ್ರಾರ್ಥನೆ–ಪೂಜೆಗಳನ್ನು ಮಾಡುತ್ತಾರೆ. ವೇದ ಪಾಠವಂತೂ ಸಾಮೂಹಿಕವಾಗಿಯೇ ನಡೆಯುತ್ತದೆ. ನಾಲ್ಕು ಜನರ ಬಲಾತ್ಕಾರಕ್ಕಾಗಲಿ ಸಮಾಜದ ಅಂಜಿಕೆಗಾಗಲಿ ಜನ ಈ ಸಮೂಹಗಳಲ್ಲಿ ಸೇರುವುದಿಲ್ಲ. ಬೇಡ ಎಂದವರನ್ನು ಬಲವಂತ ಮಾಡಲು ನಮ್ಮಲ್ಲಿ ಯಾವ ನಿಯಮವೂ ಇಲ್ಲ. ಆದರೂ ಜನ ಚರ್ಚಿಗೆ ಮಸೀದಿಗೆ ಮಂದಿರಕ್ಕೆ ಹೋಗುತ್ತಾರೆ. ಅವರೆಲ್ಲ ನಾಸ್ತಿಕರಲ್ಲ. ಕಪಟಿಗಳೂ ಅಲ್ಲ. ಪ್ರಾಮಾಣಿ ಕರು, ಸಜ್ಜನರು. ನಿತ್ಯ ಸ್ನಾನ ಇದ್ದಂತೆ ಸಾಮೂಹಿಕ ಪ್ರಾರ್ಥನೆ ಅವರಿಗೆ ಜೀವನದ ಒಂದು ಅಗತ್ಯಕರ್ಮ.' ನಾಸ್ತಿಕತೆ ಬೆಳೆದು ಹೋಗು ತ್ತಿರುವ ಈ ಕಾಲದಲ್ಲಿ ಸಾಮೂಹಿಕ ಪ್ರಾರ್ಥನೆಗೂ ಪ್ರಾರ್ಥನಾ ಸ್ಥಳ ಗಳಿಗೂ ಗಮನ ಕಡಮೆಯಾಗುತ್ತಿದೆ. ಗುಡಿಗುಂಡಾರಗಳು ಏಕೆ ಎನ್ನು ವವರಿದ್ದಾರೆ. 'ಆರಾಧನೆಗಾಗಿ ಮಾಡಿದ ಈ ಪವಿತ್ರ ಸ್ಥಳಗಳು ಬರೀ ಕೆಲ ಸಕ್ಕೆ ಬಾರದ ಮೌಢ್ಯದ ಸಂಕೇತವಲ್ಲ. ಕೊಂಚ ಅವಕಾಶ ದೊರೆತರೆ ಸಾಕು ಮೊದಲ ಹೊಡತಕ್ಕೇ ಅವನ್ನು ಉರುಳಿಸುವ ಚಪಲ ನಲ್ಲದು. ಇಂದಿನ ತನಕ ಇಂಥ ಎಷ್ಟೋ ದಾಳಿಗಳಿಗೆ ಅವು ಮಣಿದಿಲ್ಲ. ಕಡೆತನಕ ಮಣಿಯಲಿಕ್ಕೂ ಇಲ್ಲ.' ಗಾಂಧೀಜಿ ಭೌತಿಕ ನಾಗರಿಕತೆಯ ರಂಗದಲ್ಲಿ ಪ್ರಳಯ ಭೈರವನಂತೆ ತಾಂಡವವಾಡಿದರೂ ಆಧ್ಯಾತ್ಮ ಸಂಸ್ಕೃತಿಯ

ಕ್ಷೇತ್ರದಲ್ಲಿ ಯಾವುದನ್ನೂ ಉರುಳಿಸುವಂತೆ ಇಲ್ಲ. ಹಳೆದನ್ನೂ ಸಂಸ್ಕರಿಸಿ ಅದರಲ್ಲಿ ಹೊಸ ಪ್ರಾಣವನ್ನು ತುಂಬುತ್ತಾರೆ. ಸಾಮೂಹಿಕ ಪ್ರಾರ್ಥನೆಯು ಅವರ ಪದ್ಧತಿಯೂ ಅಂಥದೊಂದು ಪುನರುಜ್ಜೀವನ ಪ್ರಯತ್ನ.

ಗಾಂಧೀಜೀ ಪ್ರಾರ್ಥನೆಯಲ್ಲಿ ಮೌನವಾಗಿ ಕೂತಿರುತ್ತಾರೆ. ಮೊದಮೊದಲು ಅವರಿಗೆ ಮಾತು ಬೇಕಾಗಿತ್ತೋ ಏನೋ ಈಗಂತೂ ಅವರ ಧ್ಯಾನ–ಪ್ರಾರ್ಥನೆಗಳು ಕೇವಲ ಭಾವಾತ್ಮಕ ಎನಿಸುತ್ತದೆ. ಹತ್ತಿಪ್ಪತ್ತು ವರ್ಷಗಳ ಹಿಂದೆ ಗಾಂಧೀಜೀ ರಾಮನಾಮದ ಬಗ್ಗೆ ಅಲ್ಲಲ್ಲಿ ಪ್ರಸ್ತಾಪ ಮಾಡುತ್ತಿದ್ದರು. ರಾಮನಾಮವನ್ನು ಉಪದೇಶಿಸುತ್ತಿದ್ದರು. ಮನೋನಿಗ್ರಹಕ್ಕಾಗಿ ಜಪವು ಆಗತ್ಯವೆಂದು ಒಂದು ಸಲ ದ್ವಾದಶಾಕ್ಷರೀ ಮಂತ್ರವನ್ನೂ–ಓಂ ನಮೋ ಭಗವತೇ ವಾಸುದೇವಾಯ–ಉಪದೇಶ ಮಾಡಿದ್ದರು. ಆಗ ಅವರ ಜಪಯಜ್ಞ ನಿರಂತರವಾಗಿ ನಡೆದಿತ್ತು. ಅವರ ಖಾದೀ ಚೀಲದಲ್ಲಿ ಯಾವಾಗಲೂ ಜಪಸರ ಒಂದು ಇದ್ದೇ ಇರುತ್ತಿತ್ತು. ಅಸಹಕಾರದ ಒಳ್ಳೆಯ ಜಿಕ್ಕಟ್ಟಿನ ಪ್ರಸಂಗದಲ್ಲಿ ಅವರ ತಲೆದಿಂಬಿನ ಕೆಳಗೆ ಜಪಮಾಲೆ ಇದ್ದುದನ್ನು ಬೇಗ್ಗೆ ಅವರ ಹಾಸಿಗೆ ಸುತ್ತುವಾಗ ಕೃಷ್ಣದಾಸರು– ಗಾಂಧೀಜಿಯ ಬಂಗಾಲೀ ಕಾರ್ಯದರ್ಶಿ–ನೋಡಿದ್ದರು. ಆಗ ಜಪಮಾಲೆಯನ್ನು ಗಾಂಧೀಜೀ ಬಳಸುತ್ತಿದ್ದರು. ಕ್ರಮೇಣ ಅವರಿಗೆ ರಾಟೆ ತಿರುಗಿಸುವಾಗ ದೇವರ ನಾಮವನ್ನು ಸ್ಮರಿಸುವುದೇ ಸುಲಭವಾಗಿಯೂ ಚಲೋದಾಗಿಯೂ ಕಂಡಿತು. ಅದೇ ಅವರ ಜಪಸಾಮಗ್ರಿ ಆಯಿತು. ಬರಬರುತ್ತ ಎಲ್ಲರಿಗೂ ಈ ಹೊಸ ರೀತಿಯ ಜಪವನ್ನೇ ಬೋಧಿಸಿದರು. ಈಗಲೂ ಅವರು ರಾಟೆ ತಿರುಗಿಸುತ್ತ ಕುಳಿತಾಗ ಒಂದೊಂದು ಸಲ ಆ ಏಕಾಗ್ರತೆ ಕಾಣಬರುತ್ತದೆ.

ಅವರ ಪ್ರಾರ್ಥನೆಯಲ್ಲಿ ಈಗ ಮಾಲೆ–ಮಣಿಗಳು ಯಾವುವೂ ಇಲ್ಲ. ಮಾಲೆ ಎಣಿಸುವ ಜಪಧ್ಯಾನವಿರಲಾರದು ಅದು. ನಮ್ಮ ಉಚ್ಛ್ವಾಸ ನಿಶ್ವಾಸಗಳನ್ನು ಅನುಸರಿಸಿ ನಡೆಸುವ ಅಜಪಧ್ಯಾನ ಎಂಬ ಜಪಯಜ್ಞ ಒಂದಿದೆ. ಅದರಲ್ಲಿ ಹೊರಗಣ ಯಾವ ಪದಾರ್ಥವೂ ಬೇಕಾಗಿಲ್ಲ. ಗಾಂಧೀಜಿಯ ಧ್ಯಾನ ಅಂಥ ಅಜಪಧ್ಯಾನದ ಮೂಕ ಪ್ರಾರ್ಥನೆ ಇರಬೇಕು

ಆಸಿಸುತ್ತದೆ. ಅದು 'ವೈಯುಕ್ತಿಕ ಪ್ರಾರ್ಥನೆ. ಅದಕ್ಕೆ ಮಾತಿಲ್ಲ. ಸಂತತ ವಾಗಿ ನಡೆದಿರುವ ಜಪ ಅದು. ನಮಗೆ ತಿಳಿಯದೆಯೇ ಕೂಡ ನಡೆದಿರು ತ್ತದೆ.' ನಾನು ಮಾಡಿದುದೆಲ್ಲ–ಎಲ್ಲ ಕೆಲಸವೂ–ನಿನ್ನ ಪೂಜೆ ಎಂದು ಹಿರಿಯ ರೊಬ್ಬರು ಹಾಡಿದಾರೆ. ಏನೇ ಮಾಡಲಿ; ಊಟ, ಹವನ ಹೋಮ, ದಾನ ತಪಸ್ಸು ಎಲ್ಲವನ್ನೂ ನನಗೆ ಸಮರ್ಪಿಸುತ್ತಹೋಗು–ಎಂದು ಶ್ರೀಕೃಷ್ಣ ಅರ್ಜುನನಿಗೆ ಹೇಳಿದಾನೆ. ಗಾಂಧೀಜಿಯ ವೈಯುಕ್ತಿಕ ಪ್ರಾರ್ಥನೆಯ ಭಾವವೂ ಅದೇ. ಆ ಹಿರಿಯರು ಹೇಳಿದ ಆರಾಧನೆ. ಭಗವಾನನು ಹೇಳಿದ ಸಮರ್ಪಣೆ.

ಇಷ್ಟೆಲ್ಲ ಆದಮೇಲೂ ನಮ್ಮ ಪ್ರಾರ್ಥನೆಗೆ ದೇವರು ಕಿವಿಗೊಡು ತ್ತಾನೆಯೇ ಎಂದು ಕೇಳುವವರು ಇಲ್ಲದೆ ಇಲ್ಲ. ಹಣ ಕೊಟ್ಟರೆ ಪ್ರಪಂಚ ದಲ್ಲಿ ಬೇಕಾದ ವಸ್ತುವೆಲ್ಲ ಸಿಗುತ್ತದೆ. ಭೌತಿಕವಲ್ಲದ ಪ್ರಪಂಚದಲ್ಲಿ ಪ್ರಾರ್ಥನೆಯೇ ಹಣದ ಹಾಗೆ ನಾಣ್ಯವಿರಬೇಕು ಎಂಬ ತಪ್ಪು ತಿಳುವಳಿಕೆ ಆ ಪ್ರಶ್ನೆಯಲ್ಲಿದೆ. ಹೋಟೆಲಿನಲ್ಲಿ ಕೂತು ವಿದ್ಯುಚ್ಛಕ್ತಿಯ ಗುಂಡಿ ಒತ್ತಿದ ರಾಯಿತು ಬಂದು ನಿಲ್ಲುವ ಮಾಣಿಗಳ ಹಾಗೆಯೆ ದೇವರು? ಗಾಂಧೀಜಿ ಯನ್ನು ಎಷ್ಟೋ ಜನ ಆ ಪ್ರಶ್ನೆ ಕೇಳಿದಾರೆ; ನಿಮ್ಮ ಪ್ರಾರ್ಥನೆಗೆ ದೇವರು ಕಿವಿಗೊಡುತ್ತಾನೆಯೆ? ಇಂಥ ಪ್ರಶ್ನೆಗೂ ಗಾಂಧೀಜೀ ಬೇಸರಗೊಂಡಿಲ್ಲ. ಅದಕ್ಕೂ ಉತ್ತರ ಕೊಟ್ಟಿದಾರೆ. 'ಈ ವಿಷಯದಲ್ಲಿ ನಾನು ಬಹಳ ಅದೃಷ್ಟ ಶಾಲಿ. ಆತ ಎಂದೂ ಓಗುಡದೆ ಹೋಗಿಲ್ಲ. ವಿಪತ್ತು ಘೋರವಾದಾ ಗಲಂತೂ ಆತ ಅತಿ ಸಮೀಪದಲ್ಲಿಯೇ ಕಂಡಿದಾನೆ. ನನ್ನ ಬಾಳಿನಲ್ಲಿ ನಾನು ದೇವರಿಂದ ಪರಿತ್ಯಕ್ತನಾದೆ ಎಂಬ ಅನುಭವ ನನಗೆ ಒಂದೇ ಒಂದು ಗಳಿಗೆ ಯಾದರೂ ಬಂದಿಲ್ಲ.'

ಈ ಅನುಭವ ಸಾಮಾನ್ಯವಾಗಿ ಲಭಿಸೀತೆ? ನಾಯಮಾತ್ಮಾ ಬಲ ಹೀನೇನ ಲಭ್ಯಃ ಅಳ್ಳೆದೆಯವರಿಗೆ ಆತ್ಮಸಿದ್ಧಿ ಆದೀತೇ? ಧೀರರದು ದೇವರದಾರಿ. ಪ್ರೀತಮದಾಸ ಹೇಳಿದಾನೆ. ಆಳವಾಗಿ ಮುಳುಗಿದವಗೆ ಮುತ್ತು. ಮೇಲೆ ಕೂತವಗೆ ಬರೀ ಮಣ್ಣು.

---

## ಧರ್ಮಸಾರಥಿ

ಸೀತಾದೇವಿ ವಿನೋದಕ್ಕಾಗಿ ನಾರುಡೆ ಉಟ್ಟಿದಾಳೆ. ಶ್ರೀರಾಮ ಚಂದ್ರನು ಅದನ್ನು ನೋಡಿ ನಕ್ಕು ತಾನೂ ಉಡುತ್ತಿದಾನೆ. ಮುಂದೆ ತಮಗೆ ವನವಾಸ ಕಾದಿದೆ. ಈ ನಾರುಡೆ ಆ ರಾಮಾಯಣದ ಪೀಠಿಕೆಯೇ ಆಗಲಿದೆ. ಅದು ಯಾವುದನ್ನೂ ರಾಘವನು ಯೋಚಿಸುತ್ತಿಲ್ಲ. ಹರ್ಷ ದಿಂದ ನಾರುಡೆಯನ್ನು ವರ್ಣಿಸುತ್ತಿದಾನೆ.

**ತಪಸ್ಸಂಗ್ರಾಮ ಕವಚಂ ನಿಯಮದ್ವಿರದಾಂಕುಶಃ।**
**ಖಲೀನ ಮಿಂದ್ರಿಯಾಶ್ವಾನಾಂ ಗೃಹ್ಯತಾಂ ಧರ್ಮಸಾರಥಿಃ॥**

ಇದು ತಪಸ್ಸೆಂಬ ಯುದ್ಧಕ್ಕೆ ಕವಚ; ನಿಯಮವೆಂಬ ಆನೆಗೆ ಅಂಕುಶ; ಇಂದ್ರಿಯಗಳೆಂಬ ಕುದುರೆಗಳಿಗೆ ಕಡಿವಾಣ; ಧರ್ಮಕ್ಕೆ ಸಾರಥಿ. ಸರಲ ಜೀವನವು ದೀಕ್ಷಾ ಜೀವನ. ದೀಕ್ಷಾ ಜೀವನಕ್ಕೆ ಶಾರೀರ ತಪವೂ ಅಗತ್ಯ. ಈ ಮಾತನ್ನು ರಾಘವನು ತನ್ನ ಸತಿಗೆ ತಿಳಿಸುತ್ತಾನೆ. ಭಾಸ ಕವಿಯ ಪ್ರತಿಮಾ ನಾಟಕದಲ್ಲಿ ಈ ಸನ್ನಿವೇಶ ತುಂಬ ಹೃದ್ಯವಾಗಿದೆ.

ಗಾಂಧೀಜೀ ಶ್ರೀರಾಮನನ್ನು ನಂಬಿದವರು. ವ್ರತಜೀವನದಲ್ಲಿ ಪೂರಾ ನಿಷ್ಠೆಯುಳ್ಳವರು. ಜೀವನವೇ ಅವರಿಗೊಂದು ವ್ರತ; ಒಂದು ದೀಕ್ಷೆ. ಆದುದರಿಂದ ಅವರಿಗೆ ಬಾಳಿನಲ್ಲಿ ತಪಸ್ಸೇ ಪ್ರಧಾನ. ಅಂಥವರಿಗೆ ಖಾದೀ ಬಟ್ಟೆಯಲ್ಲಿ ಪವಿತ್ರತೆ ನಿಯಮ ನಿಷ್ಠೆಗಳು ಕಂಡರೆ ಏನಾಶ್ಚರ್ಯ?

ರಾಘವನಿಗೆ ಇದ್ದಂತೆ ಗಾಂಧೀಜಿಗೂ ಖಾದಿ ತನ್ನ ತಪಸ್ಸಂಗ್ರಾಮದ ಕವಚ; ಪವಿತ್ರ ಜೀವನದ ಅಂಕುಶ; ಸ್ವಾರ್ಥ ಲೋಭಗಳಿಗೆ ಕಡಿವಾಣ; ಅಹಂಕಾರ ಮಮಕಾರಗಳಿಗೆ ಮುಳ್ಳು. ಖಾದೀ ಇಲ್ಲದೆ ಅವರಿಗೆ ಬಾಳೇ ಶೂನ್ಯ. ರಾಟೆಯಿಂದಲೇ ಅವರಿಗೆ ಮುಕ್ತಿ. ಆಗ ನಾರು ಈಗ ದಾರ. ಎರಡೂ ಸಂದರ್ಭಗಳಲ್ಲಿ ಕಾಣುವುದು ಒಂದೇ ಮನೋವೃತ್ತಿ.

ಶ್ರೀರಾಮಚಂದ್ರನಿಗಿಂತ ಮಹಾತ್ಮರ ಕೈ ಒಂದು ಮೊಳ ದೂರ ಬಂದಿದೆ. ರಾಮನಿಗೆ ನಾರುಡೆ ವೈಯಕ್ತಿಕ ನಿಷ್ಠೆಯಾಗಿತ್ತು. ಇವರು ಇಡೀ ಸಮಾಜಕ್ಕೇ ಆ ನಿಷ್ಠೆಯನ್ನು ಕೊಡುತ್ತಿದಾರೆ; ಆ ವ್ರತವನ್ನು ತೊಡಿಸುತ್ತಿದಾರೆ. ಖಾದಿಯೇ ಸಮಾಜ ಸೌಭಾಗ್ಯದ ತಳಹದಿ ಎನ್ನು ತ್ತಾರೆ. ರಾಮನಿಗೆ ವನವಾಸಕ್ಕೆ ಮಾತ್ರ ಅದರ ಉಪಯೋಗ. ಗಾಂಧೀ ಜಿಗೆ ಯಾವಜ್ಜೀವವೂ ಅದೇ ಆಸರೆ. ನಿಜವಾಗಿಯೂ ಗಾಂಧೀ ಧರ್ಮಕ್ಕೆ–ಅಂಥದೊಂದು ಇದ್ದರೆ–ಖಾದಿಯೇ ಸರಿಯಾದ ಸಾರಥಿ.

ಖಾದಿಯ ಬಗ್ಗೆ ಗಾಂಧೀಜಿಗೆ ಎಷ್ಟು ನಂಬಿಗೆ ಇದೆ ಎಂಬುದನ್ನು ನಾಡಿಗೆ ನಾಡೇ ಬಲ್ಲದು. ಖಾದಿ ಬಡಬಗ್ಗರ ಸ್ವರಾಜ್ಯಮಂತ್ರ. ಲೋಕ ಮಾನ್ಯ ಟಿಳಕರು 'ಸ್ವರಾಜ್ಯ ನಮ್ಮ ಜನ್ಮಸಿದ್ಧ ಹಕ್ಕು' ಎಂದು ಸ್ವರಾಜ್ಯ ಮಂತ್ರದ ಮೊದಲ ಅರ್ಧವನ್ನು ಹೇಳಿದರೆ, 'ರಾಟೆಯೇ ಸ್ವರಾ ಜ್ಯದ ಹಾದಿ' ಎಂದು ಗಾಂಧೀಜೀ ಉತ್ತರಾರ್ಧವನ್ನು ಹೇಳಿದರು. ಸ್ವಾತಂತ್ರ್ಯ ಸಾಧನೆಗೆ ನಾನಾ ದೇಶಗಳಲ್ಲಿ ನಾನಾ ಕಾರ್ಯಕ್ರಮಗಳನ್ನು ಅವಲಂಬಿಸಿದಾರೆ. ನಮ್ಮ ದೇಶದಲ್ಲೇ ಬೇರೆ ಬೇರೆ ಗುಂಪುಗಳು ಬೇರೆ ಬೇರೆ ಹಾದಿಗಳನ್ನು ಹುಡುಕುತ್ತಿವೆ. ಗಾಂಧೀಜಿಗೆ ಮಾತ್ರ ರಾಟೆ ಇಲ್ಲವೆ ಸ್ವರಾಜ್ಯವಿಲ್ಲ. ಸ್ವರಾಜ್ಯವೆಂದರೆ ಇಂಗ್ಲಿಷರ ಅಧಿಕಾರ ತಪ್ಪಿಸಿ ದೇಶೀಯ ರಲ್ಲಿ ಶ್ರೀಮಂತರಾದವರ, ಬಲಿಷ್ಠರಾದವರ ಕೈಗೆ ರಾಜ್ಯ ಕೊಡುವುದು ಅಲ್ಲ. ರಾಗಿ ಬೀಸುವ ಕೈಗೂ ಸ್ವತಂತ್ರತೆ ಬೇಕು; ಬರಿಯ ರಾಯರಿಗಷ್ಟೆ ಅಲ್ಲ. ರೈತರಿಗೆ, ಬಡಬಗ್ಗರಿಗೆ ಸ್ವಾತಂತ್ರ್ಯವಿಲ್ಲದ ಸ್ವರಾಜ್ಯ ಸ್ವರಾಜ್ಯವಲ್ಲ. ರಾವಣ ರಾಜ್ಯ ತಪ್ಪಿ ಕುಂಭಕರ್ಣ ರಾಜ್ಯ ಆದೀತು. ಗಾಂಧೀಜಿಗೆ ಅಂಥದು ಬೇಕಿಲ್ಲ. ಹಾಗೆ ಮಾಡುವುದು 'ಜನರಿಗೆ ದ್ರೋಹವಾದೀತು.

ಅವರು 'ಮೂಕ ಜನಜಂಗುಳಿಯ ಪ್ರತಿನಿಧಿ. ಎಲ್ಲ ತರದ ಅನ್ಯಾಯಗಳಿಂದ ತುಳಿಯಲ್ಪಟ್ಟ ಬಡ ಕುರಿಗಳಿಗಾಗಿಯೇ ಅವರ ಇಡಿಯ ಬಾಳು ದತ್ತವಾಗಿದೆ. ಬಾಳಿನಲ್ಲಿ ಗಳಿಗೆ ಗಳಿಗೆಯೂ ಅವರಿಗೆ ಅದೇ ಚಿಂತೆ. 'ಅವರಿಗಾಗಿ ಬದುಕಬೇಕು; ಅವರಿಗಾಗಿ ಮಡಿಯಬೇಕು. ಎಲ್ಲ ವಿಶ್ವಾಸ ಭಕ್ತಿಗಳಿಗಿಂತ ಬಡವರ ಮೇಲಿನ ಭಕ್ತಿ ವಿಶ್ವಾಸಗಳೇ ನನಗೆ ಹೆಚ್ಚಿನವು. ನೀವೆಲ್ಲರೂ ನನ್ನನ್ನು ಕೈಬಿಟ್ಟರೂ ಸರಿ; ಕೊಂದರೂ ಸರಿ. ಅವರಿಗಾಗಿ ನಾನು ಈ ರಾಟೆಯನ್ನು ಹಿಡಿದೇನು; ಬಿಡಲಾರೆ. ರಾಟೆಯನ್ನು ಬಿಟ್ಟರೆ ಆ ಕೋಟ್ಯಾನುಕೋಟಿ ಮೂಕ ಜನ ನಾಶವಾದಾರು. ದೇವರ ಮುಂದೆ ನಾನು ಅದಕ್ಕೆ ಉತ್ತರಕೊಡಬೇಕಾದೀತು.'

'ಒರಿಸ್ಸಾಕ್ಕೆ ಹೋಗಿ ಅಲ್ಲಿನ ಜೀವಚ್ಛವಗಳನ್ನು ನೋಡಿ. ಎಂಥ ಭೀಷಣ ದಾರಿದ್ರ್ಯದಲ್ಲಿ ಮುಳುಗಿದಾರೆ ಅವರು. ಆ ಲಕ್ಷೋಪಲಕ್ಷ ಜನರಿಗೆ ಹಿಡಿ ಅನ್ನ ದೊರೆವ ಮಾರ್ಗ ಹುಡುಕುವುದಲ್ಲವೆ ನಮ್ಮ ಮೊದಲನೆಯ ಕೆಲಸ?' ಖಾದಿಯೇ ಆ ಮಾರ್ಗ. ಅದು ಬಡವರ ಕಾಮಧೇನು. ಅನಾಥ ವಿಧವೆಯರ ಜೀವನೋಪಾಯ. ಅದಕ್ಕೆ ಬಂಡವಾಳವೂ ಅಷ್ಟರಲ್ಲೇ ಇದೆ.

ಹಿಂದುಸ್ಥಾನದ ಜನ ನಿರುದ್ಯೋಗದ ನರಕದಲ್ಲಿ ಬಿದ್ದಿದಾರೆ. ಮೊದಲು ಅವರಿಗೆ ರಾಟೆಯೇ ಧನವಾಗಿತ್ತು. ನಾಡಿನಲ್ಲಿ ಬಂಗಾರದ ಹೊಗೆ ಆಡುತ್ತಿದ್ದಾಗ ನಮಗೆ ಆಸರೆ ಆಗಿದ್ದುದು ರಾಟೆ. ಮತ್ತೆ ನಾಡಿಗೆ ಆ ಸ್ಥಿತಿ ಬರಲು ಅದೇ ಉಪಾಯ. ಹಿಂದುಸ್ತಾನದ ಸ್ವಾತಂತ್ರ್ಯ ಯುದ್ಧಭೂಮಿಯಲ್ಲಿ ಹೋಗಲಿಲ್ಲ. ನಮ್ಮ ರಾಜ್ಯ ಹಾಳಾದುದು ಇಂಗ್ಲಿಷರು ನಮ್ಮ ಕೋಟೆಗಳ ಮೇಲೆ ಗುಂಡಿನ ಮಳೆ ಸುರಿಸಿದಾಗಲ್ಲಲ್ಲ. ನಮ್ಮ ನೂಲುವ ಜನರ ಹೆಬ್ಬೆರಳನ್ನು ಅವರು ಕತ್ತರಿಸಿದಾಗ; ಅವರಿಗೆ ಸಣ್ಣ ಪುಟ್ಟ ಸಾಲಗಳನ್ನು ಕೊಟ್ಟು ಅವರ ಕಸಬನ್ನು ಹಾಳು ಮಾಡಿದಾಗ. ಹಿಂದುಸ್ತಾನದ ಪಾರತಂತ್ರ್ಯದ ಕತೆ ಎಂದರೆ ದಲಾಲಿಗಳ ದರೋಡೆ; ಕಲಿಗಳ ಕದನವಲ್ಲ. ಇದೆಲ್ಲ ಗಾಂಧೀಜಿಯ ಕಣ್ಣಿಗೆ ಕಟ್ಟಿದಹಾಗೆ ಮತ್ತೊಬ್ಬರ ಕಣ್ಣಿಗೆ ಕಟ್ಟಿಲ್ಲ.

'ರಾಟಿಯೇ ಜನರ ಸರ್ವಸ್ವ. ಅದು ಮಾಯವಾದಾಗಲೇ ಜನರ ಸ್ವಾತಂತ್ರ್ಯ ಮಾಯವಾಯಿತು. ಬೇಸಾಯಕ್ಕೆ ಜೊತೆಯಾಗಿ ಆಸರೆಯಾಗಿ ರಾಟಿ ಬೇಸಾಯಕ್ಕೆ ಒಂದು ಗೌರವಕೊಟ್ಟಿತು. ವಿಧವೆಯ ಗೆಳತಿ, ಹಸಿದವನಿಗೆ ಅನ್ನ, ರೋಗಿಷ್ಠತನಕ್ಕೆ ಮದ್ದು; ರಾಟಿ ಗ್ರಾಮಜೀವನದ ತಿರುಗಲಿ. ಏಳು ಸಾವಿರ ಹಳ್ಳಿ ಅದರಿಂದ ಸ್ವಸಂಪೂರ್ಣವಾಗಿದ್ದವು. ರಾಟಿ ಹೋದಾಗ ಅದರೊಡನೆ ಕೋಟಿ ವಿದ್ಯೆ ಹೋದವು.' ಹಳ್ಳಿಯ ಕೈಗಾರಿಕೆ ಅರಸನಿಲ್ಲದ ಸೇನೆಯಂತೆ ಆಯಿತು. ಇತರ ದೇಶಗಳಲ್ಲಿ ರಾಟಿ ಹೋಯಿತಲ್ಲ. ಅಲ್ಲಿನ ಜನರು ಹೇಗೆ ಸುಖವಾಗಿದಾರೆ? ಎಂದು ಕೇಳಬಹುದು. 'ಅಲ್ಲಿ ಆ ಜನಕ್ಕೆ ಅದರ ಬದಲು ಬೇರೆ ಉದ್ಯೋಗ ಸಿಕ್ಕಿತು. ನಮ್ಮಲ್ಲಿ ಏನಿದೆ?' ಅವರು ರಾಟಿಯನ್ನು ತಾವೇ ಬಿಟ್ಟರು. ಇನ್ನೊಂದು ಸಿಕ್ಕ ಮೇಲೆಯೆ ಬಿಡುವ ಯತ್ನ ಮಾಡಿದ್ದು. ಇಷ್ಟೆಲ್ಲ ಆದರೂ ಅವರಿಗೆ ಸುಖವಿದೆಯೇ ಎಂಬ ಪ್ರಶ್ನೆ ಇದ್ದೇ ಇದೆ. ಅರ್ಥಶಾಸ್ತ್ರ ಮರಾರಿಯ ಹಾಗೆ ಮೂರಾಬಟ್ಟೆ ಹಿಡಿಯಬಾರದು. 'ಖಾದೀ ಅರ್ಥಶಾಸ್ತ್ರವು ರಾಜಕಾರಣ ಸಮಾಜ ಶಾಸ್ತ್ರಗಳಿಗೆ ತೀರಾ ಹತ್ತಿರ ಸಂಬಂಧವುಳ್ಳದು. ಆ ಸಂಬಂಧ ತರ್ಕವಿಚಾರಕ್ಕೆ ಸಿಗುವಂಥದು ಅಲ್ಲ. ರಾಟಿ ಒಂದೇ ಜಗತ್ತಿನಲ್ಲೆಲ್ಲ ಹರಡಿ ಶಸ್ತ್ರಾಸ್ತ್ರಗಳನ್ನು ಮೂಲೆಗೆ ಕೂಡಿಸಬಲ್ಲ ಮಹಾಶಕ್ತಿ.'

ಆಗಲೇ ನಿಜವಾದ ಮಾನವ ಸಂಸ್ಕೃತಿ ಪ್ರಪಂಚದಲ್ಲಿ ಹರಡೀತು. ಹಿಂಸೆಯ ರಾಕ್ಷಸ ಹತವಾಗಿ ಹೋದಾನು. ಹಿಂದುಸ್ಥಾನದ ಸಂಸ್ಕೃತಿ ಧರ್ಮವನ್ನು ನಂಬಿ ಅಂಥದೊಂದು ಸ್ವರ್ಣಯುಗವನ್ನು ಕಂಡಿತ್ತು. ಮತ್ತೆ ಬಂದೀತೇನು ಆ ಕಾಲ?

'ಹಿಂದುಸ್ಥಾನದ ಸಂಸ್ಕೃತಿ ಹಿಂದುಸ್ಥಾನದ ಹಳ್ಳಿಗಳಲ್ಲಿದೆ. ಯೂರೋಪು ಅಮೆರಿಕೆಗಳ ನಾಗರಿಕತೆ ನಮ್ಮ ನಾಡಿನ ನಾಲ್ಕು ನಗರಗಳಲ್ಲಿ ಕಂಡೀತಾಗಲಿ ಅದು ಪರದೇಶೀಯರು ಕಟ್ಟಿದ ಗಾಳಿಗೋಪುರ. ಅದು ಬಹಳದಿನ ಬಾಳಲಾರದು. ಕಾಲಗತಿಗೆ ಮಣಿಯದೆ ನಿಲ್ಲಬಲ್ಲ ಸಂಸ್ಕೃತಿ ಎಂದರೆ ಹಳ್ಳಿಗಳ ಕೈಗಾರಿಕೆಯದೇ. ನಮ್ಮ ತ್ರಿಕರಣ ಸಂಕಲ್ಪ ಇಲ್ಲದೆ ಅದು ಮತ್ತೆ ಮೂಡುವುದು ಸಾಧ್ಯವಿಲ್ಲ. ನನ್ನ ಕಣ್ಣಿಂದ

ನೋಡಿದರೆ ನಿಮಗೆ ಖಾದಿಯ ಬೆಲೆ ತಿಳಿದೀತು. ಹಳ್ಳಿಹಳ್ಳಿಗೂ ಹೋಗಿ ರಾಟೆಯನ್ನೂ ಹಳ್ಳಿಯ ಕೈಗಾರಿಕೆಯನ್ನೂ ಹರಡಿ ನಿಜವಾದ ಸಂಸ್ಕೃತಿಯನ್ನು ಬಿತ್ತಿರಿ!

ಈ ಸಂಸ್ಕೃತಿಯಲ್ಲಿ ದೊಡ್ಡ ದೊಡ್ಡ ಯಂತ್ರಗಳಿಗೆ ಸ್ಥಾನವಿಲ್ಲ. ಭಾರಿಯಂತ್ರ ಭಸ್ಮಾಸುರನಂತೆ. ಮುಟ್ಟಿದುದನ್ನೆಲ್ಲ ಸುಡುತ್ತದೆ. ತನಗೂ ಸಾವು ತಪ್ಪಿದ್ದಲ್ಲ. ತನ್ನಿಂದಲೇ ತಾನು ನಾಶವಾದೀತು. ಸುಖಭೋಗದ ಮೋಹಿನಿ ಆಗಲೇ ಈ ಅಸುರನ ಕಣ್ಣುಮುಂದೆ ಸುಳಿದಿದಾಳೆ. ಗಾಂಧೀಜಿಗೆ ಭಾರಿಯಂತ್ರವು 'ಮಹಾಪಾಪ. ಹಾವಿನ ಹುತ್ತದಂತೆ. ಅದರಲ್ಲಿ—ಒಂದೇನು ನೂರೇನು? ಹಾವು ಇದ್ದಾವು. ಆ ಹುತ್ತ ಹೋದಾಗಲೆ ಜಗತ್ತಿಗೆ ಶಾಂತಿ. ಸಾಮ್ಯವಾದದ ಸಮಭಾಗ ಪದ್ಧತಿ ಅದಕ್ಕೆ ಸರಿಯಾದ ಮದ್ದಲ್ಲ. ಹುತ್ತದಲ್ಲಿ ಹಾವಿರಲು ಕೋಲಿನಿಂದ ಹುತ್ತದ ಬಾಯನ್ನು ಬಡಿದರೆ ಹಾವು ಸತ್ತೀತೆ?* ಯಂತ್ರವು ನಮ್ಮ ಕಾಮದಾಟ ಇದ್ದಹಾಗೆ. ಕಾಮಕ್ಕೆ ಬಲಿಯಾದವರಿಗೆ ಒಂದು ತಾಳಿ ಕಟ್ಟಿದರೆ ಅವರ ಜೀವಕ್ಕೆ ಸರ್ವಾನುಕೂಲವೂ ಆಯಿತೇ? ಹಣ ಸಮಭಾಗ ಮಾಡಿದ ಮಾತ್ರಕ್ಕೆ ಆತ್ಮ ಸ್ವಾತಂತ್ರ್ಯ ಸಿಕ್ಕೀತೇ?

ಹಾಗಾದರೆ ಮನುಷ್ಯ ಮೃಗದಂತೆ ಇರಬೇಕೆ? ಅವನಿಗೆ ಯಾವ ಉಪಕರಣವೂ ಬೇಡವೇ? ಅಡಿಗೆ ಮಾಡುವ ಒಲೆ, ಹೊಲ ಉಳುವ ನೇಗಿಲು, ದಾರ ತೆಗೆವ ರಾಟೆ—ಇವೆಲ್ಲ ಯಂತ್ರಗಳಲ್ಲವೇ? ನೀರು ಸೇದಲು ಗಾಲಿ, ಕಟ್ಟಿಗೆ ಒಡೆಯಲು ಕೊಡಲಿ, ಹುಲ್ಲು ಕುಯ್ಯಲು ಕುಡುಗೋಲು ಇಲ್ಲದಿದ್ದರೆ ಬದುಕು ಹೇಗೆ ಸಾಗಬೇಕು?

ಹೌದು. ಆ ಉಪಕರಣ ಬೇಕೇಬೇಕು. ಮನುಷ್ಯಜೀವನವನ್ನು ಉತ್ತಮಗೊಳಿಸಲು ಸಾವಿರಾರು ವರ್ಷಗಳಿಂದ ಮಾಡಿದ ಸಾಧನೆಯ ಫಲ ಅವು. ಗಾಂಧೀಜೀ ಹುಚ್ಚು ಹುಚ್ಚಾಗಿ ಯಾವ ಯಂತ್ರವೂ ಬೇಡ

* ಒಡಲ ದಂಡಿಸಿ ಮುಕ್ತಿ ಪಡೆವೆನೆಂಬುವ ಹೆಡ್ಡ ।
ಬಡಿಗೆಯಲಿ ಹುತ್ತ ಹೊಡೆಯಲಡಗಿಹ ಸರ್ಪ ।
ಮಡಿಯುವದೆ ಹೇಳು ಸರ್ವಜ್ಞ ॥

ಎನ್ನುವುದಿಲ್ಲ. ‘ಉಂಟೇ? ನಮ್ಮ ಮೈಯೇ ಒಂದು ಕುಶಲವಾದ ಯಂತ್ರವಲ್ಲವೆ. ರಾಟೆಯೂ ಯಂತ್ರ. ಹಲ್ಲಿನ ಸಂದಿಯೊಳಗೆ ಸೇರಿದ ಕಸ ತೆಗೆವ ಕಡ್ಡಿಯೂ ಒಂದು ಯಂತ್ರವೇ. ಯಂತ್ರವನ್ನಲ್ಲ ಬೇಡ ಎನ್ನುವುದು; ಯಂತ್ರವೆಂಬ ಮಾಯಾಮೃಗದ ಭ್ರಾಂತಿಯನ್ನು. ಶರೀರಶ್ರಮ ಕಡಮೆ ಮಾಡಬೇಕೆಂಬ ಭ್ರಾಂತಿ ಬೆಳೆದುಹೋಗುತ್ತಿದೆ. ದುಡಿತ ಕಡಮೆ ಆಗಿ ಆಗಿ, ಜನ ಬೀದಿಯಲ್ಲಿ ಹಸಿವಿನಿಂದ ಸಾಯಲಾಗಿ ಬೀಳುತ್ತಾರೆ. ಸಾವಿರಾರು ಜನರ ಬೆನ್ನಿನ ಮೇಲೆ ಒಂದು ಹಿಡಿ ಜನರು ಸವಾರಿ ಮಾಡಲು ಇಂದು ಯಂತ್ರವು ಅನುಕೂಲ ಸಾಧನವಾಗಿದೆ. ಇದೆಲ್ಲದರ ಹಿಂದಿನ ಉದ್ದೇಶ ದುಡಿತ ಕಡಮೆ ಮಾಡುವ ಔದಾರ್ಯವಲ್ಲ; ಲೋಭ. ಇದನ್ನು ನಾನು ಸಹಿಸಲಾರೆ. ನನಗೆ ಮುಖ್ಯವಾದುದು ಮಾನವ ಜೀವನ. ಯಂತ್ರವು ಮನುಷ್ಯನ ಕೈಕಾಲು ಕಟ್ಟಿಹಾಕಿದರೆ ಅದು ಸರಿಯಲ್ಲ.’

ಯಂತ್ರಗಳಲ್ಲೂ ನಾನಾ ರೀತಿ. ‘ಬಟ್ಟೆ ಹೊಲಿವ ಯಂತ್ರ ಜನರಿಗೆ ಉಪಕಾರಿ. ಅಂಥದು ಬೇಕು.’ ಹಾಗಾದರೆ ಬೈಸಿಕಲ್ಲು ಮೋಟಾರು ಏಕೆ ಬೇಡ? ‘ಇಲ್ಲ. ಅವು ಮನುಷ್ಯ ಜೀವನಕ್ಕೆ ಅವಶ್ಯವಲ್ಲ. ಮೋಟಾರು ವೇಗದಿಂದ ಓಡಾಡಬೇಕಾದ ಅಗತ್ಯವೇನಿದೆ? ಸೂಜಿಯೋ, ಅದು ಹಾಗಲ್ಲ. ಬಹಳ ಮುಖ್ಯ.’ ಈ ಸೂಜಿಗಳನ್ನು ಹೊಲಿವ ಯಂತ್ರಗಳನ್ನು ಮಾಡಲು ಕಾರಖಾನೆಗಳು ಬೇಡವೆ ಮತ್ತೆ? ಇದೊಂದು ಕೌಪೀನಸಂರಕ್ಷಣಾರ್ಥದ ಪಟಾಟೋಪ ಕತೆಯೇ ಆದೀತಲ್ಲ. ‘ನಿಜ. ಕಾರಖಾನೆ ಬೇಕಾದೀತು. ಅದನ್ನು ರಾಷ್ಟ್ರದ ಆಡಳಿತಕ್ಕೆ ಒಳಪಡಿಸಿ ನಡೆಸಬಹುದು. ಲೋಭ ದುರಾಸೆಗಳಲ್ಲದೆ ಮನುಷ್ಯನಿಗೆ ಸಹಾಯವಾಗುವುದು ಯಂತ್ರದ ಉದ್ದೇಶ ಆಗಿರಬೇಕು. ಮೈಯೇ ಯಂತ್ರ. ಯಂತ್ರವಾಗಲಿ ಮೈಯಾಗಲಿ ಆತ್ಮವಿಕಾಸಕ್ಕೆ ಅನುಕೂಲವಾಗಬೇಕು. ಪ್ರತಿಕೂಲವಾದರೆ ತ್ಯಾಜ್ಯವೇ ಸರಿ.’

ಗಾಂಧೀಜಿಗೆ ಅಹಿಂಸೆಯೇ ಧರ್ಮ. ಭಾರೀ ಕಾರಖಾನೆಗಳು ಅಹಿಂಸೆಯ ಹಾದಿಗೆ ಹೊಂದುವುದಿಲ್ಲ. ಅದು ಆರ್ಥಿಕ ಹಿಂಸೆಯ ರಾಕ್ಷಸ. ಕಾರಖಾನೆಗಳ ತಳಪಾಯವೇ ಹಿಂಸೆ, ಆಕ್ರಮಣ. ಪಡುವಲ ನಾಗರಿಕತೆಗೆ

ಅಂಟಿದ ರೋಗ ಇದು. ಅದನ್ನು ದೂರ ಇರಿಸಬೇಕು. ಅದಕ್ಕೆ ಬೆರಳೇ ಕೊಡಬಾರದು.

ಆದರೆ ದಿನದಿನಕ್ಕೆ ಯಂತ್ರ ನಮ್ಮನ್ನು ಸೆಳೆಯುತ್ತಿದೆ. ನಮ್ಮ ಅನುಕೂಲಕ್ಕಾಗಿ ಹೊಸ ಹೊಸ ಯಂತ್ರ ಬರುತ್ತಲೇ ಇವೆ. ಈ ಪ್ರವಾಹವನ್ನು ನಿಲ್ಲಿಸಲು ಸಾಧ್ಯವೇ? ಎಲ್ಲರೂ ಜಾಣರಾಗಿ ಉಣ್ಣುತ್ತಿರಲು ನಾವು ಮಾತ್ರ ಉಪವಾಸ ಬೀಳಬೇಕೇ ಈ ದರಬಾರಿನಲ್ಲಿ? ಈ ಉಪವಾಸ ಯಾವ ದೇವರಿಗೆ ಪ್ರೀತಿ? ಗಾಂಧೀಜಿಗೆ ಈ ದಾಳಿ ನಿಲ್ಲಿಸಲು ಅಸಾಧ್ಯ ಎನಿಸಿಲ್ಲ. ಅದಕ್ಕೆ ಹಿಂದುಸ್ತಾನಕ್ಕಿಂತ ಹೆಚ್ಚಿನ ಪುಣ್ಯಭೂಮಿ ಇಲ್ಲ. 'ಇಲ್ಲಿಯೂ ಆ ಹುಚ್ಚು ಹೊಳೆಗೆ ಅಡ್ಡಕಟ್ಟುವುದಾಗದಿದ್ದರೆ ಹಿಂದುಸ್ತಾನವೂ—ಅದರ ಹಿಂದೆಯೇ ಇಡೀ ಜಗತ್ತೂ ನಾಶವಾಗಿ ಹೋದೀತು.' ಗಾಂಧೀಜಿಗೆ ನಿಷ್ಠೆಯೇ ಗುರಿ. ಕರ್ಮ ಸಾಕು, ಫಲದ ಗೋಜಿಲ್ಲ. 'ಶ್ರದ್ಧೆಯಿಂದ ಮಾಡಿದ ಕಲ್ಯಾಣಕೃತಿ ಎಂದಿಗೂ ಬರಡಾಗಲಾರದು. ಇಂದಿಲ್ಲ ನಾಳೆ ಫಲಿಸಿಯೇ ತೀರಬೇಕು.'

ಪ್ರಪಂಚವೆಲ್ಲ ಕುದುರೆ ಸವಾರಿ ಮಾಡುತ್ತಿರುವಾಗ ನಮ್ಮ ಹುಡುಗರು ಮಾತ್ರ ಕೋಣನ ಬೆನ್ನಿನ ಮೇಲೆ ಮಲಗಬೇಕೆ? ಯಂತ್ರಯುಗದಲ್ಲಿ ಖಾದಿಯ ಮಾತು ನಮ್ಮ ಸುತ್ತ ನಾವೇ ಲಕ್ಷ್ಮಣನ ಗೆರೆ ಎಳೆದಂತಾಗದೇ? ಎಣ್ಣೆ ಬಂದಾಗ ಕಣ್ಣು ಮುಚ್ಚಿದ ಅಲ ಇದು. ಹೀಗೆ ನಮ್ಮಲ್ಲಿ ಅನೇಕರಿಗೆ ಅನುಮಾನ ಇದೆ. ಗಾಂಧೀಜಿಗೆ ಹಾಗೆ ಅನಿಸುವುದಿಲ್ಲ ಖಾದೀ ಸಾಮ್ರಾಜ್ಯದಲ್ಲೂ ದೇಶದೇಶಗಳ ನಡುವೆ ಕೊಡತಕ್ಕೊಳ್ಳುವ ವ್ಯವಹಾರ ಉಂಟು. ಅವರಲ್ಲಿ ಇಲ್ಲದುದು ಇವರಿಂದ, ಇವರಲ್ಲಿ ಇಲ್ಲದುದು ಅವರಿಂದ ತೆಗೆದುಕೊಂಡಾರು—ಕೊಟ್ಟಾರು.

ಆದರೆ ಬದುಕನ್ನು ಅತಿ ಸರಳವಾಗಿ ಮಾಡಿದರೆ ಪರದೇಶದಿಂದ ನಮಗೆ ಬೇಕಾಗುವುದಾದರೂ ಏನು? ಈ ಸರಳತೆಯಲ್ಲಿ ಸೌಂದರ್ಯ್ಯವು ತಕ್ಷಕಾಯ ಸ್ವಾಹಾ ಎಂಬಂತೆ ಯಂತ್ರೋಪಕರಣಗಳನ್ನೇ ಹೊಡೆದು ಹಾಕುವಂತಿದೆಯಲ್ಲ. ಸರಳತೆಯ ಬಾಣದಿಂದ ಯಂತ್ರಕ್ಕೇ ಗುರಿಯಿಟ್ಟ ಹಾಗಿದೆ. ಅಮೆರಿಕದ ಅಧ್ಯಕ್ಷ ಹೂವರ್ ಮನೆಗೆರಡು ರೇಡಿಯೋ

ತಲೆಗೆರಡು ಕಾರು ತನ್ನ ಗುರಿ ಎನ್ನುತ್ತಿದ್ದ. ಎರಡು ಬೇಡ; ಒಂದಾದರೂ ಬರುವ ದಿನ ಇದಿರು ನೋಡಬಾರದೇ?

ಗಾಂಧೀಜಿಗೆ ಈ ಮಾತಿನಲ್ಲಿ ಹುರುಳಿಲ್ಲ. ಪ್ರಪಂಚವೆಲ್ಲ ಕಾರೇ ತುಂಬಿಹೋದರೆ ನಮ್ಮ ಕಾಲೇ ನಮಗೆ ಬೇಡವಾದಾವು. ಉಪಯೋಗವಿಲ್ಲದೆ ಮೂಲೆಗೆ ಬಿದ್ದಂತಾಗಿ ವಿಜ್ಞಾನಿಗಳ ತತ್ವದಂತೆ ಅವು ಉದುರಿ ಹೋಗಬೇಕಾಗಿ ಬಂದೀತು. (ನಿರುಪಯೋಗವಾದ್ದರಿಂದ ನಮ್ಮ ಬಾಲ ಸವೆದು ಹೋಗಿ ನಾವು ಮನುಷ್ಯರಾಗಿಲ್ಲವೆ?) 'ಹಿಂದುಸ್ತಾನದಲ್ಲಿ ಹಳ್ಳಿ ಹಳ್ಳಿಗೂ ರೇಡಿಯೋ ಆಗುವ ದಿನ ನನ್ನ ಕಾಲದಲ್ಲೇನು ಬಾರದು. ಮೂರು ಕೋಟಿ ಜನ ಮಾಡುವ ಕೆಲಸ ೩೦ ಸಾವಿರ ಜನ ಮಾಡಿದರೆ ನನಗೇನು ಆಕ್ಷೇಪಣೆ ಇಲ್ಲವಾಗಲಿ; ಇದರಿಂದ ಆ ೩ ಕೋಟಿ ಜನ ಸುಮ್ಮನೆ ಕಾಲುಚಾಚಿಕೊಂಡು ನಿರುದ್ಯೋಗಿಗಳಾಗಬಾರದು. ಅದೇ ಮುಖ್ಯ.'

'ಯಂತ್ರ ಬಂದರೆ ಆ ಮೂರು ಕೋಟಿ ಜನಕ್ಕೆ ಕೆಲಸ ಹಗುರಾಗಿ ಬೇಕಾದಷ್ಟು ವಿರಾಮ ಸಿಗುತ್ತದೆ.' ಯಾರೋ ಹೇಳಿದರು.

'ಯಾಕೆ ವಿರಾಮ? ಏನು ಹಾಕೀ ಆಡಬೇಕೇ?' ಎಂದರು ಗಾಂಧೀಜೀ.

ಯಂತ್ರಗಳಿಂದ ಸಮೃದ್ಧಿಯ ಕಾಲ ಬರುತ್ತದೆ ಎಂದು ಬಂದವರು ಸೂಚಿಸಿದರು. ಗಾಂಧೀಜೀ ಅವರ ಮೇಲೆಯೆ ತಿರುಗಿಬಿದ್ದರು. ಬಂದವರು ಅಮೆರಿಕದವರು. 'ಏನು ಸಮೃದ್ಧಿ ಸಮೃದ್ಧಿ? ಕೋಟಿಗಟ್ಟಲೆ ಚೀಲ ಗೋಧಿ ಬೆಳೆದು, ಅದನ್ನು ನಿಶ್ಚಿಂತೆಯಿಂದ ಸುಟ್ಟು ಬೂದಿಮಾಡುವುದು ನಿಮ್ಮಲ್ಲಿ ಮಾಡಿದಹಾಗೆ. ಇದೇ ಅಲ್ಲವೆ ಸಮೃದ್ಧಿ.' ಗಾಂಧೀಜೀ ಕೇಳಿದವರು.

'ಸುಡುವುದು ನಿಂತು ಹೋಗಿದೆ' ಅವರು ಹೇಳಿದರು. 'ಗೋಧಿ ಬೆಳೆಯಬೇಡಿರೆಂದು ರೈತರಿಗೆ ಲಂಚ ಕೊಡುತ್ತಿದಾರೆ ಈಗ. ಬಂಡವಾಳ ಸಿದ್ಧಾಂತ ತಂದ ವಿಪರೀತಕಾಲ ಅದು. ಈಗ ಕೋಳಿಯ ಮೊಟ್ಟೆ ದರ

ಇಳಿದದ್ದರಿಂದ ಜನ ಹೊಡೆದಾಡುವಾಗ ಹೊಟ್ಟೆಯೇ ಕಲ್ಲಿನಂತೆ ಹಾರಾಡುತ್ತದೆ.'

'ಈ ಅವಸ್ಥೆಯೇ ನಾನು ಬೇಡ ಎನ್ನುವುದು. ಎಲ್ಲರಿಗೂ ಹೊಟ್ಟೆ ತುಂಬ ಹಿಟ್ಟು, ಮೈತುಂಬ ಬಟ್ಟೆ, ತಕ್ಕಮಟ್ಟಿಗೆ ವಿದ್ಯೆ–ಇಷ್ಟಾದರೆ ಸಮೃದ್ಧಿ' ಇದನ್ನೇ ಸಮೃದ್ಧಿ ಎಂದು ನೀವೂ ಕರೆದರೆ ಸರಿ. ಅದು ಬಿಟ್ಟು ಹೊಟ್ಟೆ ಒಡೆಯುವಂತೆ ಅನ್ನ ಕೂರುವುದು, ಉಪಯೋಗವಿಲ್ಲದಿದ್ದರೂ ಮನೆತುಂಬ ಸಾಮಾನು ಕೂಡಿಹಾಕುವುದು ಸರಿಯಲ್ಲ. ಹಾಗೆಯೆ ಹಿಂದುಸ್ಥಾನದಲ್ಲಿ ಬಡತನ, ಕೊಳಕು, ಧೂಳು ಯಾವುದೂ ಬೇಕಾಗಿಲ್ಲ.'

ಈ ದೃಢ ಮನಸ್ಸಿಗೆ 'ನಮ್ಮ ಹೆಂಗುಸರ ತೆಳುವಾದ ಸೀರೆ, ನಮ್ಮ ಗಿರಣಿ ಪಂಜೆ ಎಲ್ಲಾ ನಮ್ಮ ನಾಡಿನ ಗುಲಾಮಗಿರಿಯ ಗುರುತು–ಅವಮಾನದ ಬಾವುಟ' ಆಗಿ ಕಾಣುತ್ತದೆ. 'ನನ್ನ ದುಃಖದ ಆಳವನ್ನು ನಿಮಗೆ ತಿಳಿಸಲಾರೆ. ನನಗೆ ಮುಪ್ಪಿನ ಮರುಳು ಕವಿದಿದೆ ಎನ್ನುತ್ತೀರಾ? ನಾನು ನಡೆದಿರುವ ದಾರಿ ತಪ್ಪು ಎನ್ನುತ್ತೀರಾ? ಯಾರಾದರೂ ಹಾಗೆ ಪ್ರಮಾಣಿಸಿಕೊಡಿ. ನನ್ನ ಹೆಮ್ಮೆಯನ್ನೆಲ್ಲ ನುಂಗಿಕೊಂಡು ಅವರ ಕಾಲಿಗೆ ಬೀಳುತ್ತೇನೆ. ನಿಮಗೆ ಧೈರ್ಯ ಇದ್ದರೆ ನನ್ನನ್ನು ಸೋಲಿಸಿರಿ. ಇಲ್ಲದಿದ್ದರೆ ನನ್ನ ದಾರಿಗೆ ಬನ್ನಿ. ಖಾದೀ ಚಳುವಳಿಯಲ್ಲಿ ಸೇರಿಕೊಳ್ಳಿ.'

ಖಾದಿಯ ವಿಷಯವಾಗಿ ಗಾಂಧೀಜೀ ಇಪ್ಪತ್ತು ವರ್ಷದಿಂದ ಮಾತಾಡುತ್ತಿದಾರೆ, ದುಡಿಯುತ್ತಿದಾರೆ. 'ನಾನು ಇಲ್ಲಿಗೆ ಬಂದಿರುವುದು ಖಾದೀ ಮಾರಲಿಕ್ಕೆ, ಖಾದೀಗಾಗಿ ಭಿಕ್ಷೆ ಬೇಡಲಿಕ್ಕೆ' ಎಂದು ಮನಸು ಬಿಚ್ಚಿ ಹೇಳಿದಾರೆ. ಒಂದು ಕಡೆ ಖಾದೀಭಂಡಾರ ಪ್ರಾರಂಭಿಸಬೇಕಾಗಿತ್ತು. ಗಾಂಧೀಜೀ ಬಂದರು. ಬಂದವರೇ ಗಜಕಡ್ಡಿ, ಕತ್ತರಿ, ಲೆಕ್ಕದ ಪುಸ್ತಕ ಮುಂದಿಟ್ಟುಕೊಂಡು ಮಾರಲಿಕ್ಕೆ ಕೂತರು. ಭಾಷಣವಿಲ್ಲ, ಸಂಭಾಷಣೆ ಇಲ್ಲ. ಮುಂದಿನ ಊರಿಗೆ ಹೋದ ಮೇಲೆ ಅಲ್ಲಿ ಹೇಳಿದರು. 'ಕೆಲಸವೇ ಮಾತು. ಅದಕ್ಕಾಗಿಯೇ ಅಲ್ಲಿ ಮಾತಾಡಲಿಲ್ಲ.' ಯಾರಾದರೂ ತಮ್ಮ ಹಸ್ತಾಕ್ಷರ–autograph ಕೇಳಿದರೆ ಸರಿ; ಖಾದೀ ಉಟ್ಟುಕೊಂಡು ಬನ್ನಿ, ಕೊಡುತ್ತೇನೆ ಎಂದು ಹೇಳಿ ಅವರಿಗೆ ಖಾದೀ ಉಡಿಸಿಬಿಡುತ್ತಿದ್ದರು.

ಎಷ್ಟೋ ಜನ ಶ್ರೀಮಂತಿನಿಯರು, ಅಧಿಕಾರಿಗಳ ಮನೆಯವರು ಗಾಂಧೀಜಿಯ ಬಳಿಗೆ ಬಂದು ಹಿಂದಿರುಗುವಾಗ ಖಾದೀ ಉಟ್ಟುಕೊಂಡು ಹೋಗಿದಾರೆ. ಹೋದ ಹೋದ ಕಡೆ ಖಾದಿಯ ಬಗ್ಗೆ ಹಟ ಹಿಡಿದು ಸಾಧಿಸಿದಾರೆ. ಮೆತ್ತಗೆ ಖಾದೀ ಚೀಲ ತೊಡಿಸಿದ್ದರೆ ಕೂತ ಕಡೆ ಅದನ್ನು ಹರಿದು ಒಳಗಿನ ಮೆತ್ತೆ ಖಾದಿಯೋ ಅಲ್ಲವೋ ಪರೀಕ್ಷಿಸಿ ನೋಡಿದಾರೆ. ಬೇರೆ ಬೇರೆ ತರಗಳಲ್ಲಿ ಅದನ್ನು ನೆಡುತ್ತ ಬಂದಿದಾರೆ.

ಇಷ್ಟಾದರೂ ಈ ಖಾದಿಯ ಮಾತು ಸಾಕುಮಾಡಬಾರದೆ? ಏಕೆ ಈ ಗಂಟಲುನೋವು ಎಂದವರಿದಾರೆ. ಅವರಿಗೆ ಇದೆಲ್ಲ ಭ್ರಾಂತಿಯಾಗಿ ಕಂಡಿದೆ. ಗಾಂಧೀಜಿಗೆ ಅದು ಸಾಧ್ಯವೇ? 'ಸಾವಿನ ದವಡೆಯೊಳಗೇ ಸಿಕ್ಕಿದಾಗಲೂ ಪ್ರಹ್ಲಾದ ಹರಿಯ ನಾಮ ಬಿಟ್ಟನೇ? ನನ್ನ ಇಷ್ಟಮಂತ್ರ ನಾನು ಬಿಡಲೇ? ಪ್ರಹ್ಲಾದನಿಗೆ ಬಂದ ಬಾಧೆ ನನಗೆ ಯಾವುದೂ ಇಲ್ಲವಲ್ಲ. ನನ್ನ ಒಲವಿನ ದೇಶದ ಗೋಳು ನನಗೆ ಉಸುರುತ್ತಿರುವ ಈ ಒಂದೇ ಮಂತ್ರವನ್ನು ನಾನು ಬಿಟ್ಟುಬಿಡಲೇ? ನಾಡು ನಿರುದ್ಯೋಗದಲ್ಲಿ ಮುಳುಗಿದೆ. ಈ ಸೋಮಾರಿತನ ನಾಡಿನ ಜೀವಾಳವನ್ನೇ ಕೊರೆಯುತ್ತಾ ಇದೆ. ಒಳನಾಡಿನ ಹಳ್ಳಿಗಳಿಗೆ ಹೋದಾಗ ಅಲ್ಲಿನ ಜನರ ಕಳೆಯಿಲ್ಲದ ಬರಿಗಣ್ಣು ನೋಡಿ ಬೆದರಿದೇನೆ. ಬೇರೆ ಏನೂ ಮಾಡಲು ಕೆಲಸ ಇಲ್ಲದೆ ದನದ ಜೊತೆಯಲ್ಲಿ ದುಡಿದು ದುಡಿದು ದನಗಳ ಹಾಗೆಯೆ ಆಗಿದಾರೆ ಜನ. ಕೋಟಿಗಟ್ಟಲೆ ಜನ ತಮ್ಮ ಕೈಯನ್ನೇ ಮರೆತಿದಾರೆ. ಎಂಥ ದಾರುಣ ಚಿತ್ರ! ಪಶುಗಳಿಗೂ ನಮಗೂ ನಡುವೆ ಇಷ್ಟು ದೊಡ್ಡ ಭೇದ ಹೇಗೆ ಬಂತು? ಕೈ ಅಲ್ಲವೆ ಅದಕ್ಕೆ ಕಾರಣ. ಕಾಲಿನ ಹಾಗೆಯೆ ಅದನ್ನೂ ಬರೀ ಯಂತ್ರದ ಅಂಗದಂತೆ ಉಪಯೋಗಿಸುತ್ತಿದೇವೆಯಲ್ಲ. ಪ್ರಕೃತಿಮಾತೆ ಕೊಟ್ಟ ವರವನ್ನು ಜರಿದಿದೇವೆ. ಫಲವಾಗಿ ನಮ್ಮ ಮೈಮನಸುಗಳೆರಡೂ ಒಣಗಿ ಹೋಗುತ್ತಿವೆ. ರಾಟೆಯೊಂದೇ ಈ ಅನಾಹುತವನ್ನು ತಡೆಯಬಲ್ಲ ಸಾಧನೆ. ನಾಡಿನಲ್ಲಿ ಉದ್ಯೋಗಪ್ರಿಯತೆಯನ್ನು ಬೆಳೆಸಿ, ಹಳ್ಳಿಗಳನ್ನು ಉದ್ಧಾರಮಾಡಿ, ಬಡಬಗ್ಗರಿಗೆ ಒಂದು ಹೊತ್ತಿನ ಹಿಟ್ಟಾದರೂ ಕೊಡುವ ಉಪಾಯ ಬೇರೆ ಏನಿದೆ?'

ಒಂದು ಸಲ ಗಾಂಧೀಜಿಗೆ ಕಾಯಿಲೆ ಆದಾಗ ವೈದ್ಯರು ಸಂಪೂರ್ಣ ವಿಶ್ರಾಂತಿ ತೆಗೆದುಕೊಳ್ಳಲು ಹೇಳಿದರು. ಅಂದರೆ ನೂಲುವುದು ಕೂಡ ಬೇಡ ಎಂದು ಅವರ ಸಲಹೆ. 'ನೂಲುವುದು ಬಿಡುವುದೇ? ನೂಲದೆ ನಾನು ಬದುಕಲಾರೆನಲ್ಲ. ತಿಂದು ಉಂಡು ಬದುಕಬೇಕಾದರೆ ನೂಲಲೇ ಬೇಕು ನಾನು.' ಇದರಿಂದ ರೋಗ ಬಲವಾದೀತು ಎಂದು ವೈದ್ಯರ ಅಂಜಿಕೆ. 'ಒಂದು ವೇಳೆ ನೂಲುತ್ತ ನೂಲುತ್ತ ಹಾಗೆಯೇ ನಾನು ಕಣ್ಣು ಮುಚ್ಚಿದರೆ ಅದಕ್ಕಿಂತ ದಿವ್ಯ ಮರಣ ಉಂಟೇ? ವೈದ್ಯರೆ! ನೂಲಬೇಡ ಎಂದರೆ ಹೊಟ್ಟೆಗೆ ಏನೂ ತಿನ್ನಬೇಡ ಎಂದ ಹಾಗೆಯೆ ನನ್ನ ಪಾಲಿಗೆ.'

ನೂಲುವುದು ಯಜ್ಞಕರ್ಮ. ಯಜ್ಞ ಮಾಡದೆ ತಿನ್ನುವವ ಕಳ್ಳ. ಪ್ರತಿಯೊಬ್ಬನೂ ತನ್ನ ಅನ್ನ ನೀರಿಗಾಗಿ ಅಷ್ಟೋ ಇಷ್ಟೋ ದುಡಿಯಲೇ ಬೇಕು. ಶರೀರಶ್ರಮವಿಲ್ಲದೆ ತಿಂದ ಅನ್ನ ಕಳ್ಳತನದ್ದು. ಎಂಥ ಶ್ರೀಮಂತನೇ ಇರಲಿ. ತನ್ನ ಆಹಾರಕ್ಕಾಗಿ ಶರೀರಶ್ರಮ ಗೆಯ್ಯಲೇಬೇಕು. ಗಾಂಧೀಜಿಗೆ ಶರೀರಶ್ರಮ ಒಂದು ವ್ರತ. ರಷ್ಯಾದೇಶದ ಬೊಡ್ಕಿನ್‌ನ Bread-Labour ಅನ್ನಕ್ಕಾಗಿ ದುಡಿತ–ಎಂಬ ಸಿದ್ಧಾಂತದ ಹಾಗೆ ಈ ವ್ರತ. ಈ ಹಾದಿಯ ಮೇಲೆಯೆ ಕಾಂಗ್ರೆಸ್ಸಿಗೆ ನೂಲುವವರೇ ಸದಸ್ಯರಾಗಬಹುದು ಎಂದು ಏರ್ಪಾಡು ಮಾಡಿದ್ದುದು. —No work, no vote—ಕೆಲಸವೂ ಇಲ್ಲ, ಓಟೂ ಇಲ್ಲ ಎಂಬ ತತ್ವ ಅದು.

ಖಾದೀ ಖಾದೀ ಎಂದು ಕೂಗಿದರೆ ಉಪಯೋಗವಿಲ್ಲ ಎಂದು ಪರ ದೇಶೀ ವಸ್ತ್ರ ಬಹಿಷ್ಕಾರವನ್ನು ಉಪದೇಶಿಸಿದರು. ಅದಕ್ಕಾಗಿ ವಿದೇಶೀ ಬಟ್ಟೆಗಳನ್ನು ಸಭೆ ಸೇರಿಸಿ ಸುಟ್ಟರು. ಇದು ಸರಿಯೆ? ಅವರ ಬಟ್ಟೆಬೇಡ ಎಂದರೆ ಅವರ ದೇಶದ ಕೂಲಿ ಜನಕ್ಕೆ ಉಪವಾಸ ತಾನೆ?

'ನಮ್ಮ ಕೈಗಾರಿಕೆ ಉದ್ಯೋಗಕ್ಕೆ ಮುಳಿವಾಗಬಹುದಾದ ಎಲ್ಲ ಪರದೇಶಿ ವಸ್ತುಗಳಿಗೂ ಬಹಿಷ್ಕಾರವೇ. ನಮ್ಮ ದೇಶದಲ್ಲೇ ಉತ್ಪತ್ತಿ ಯಾಗಬಹುದಾದ ಯಾವ ಪದಾರ್ಥವೂ ಹೊರನಾಡಿನಿಂದ ನಮ್ಮಲ್ಲಿ ಬರ ಬಾರದು. ನಮ್ಮಲ್ಲಿಯೆ ಹೇರಳವಾಗಿ ಗೋಧಿ ಬೆಳೆಯುತ್ತಿರುವಾಗ ಆಸ್ಟ್ರೇಲಿಯಾ ದೇಶದಿಂದ ಗೋಧಿ ತರಿಸಿದರೆ ಅದು ಮಹಾಪಾಪ.

ನಮ್ಮಲ್ಲಿ ಬೆಳೆಯದೆ ಇರುವ ದವಸ ನಮಗೆ ಅಗತ್ಯವಾದರೆ ಅದನ್ನು ತಪ್ಪದೆ ಹೊರಗಿನಿಂದ ತರಿಸಬೇಕು. ಈ ನಿಷೇಧದಲ್ಲಿ ಸ್ವಲ್ಪವೂ ದ್ವೇಷ ಭಾವನೆ ಇಲ್ಲ. ಹಾಗೆ ದ್ವೇಷಕ್ಕಾಗಿ ಯಾವ ಪದಾರ್ಥ ಬಹಿಷ್ಕರಿಸಿದರೂ ನಾನು ಅದನ್ನು ಒಪ್ಪುವುದಿಲ್ಲ. ಅದೇ ರೀತಿ ನಮ್ಮಲ್ಲಿ ತಯಾರಾಗುವ ವಸ್ತುವನ್ನೂ ಹೊರಗಿನಿಂದ ತರಿಸಿದರೆ ನಾನು ಸಹಿಸಲಾರೆ. ನಮ್ಮಲ್ಲಿ ಚರ್ಮಕ್ಕೇನು ಕಡಮೆ? ನಮ್ಮ ದೇಶದ ತೊಗಲಿನಿಂದ ಮಾಡಿದ ಕೆರ ಉಪಯೋಗಿಸುವುದೇ ನನ್ನ ಧರ್ಮ. ಪರದೇಶದ ಕೆರ ನಮ್ಮದಕ್ಕಿಂತ ಅಗ್ಗ, ನಯ ಆಗಿದ್ದರೂ ಅಷ್ಟೇ. ನಮ್ಮ ದೇಶದಲ್ಲಿ ಸಾಕಷ್ಟು ಸಕ್ಕರೆ ಉತ್ಪತ್ತಿ ಆದರೆ ಹೊರಗಿನ ಸಕ್ಕರೆಗೆ ಬಹಿಷ್ಕಾರ ಹಾಕಬೇಕಾದುದೇ.' ಬಟ್ಟೆಯ ಮಾತು ಹೇಳುವಹಾಗೆಯೆ ಇಲ್ಲ.

ರವೀಂದ್ರನಾಥ ಠಾಕೂರರಿಗೆ ಈ ಬಹಿಷ್ಕಾರದ ಕಾರ್ಯ ಸಹಿಸಲಿಲ್ಲ. ಖಾದಿಯೇ ಒರಟು; ಅದರಲ್ಲಿ ಅಂದವಿಲ್ಲ. ಈ ಬಹಿಷ್ಕಾರವಂತೂ ಖಾದೀ ಚಳುವಳಿಯ ಒರಟುತನಕ್ಕೆ ಕಳಸವಿಟ್ಟಹಾಗೆ. ಹೀಗೆ ಯೋಚಿಸಿ ಅವರಿಗೆ ತುಂಬಾ ನೋವಾಯಿತು. ಗಾಂಧೀಜಿ ತಮಗೆ ಗೆಳೆಯರು; ಹಿಂದುಸ್ಥಾನದ ಪುಣ್ಯಫಲ. ಅಂಥವರು ಹೀಗಾದರಲ್ಲ ಎಂದು ಕಲೆಯ ಅವತಾರವೇ ಆದ ರವೀಂದ್ರರಿಗೆ ಅನಿಸಿತು. ಗಾಂಧೀಜಿಗೆ ಆ ನೋವನ್ನು ತಿಳಿಸಿದರು.

ಇದೇನು ಸ್ವದೇಶೀ? ಇದೇನು ದ್ವೇಷ? ಈ ಕಿಚ್ಚಿನಿಂದ ಎಲ್ಲವೂ ಉರಿದು ಹೋದೀತಲ್ಲ. ಬೆಳಗ್ಗೆ ಎದ್ದರೆ ಹಕ್ಕಿಗೆ ತಿನ್ನುವ ಯೋಚನೆಗಿಂತ ಮೊದಲು ಮುಗಿಲಿಗೆ ಹಾರುವ ಹಂಬಲವಲ್ಲವೆ? ಇದು ಒಂದು ಸಂಧಿ ಕಾಲ, ಅರುಣೋದಯ. ಹೊಸ ಜಗತ್ತು ಹುಟ್ಟುವ ಕಾಲ. ಇಂಥ ಹೊತ್ತಿನಲ್ಲಿ ಭಿನ್ನಭಾವವೇಕೆ? ಹೀಗೆ ರವೀಂದ್ರರು ಬರೆದರು.

ಗಾಂಧೀಜಿಗೆ ನಾಡಿನ ಬಡತನ ಕಣ್ಣಿಗೆ ಕಟ್ಟಿದೆ. ರವೀಂದ್ರನಿಗೆ ಆತ್ಮದ ಹಸಿವು. ಗಾಂಧೀಜೀ ಬಹಳ ವಿನಯದಿಂದ ಕವೀಂದ್ರನಿಗೆ ಹೇಳಿದರು: 'ನೀವು ಕವಿ; ಭವಿಷ್ಯದಲ್ಲಿ ವಿಹರಿಸುವವರು. ನಾವು ಹಾಗೆ ಮಾಡಬಲ್ಲೆವೆ? ನಸುಕಿನಲ್ಲಿ ಸನ್ನಿವಾಡುಗಳನ್ನು ಉಲಿಯುತ್ತ ಮುಗಿಲಿಗೆ ಹಾರುವ ಹಕ್ಕಿಗಳ ಸೊಗಸಾದ ಚಿತ್ರವನ್ನು ತೋರಿಸುತ್ತೀರಿ. ನಮಗೂ

ಅದು ಕಣ್ಣು ತುಂಬುತ್ತದೆ. ಆ ಹಕ್ಕಿ ಹಿಂದಿನ ದಿನ ಹೊಟ್ಟೆತುಂಬ ತಿಂದು ಹಾಯಾಗಿ ಇರುಳು ಮಲಗಿ ಅವಕ್ಕೆ ಹೊಸಬಲ ಹೊಸರಕ್ತ ಬಂದಿದೆ. ಹಾರಲು ಆ ಬಲ ನೆರವಾಗುತ್ತದೆ. ನಾನು ನೋಡಿರುವ ಹಕ್ಕಿಗಳಿಗೆ ಹಾರಲು ಹಾಗಿರಲಿ, ರೆಕ್ಕೆ ಬಡಿಯಲೂ ಬಲವಿಲ್ಲ. ಆ ನೋಟ ತುಂಬಾ ನೋಯಿಸಿದೆ. ಹಿಂದುಸ್ಥಾನದ ಮುಗಿಲ ಕೆಳಗೆ ನರಪಕ್ಷಿಗೆ ನಿದ್ದೆ-ವಿಶ್ರಾಂತಿ ಎಲ್ಲಿಯದು? ಅದೊಂದು ರೋಗ, ಸುಳ್ಳು ನಾಟಕ. ಆ ನಾಟಕ ಮುಗಿಸಿ ಬೆಳಿಗ್ಗೆ ಎದ್ದಾಗ ಈ ನರಪಕ್ಷಿಗೆ ಮುನ್ನಾದಿನಕ್ಕಿಂತ ಬಲ ಇಳಿದು ಹೋಗಿರುತ್ತದೆ. ಕೋಟ್ಯಾನುಕೋಟಿ ಜನರಿಗೆ ಬಾಳು ನಿತ್ಯ ಜಾಗರಣೆ ಅಥವಾ ಶಾಶ್ವತ ಸಮಾಧಿ. ಆ ಸಂಕಟವು ಅವರ್ಣನೀಯ. ಅದನ್ನು ಅರಿತುಕೊಳ್ಳಲು ಅನುಭವಿಸಲೇಬೇಕಲ್ಲದೆ ಬೇರೆ ಹಾದಿಯಿಲ್ಲ. ಸಂಕಟ ಪಡುವ ರೋಗಿಗಳಿಗೆ ಕಬೀರನ ಹಾಡುಹಾಡಿ ಸಮಾಧಾನ ಕೊಡ ಬಂದೀತೇ? ಹಸಿವಿನಿಂದ ತಲ್ಲಣಿಸುವ ಈ ಅಸಂಖ್ಯ ಜನ ಬೇಡುವ ಕಾವ್ಯ ಒಂದೇ: ಪುಷ್ಟಿಕರವಾದ ಅನ್ನ.

ಸುತ್ತಲೂ ಜನ ಹಸಿವಿನಿಂದ ಸಾಯುತ್ತಿರುವಾಗ ಅವರಿಗೆ ಅನ್ನ ಕೊಡುವುದಕ್ಕಿಂತ ಬೇರೆ ಏನು ಉದ್ಯೋಗ ಇದ್ದೀತು ನನಗೆ? ಬೇರೆ ಮಾಡಬಹುದೇ? ಭಾರತಕ್ಕೆ ಬೆಂಕಿ ಹತ್ತಿದೆ. ಹೊಟ್ಟೆಗಾಗಿ ದುಡಿಯೋಣ ಎಂದರೆ ಕೆಲಸವಿಲ್ಲ. ಖುಲ್ನ ಉಪವಾಸ. ದತ್ತ ಮಂಡಲಕ್ಕೆ ಇದು ನಾಲ್ಕ ನೆಯ ವರ್ಷ ಬರ. ಉತ್ಕಲವಂತೂ ಸದಾ ಕ್ಷಾಮದ ದೇಶ. ಹಿಂದುಸ್ಥಾನ ದಿನೇ ದಿನೇ ಬಡವಾಗುತ್ತಿದೆ. ಕಾಲು ಆಗಲೇ ತಣ್ಣಗೆ ಆಗಿದೆ. ಹೀಗಿಯೇ ಬಿಟ್ಟರೆ ಪೂರಾ ತಣ್ಣಗೆ ಆದೀತು.

ಬಡತನದಲ್ಲಿ ಮುಳುಗಿ ನಿರುದ್ಯೋಗದಿಂದ ಸವೆದು ಹೋಗುತ್ತಿರುವ ಜನಕ್ಕೆ ದೇವರೇ ಪ್ರತ್ಯಕ್ಷವಾದರೂ ಅನ್ನಾವತಾರ ಮಾಡಿ ಬರಬೇಕು. ಅವರಿಗೆ ಹೊಟ್ಟೆಕೊಡುವ ಕೂಲಿಯ ರೂಪದಲ್ಲಿ ಬರಬೇಕು. ಬೇರೆ ರೀತಿಯಲ್ಲಿ ಬರಲು ಅವನಿಗೆ ಧೈರ್ಯ ಬರಲಾರದು. ದೇವರು ಮನುಷ್ಯನನ್ನು ಸೃಷ್ಟಿಸಿದಾಗ ಹೊಟ್ಟೆಗಾಗಿ ದುಡಿಯಲು ಹೇಳಿದ; ದುಡಿಯದೆ ತಿನ್ನುವವರು ಕಳ್ಳರು ಎಂದ. ಇಂದು ಕೋಟಿ ಕೋಟಿ ಜನ

ದನಕ್ಕಿಂತ ಕಡೆಯಾಗಿ ಸಾಯುಲಾಗಿದಾರೆ. ಅವರ ಹಸಿವೇ ಹಿಂದುಸ್ತಾನಕ್ಕೆ ರಾಟೆ ಕೋಟಿ ವಿದ್ಯೆಗಿಂತ ಲೇಸು ಎಂಬ ಹಾದಿಗೊಯ್ಯುತ್ತಿದೆ.

ಕವೀಂದ್ರನನ್ನೂ ಋಷಿಯನ್ನೂ ಯಜ್ಞಾರ್ಥವಾಗಿ ನೂಲಲು ಬೇಡುತ್ತೇನೆ. ಯುದ್ಧಕಾಲದಲ್ಲಿ ಕವಿ ತನ್ನ ಕೊಳಲು ಕೆಳಗಿಡುತ್ತಾನೆ. ವಕೀಲ ತನ್ನ ಪುಸ್ತಕಗಳನ್ನು ಬಿಡುತ್ತಾನೆ. ಮನೆಗೆ ಬೆಂಕಿಹತ್ತಿದಾಗ ಮನೆಯ ಜನರೆಲ್ಲ ಹೊರಗೆ ಓಡಿ ಪ್ರತಿಯೊಬ್ಬರೂ ನೀರು ತರಲು ಹೋಗುತ್ತಾರೆ. ನನ್ನ ಸುತ್ತಲೂ ಜನ ಹೊಟ್ಟೆಗಿಲ್ಲದೆ* ಸಾಯುತ್ತಿರುವಾಗ ನನಗೆ ಒಂದೇ ಉದ್ಯೋಗ–ಅವರಿಗೆ ಹಿಟ್ಟು ದೊರಕಿಸುವುದು. ಅದೇ ವರ್ತಮಾನ ಧರ್ಮ. ನಾಳೆಯ ಚಿಂತೆ ದೇವರಿಗೆ ಸೇರಿದುದು.

---

## THE LIE

1. Poet I have heard you sing of purple shadows
Languidly passing over a rose bed
But have you ever sung of a hungry woman
Selling her body for a loaf of bread?

2. I have heard you in your selfish isolation
Shut out from all the world, it's ghastly cares
Sing of the wondrous sunset on a mountain
But have you ever sung of the red of the sleepless eyes?

3. Oh Fool, Fool, Fool! you poet singing of beauty;
Of midnight heavens starred and mooned
What are the stars to the hungry but the sores of leper
What is the moon to the tired but a dripping wound?

4. You dare to sing of beauty, you shameless poet
Of silver rivers and beautiful golden hills
While thousands are being broken in the workshops
And millions are being shattered in the mills.

5. You sit and chant of God, you well fed parrot!
A good square meal is the mother of all your hymns
You and your God shall pass away like a vapour
Before the fact of starving children's limbs.

*Harindranath Chattopadhyaya*

ರವೀಂದ್ರನೆಂದರೆ ಗಾಂಧೀಜಿಗೆ ತುಂಬ ಆದರ. ಅವರನ್ನು ಗುರುದೇವ ಎನ್ನುತ್ತಾರೆ. ಶಾಂತಿನಿಕೇತನ ತಮಗೆ ಶಾಂತಿ ಸಿಗುವ ಸ್ಥಳ ಎಂದು ತಿಳಿದಿದ್ದಾರೆ. ಅಲ್ಲದೆ ರವೀಂದ್ರರು ಭಾರತ ಸಂಸ್ಕೃತಿಯ ಕಣ್ಣು. ಅವರ ಹಿತವಚನಕ್ಕೆ ಬಹಳ ಬೆಲೆಯಿದೆ. ಆದರೂ ಗಾಂಧೀಜಿಗೆ ಹಿಂದುಸ್ತಾನದ ದಾರಿದ್ರ್ಯ ಕಣ್ಣಿಗೆ ಕಟ್ಟಿಕೊಂಡು ಕೂತಿದೆ. ಆ ಹಸಿವಿನ ನೋವು ತನಗೇ ಆಗುತ್ತಿದೆ. ತಾನೇ ದೇಶ; ದೇಶದ ಸುಖ ದುಃಖ ತನ್ನದು. ಭಕ್ತನ ಬೆನ್ನ ಮೇಲೆ ಬಿದ್ದ ಹೊಡೆತಕ್ಕೆ ದೇವರ ಬೆನ್ನಮೇಲೆ ಬಾಸಾಳ ಮೂಡಿದ್ದವಂತೆ. ಹಾಗೆಯೇ ಭಾರತದ ದರಿದ್ರ ಕೋಟಿಯ ಹಸಿವು–ನೋವು ಗಾಂಧೀಜಿಗೆ.

ದರಿದ್ರರಿಗೆಲ್ಲಿಯ ಧರ್ಮ? ವಿವೇಕಾನಂದ ಸ್ವಾಮಿ ಹೇಳುತ್ತಿದ್ದರು: 'ನಾನು ವೇದಾಂತಿಯಲ್ಲ, ತತ್ವಜ್ಞಾನಿಯಲ್ಲ, ಸಾಧುವೂ ಅಲ್ಲ. ನಾನು ದೀನ, ದರಿದ್ರ. ಅಂಥವರನ್ನೇ ನಾನು ಪ್ರೀತಿಸುತ್ತೇನೆ. ಬಡತನದಲ್ಲಿ ಹೂತುಹೋಗಿರುವ ಕೋಟ್ಯಾಂತರ ಜನ ಭಾರತೀಯರಿಗಾಗಿ ಮರುಗುವವರು ಯಾರು? ಅವರಿಗೆ ದಾರಿ ಏನು? ಯಾರು ಅವರಿಗೆ ಬೆಳಕು ತೋರಿಯಾರು? ಈ ಜನರೇ ನಿಮ್ಮ ದೈವವಾಗಲಿ. ಬಡವರಿಗಾಗಿ ತನ್ನ ಎದೆಯ ರಕ್ತ ಹಿಂಡಬಲ್ಲ ಧೀರನೇ ಮಹಾತ್ಮ. ಈ ಕೋಟ್ಯಾನುಕೋಟಿ ಜನ ಹಸಿವಿನಿಂದ ಬಳಲುತ್ತಿರುವ ತನಕ, ಅವರ ದುಡಿತದ ಬಲದಿಂದ ಓದು ಬರೆಹ ಗಳಿಸಿಕೊಂಡು ಅವರ ಬಗ್ಗೆ ಸ್ವಲ್ಪವೂ ಕನಿಕರತೋರದ ಪ್ರತಿಯೊಬ್ಬ ಮನುಷ್ಯನೂ ದ್ರೋಹಿ ವಿಶ್ವಾಸಘಾತುಕ ಎನ್ನುತ್ತೇನೆ. ಸರ್ವ ಚೇತನಸ್ತೋಮವೇ ದೇವರು ಎಂದು ನನ್ನ ನಂಬಿಗೆ. ಪಾಪಿ ದೀನ ಪತಿತರೇ ಎಲ್ಲ ದೇಶಗಳ ದರಿದ್ರರೇ ನನ್ನ ದೇವರು. ಆ ದೇವರನ್ನು ಆರಾಧಿಸಬಲ್ಲೆನಾದರೆ ಸಾವಿರ ಸಂಕಟಗಳನ್ನು ಸಹಿಸಿಯೂ ನಾನು ಪುನಃಪುನಃ ಜನ್ಮವೆತ್ತಲು ಬಯಸುತ್ತೇನೆ.'

ಇನ್ನೊಮ್ಮೆ ಬರಿಯ ಜಪತಪದ ಗಾಳಿಗಂಟನ್ನು ನೋಡಿ ಗರ್ಜಿಸಿದರು: 'ಏಳಿರಿ, ನಿಮ್ಮಲ್ಲಿ ಜನತೆಯ ಸೇವೆಗಾಗಿ ಬಾಳನ್ನು ಮುಡಿಪಾಗಿ ಸಲ್ಲಿಸಬಲ್ಲವರು ಯಾರೂ ಇಲ್ಲವೆ? ವೇದಾಂತ ಪಠನೆ, ಜಪಧ್ಯಾನಗಳನ್ನು ಕಟ್ಟಿಡಿ. ಮುಂದಿನ ಜನ್ಮದಲ್ಲಿ ನೋಡಿಕೊಳ್ಳೋಣ. ಈ ಜನ್ಮ–ಈ ದೇಹ, ಜನತಾಸೇವೆಗಾಗಿ ಮೀಸಲಾಗಲಿ.'

ಗಾಂಧೀಜಿಯ ಮನೋಭಾವಕ್ಕೆ ದರಿದ್ರನಾರಾಯಣನ ಸೇವೆಯ ಹಂಬಲಕ್ಕೆ ವೇದಾಂತಸಿಂಹದ ಈ ವಾಣಿಗಿಂತ ಬೇರೆ ವ್ಯಾಖ್ಯಾನ ಏಕೆ? ವಿವೇಕಾನಂದಸ್ವಾಮಿ ಅಂದು ಬಯಸಿದ ಧೀರತೆ ಇಂದು ಇಲ್ಲಿ ಹೊಳೆದಿದೆ. ಅವರು ಕೋರಿದ ಮಹಾತ್ಮ ಇಂದು ಅವತರಿಸಿದಾನೆ.

ಗಾಂಧೀಜೀ ಬರೀ ಹಿಂದುಸ್ತಾನಕ್ಕೆ ಮಾತ್ರವೇ ಖಾದೀ ಮಂತ್ರೋಪದೇಶ ಮಾಡಿಲ್ಲ. ಇಡೀ ಜಗತ್ತಿಗೇ ಅವರು ರಾಟೆಯ ದೀಕ್ಷೆ ಕೊಡಬಯಸುತ್ತಾರೆ. ಚೀಣದ ಮುಖಂಡರು ಬಂದರೆ ಅವರಿಗೆ ಅದನ್ನೇ ಹೇಳಿದರು. ಪಡುವಲ ಜನರಿಗೂ ಅದನ್ನೇ ಹೇಳುತ್ತಾರೆ. ಮಹಾಯುದ್ಧದ ಬಾಂಬುಯುಗವಾದ ಮೇಲೆ ಮತ್ತೆ ರಾಟೆಯ ಕಾಲ ಬಂದೀತೆಂಬ ನಂಬಿಗೆ ಇದೆ. ಪಡುವಲ ಅರ್ಥಶಾಸ್ತ್ರ ಬಹುಜನರ ಸುಖಸಾಧನೆಯ ನಿಟ್ಟಿನಲ್ಲಿ ನಡೆದಿದೆ. 'ರಾಟೆ ಬಹುಜನರ ಅಧಿಕಸುಖದ ಮಾರ್ಗವಲ್ಲ; ಸರ್ವಜನರ ಸುಖದ ಹಾದಿ. ಇಂದು ಹಿಂದುಸ್ತಾನದ ಜನರ ಪಾಲಿಗೆ ಮಾತ್ರ ಅದು ಸಂಜೀವನಿ. ನಾಳೆ ಪ್ರಪಂಚಕ್ಕೇ ಆದೀತು. ಯಾರಾದರೂ ತಪ್ಪು ಮಾಡುವವರನ್ನು ಕಂಡರೆ ನಾನು ತಪ್ಪು ಮಾಡಿದೆ ಎಂದುಕೊಳ್ಳುತ್ತೇನೆ. ಕಾಮಿಯಾದವನನ್ನು ಕಂಡಾಗ ನಾನೂ ಹಿಂದೆ ಹಾಗೆ ಇದ್ದೆನೆಂದು ನೆನಪುಗೊಳ್ಳುತ್ತೇನೆ. ಹೀಗೆ ಪ್ರಪಂಚದಲ್ಲಿ ಎಲ್ಲರೊಡನೆಯೂ ನನ್ನ ಬಳಗವನ್ನು ಕಟ್ಟಿಕೊಳ್ಳುತ್ತೇನೆ. ದೀನದರಿದ್ರರಿಗೆ ಸುಖವಿಲ್ಲದೆ ನಾನು ಸುಖವಾಗಿರಲಾರೆ ಎನಿಸುತ್ತದೆ. ಈ ದೃಷ್ಟಿಯಿಂದ ರಾಟೆಯ ಕಡೆಗೆ ನೋಡಿರಿ. ತುಲಸೀದಾಸನಿಗೆ ಕೃಷ್ಣವಿಗ್ರಹದಲ್ಲೂ ರಾಮನೇ ಕಾಣುತ್ತಿದ್ದನಂತೆ. ನಮ್ಮ ವಿಜ್ಞಾನಕಲೆ, ಅರ್ಥಶಾಸ್ತ್ರ ಎಲ್ಲಾ ಬಡವರ ಪಾಲಿಗೆ ರಾಟೆಯನ್ನು ಆಧಾರವಾಗಿ ಮಾಡಲು ಉಪಯೋಗವಾಗಲಿ.'

ಗಾಂಧೀಜೀ ಸೆರೆಮನೆಯಿಂದ ಒಂದು ಸಲ ಹೊರಗೆ ಬಂದಾಗ ಜನರೆಲ್ಲ ಅವರನ್ನು ಮುತ್ತಿದರು; ದೇಶಕ್ಕೆ ಏನು ಸಂದೇಶ ಎಂದು ಕೇಳಿದರು. ಅಂಥ ಹೊತ್ತಿನಲ್ಲಿ ಒಂದೇ ಮಾತು: 'ಮನೆಗೆ ಹೋಗಿ ದಾರ ತೆಗೆಯಿರಿ.' ಅವರಿಗೆ ಬೇಕಾದ ಕೋಟ್ಯಾಧೀಶರೊಬ್ಬರು ಅವರನ್ನು ಕೇಳಿದರು ಒಂದು ದಿನ: 'ನಿಮಗೆ ನನ್ನ ಹಣ ಬೇಕೋ ನಾನೇ ಬೇಕೋ

ನಾಡಿನ ಸೇವೆಗೆ?' 'ನೀನೇ ಬೇಕು' ನೇರಾಗಿ ಬಂತು ಉತ್ತರ. 'ನನ್ನ ಉದ್ಯೋಗ ವ್ಯವಹಾರ ಎಲ್ಲಾ ಬಿಟ್ಟು ಬಂದರೆ ಏನು ಕೆಲಸ ಹೇಳುತ್ತೀರಿ ನನಗೆ?' 'ನೂಲುವುದು.' ಆ ಲಕ್ಷ್ಯಶುದ್ಧಿಗೆ ಏಟು ತಪ್ಪುವುದೇ ಇಲ್ಲ.

ರಾಮಕೃಷ್ಣ ಪರಮಹಂಸರು ಅನ್ನುತ್ತಿದ್ದರಂತೆ: 'ಹಸಿದ ಹೊಟ್ಟೆಗೆ ತತ್ವಬೋಧೆಯೇಕೆ?' ನಿಜ. ಧರ್ಮವು ಅರ್ಥವನ್ನು ಬಿಟ್ಟರೆ ಕುಂಟನಾದೀತು. ಅರ್ಥನೀತಿಗೆ ಹೊಂದದ ಧರ್ಮ ಧರ್ಮವಲ್ಲ. ಗಾಂಧೀಜಿಗೆ ಧರ್ಮದಲ್ಲಿ ಅರ್ಥವಿದ್ದಹಾಗೆಯೆ ಅರ್ಥದಲ್ಲಿ ಧರ್ಮವಿರಬೇಕು. 'ಧರ್ಮಕ್ಕೆ ಹೊಂದದ ಅರ್ಥ ಕಾಸಿಗೆ ತರವಲ್ಲ. ಅರ್ಥವು ಧರ್ಮವಿರೋಧಿಯಾಗಿರಬೇಕು. ಸುಲಿಗೆ ಕೊಳ್ಳೆ ಪರಶೋಷಣೆಗೆ ಅದರಲ್ಲಿ ಎಡೆಯಿಲ್ಲ. ಅಂತಲೇ ನಾನು ಖಾದೀಮಂತ್ರವನ್ನು ನಂಬಿರುವುದು.'

ಅದು ಸತ್ಯಾಗ್ರಹಿಯ ದೃಢವಿಶ್ವಾಸ. ಈಗಂತೂ ಪ್ರಪಂಚ ಸುಂದೋಪಸುಂದರ ಮಲ್ಲಯುದ್ಧದಲ್ಲಿ ತೊಡಗಿದೆ. ಇಂಥ ಹೊತ್ತಿನಲ್ಲಿಯೂ ಗಾಂಧೀಜಿ ಖಾದಿಯನ್ನೆ ಶರಣುಹೋಗಿದಾರೆ. 'ಕೈನೂಲಿನ ಉಂಡೆಗಳೇ ನಮ್ಮ ಸಿಡಿಗುಂಡು, ಹಂಜಿಗಳೇ ಬಿಲ್ಲುಬಾಣ; ಖಾದಿಯೇ ಸ್ವರಾಜ್ಯದ ಹಾದಿ' ಎನ್ನುತ್ತಿದಾರೆ. ಖಾದಿಯಲ್ಲಿ ನಂಬಿಗೆ ಇಲ್ಲದವರನ್ನು ನೂಲಲು ಬಾರದವರನ್ನು ಸತ್ಯಾಗ್ರಹಕ್ಕೆ ಅನಧಿಕಾರಿಗಳೆನ್ನುತ್ತಾರೆ.

ಕೇವಲ ಸ್ವರಾಜ್ಯಸಂಗ್ರಾಮಶಸ್ತ್ರವಲ್ಲ ಖಾದೀ. ಅಹಿಂಸೆ ಸತ್ಯಗಳ ತಳಹದಿಯ ಮೇಲೆ ಕಟ್ಟಿದ ಮಾನವಜೀವನದ ಕುರುಹು. ಗಾಂಧೀಧರ್ಮಕ್ಕೆ ಅದು ಸಾರಥಿ.



## ಗಾಂಧೀಜೀ-ಕಲೆ

ಗಾಂಧೀಜೀ ಮೈಸೂರಿನಲ್ಲಿ ಆರೋಗ್ಯಕ್ಕಾಗಿ ಕೆಲಕಾಲ ತಂಗಿದ್ದರು. ಗುಣವಾದಮೇಲೆ ಮೈಸೂರನ್ನೆಲ್ಲ ಸುತ್ತಿದರು. ಪ್ರಭುತ್ವವೇ ಅವರ ಸೇವೆಗೆ ನಿಂತಿತ್ತು. ಮೈಸೂರಲ್ಲಿ ಮಲೆನಾಡು ಅಂದವಾದ ಸೀಮೆ. ಅದರಲ್ಲಿ ಗೇರುಸೊಪ್ಪೆಯ ಜಲಪಾತವಂತೂ ಅತಿ ರಮಣೀಯವಾದುದು. ಅದರ ಚೆಲುವು ಜಗತ್ತಿಗೇ ಒಂದು ಸೆಳೆತವಾಗಿದೆ. ಹಿಂದುಸ್ತಾನಕ್ಕೆ ಬಂದ ಪ್ರವಾಸಿಗಳು ಜೋಗವನ್ನು ನೋಡದೆ ಹಿಂದಿರುಗುವುದಿಲ್ಲ. ಗಾಂಧೀಜೀ ಸಾಗರಕ್ಕೆ ಹೋದರು. ಅಲ್ಲಿಂದ ಗೇರುಸೊಪ್ಪೆ ಆರೇ ಹರದಾರಿ. ಮೋಟಾರಿನಿಂದ ಅದೊಂದು ದೂರವೇ ಅಲ್ಲ. ಆದರೂ ಗಾಂಧೀಜೀ ಸಾಗರದಿಂದ ತೀರ್ಥಹಳ್ಳಿಗೆ ನೇರಾಗಿ ನಡೆದುಬಿಟ್ಟರು. ಗೇರುಸೊಪ್ಪೆಯ ಸೊಬಗಿಗೆ ಅವರು ಮನಸುಗೊಡಲಿಲ್ಲ.

ಮುಂದೆ ಹಾಸನ ಜಿಲ್ಲೆಗೆ ಹೋದರು. ಅಲ್ಲಿ ಬೇಲೂರಿಗೆ ಹೋದರು. ಹೋದುದು ಬೇಲೂರಿನ ಶಿಲ್ಪಕಲಾಸೌಂದರ್ಯವನ್ನು ನೋಡಲಿಕ್ಕಲ್ಲ. ಜಕಣಾಚಾರಿ ಕಲ್ಲಿನೊಳಗೆ ಹರಿಯಿಸಿದ ಆನಂದಾಮೃತವನ್ನು ಸವಿಯಲಲ್ಲ. ಅಲ್ಲಿದ್ದ ಜನ ಅವರಿಗೆ ಚೆನ್ನಕೇಶವನ ದಿವ್ಯದೇವಾಲಯದ ಮೂಲೆ-ಮೂಲೆಯನ್ನೂ ಸಂದಿ-ಗೊಂದಿಯನ್ನೂ ಹಿಗ್ಗಿನಿಂದ ಹೆಮ್ಮೆಯಿಂದ ತೋರಿಸುತ್ತಿದ್ದರು. ಗಾಂಧೀಜೀ ಎಲ್ಲ ವಿಗ್ರಹಗಳ ಮೇಲೂ ಕೆತ್ತನೆಯ

ಮೇಲೂ ಕಣ್ಣಾಡಿಸಿದರು. ಅವರ ಮನಸು ಮಾತ್ರ ಅಲ್ಲಿರಲಿಲ್ಲ. ಆ ಸೊಬಗನ್ನು ದಂಗುಬಡಿದು ನೋಡುತ್ತಿದ್ದ ಸುತ್ತಲಿನ ಜನರನ್ನು ನೋಡಿ 'ದೇವರೆ, ಜನರ ಮಂದಬುದ್ಧಿಗೆ ಮದ್ದುಂಟೆ?' ಎಂದು ಒಳಗೊಳಗೆ ಅವರ ಎದೆ ಮಿಡುಕುತ್ತಿದ್ದಿರಬೇಕು. ಕಡೆಗೆ ಆ ಮಿಡುಕು ಹೊರಗೆ ಹರಿಯಿತು: 'ಭಾರತೀಯ ಶಿಲ್ಪಕಲೆಯ ಅದ್ಭುತ ಕೀರ್ತಿಧ್ವಜವಾದ ಈ ಗುಡಿಯ ಸೆಳೆತಕ್ಕೆ ಸಿಕ್ಕದವರು ಯಾರು? ದರಿದ್ರನಾರಾಯಣನ ಭಕ್ತನಾದ ನಾನು, ಇಂಥ ಕಣ್ಣಹಬ್ಬ ಸವಿಯುತ್ತ ಕಾಲಕಳೆಯಲು ಬಹುದೇ? ನನ್ನ ಬದುಕೆಲ್ಲ—ಗಳಿಗೆಗಳಿಗೆಯೂ—ಬಡವರ ಸೇವೆಗಾಗಿಯೇ ಮೀಸಲಾಗಿದೆ, ಮುಡಿಪಾಗಿದೆ. ಕೇಶವದಾಸರು ೫೦೦ ರೂಪಾಯಿಯ ನಿಧಿ ಕೂಡಿಸಿ ಕೊಡುವ ಮಾತು ಕೊಟ್ಟಿರದಿದ್ದರೆ ನಾನು ಇಲ್ಲಿಗೆ ಬರುತ್ತಲೇ ಇರಲಿಲ್ಲ.' ಭದ್ರಾವತಿಗೂ ಹೋಗಿದ್ದರು. ಅಲ್ಲಿಯ ಯಂತ್ರವೈಭವವನ್ನು ನೋಡಲಿಲ್ಲ, ಖಾದಿಯನ್ನು ತೊಡಿರೆಂದು ಅಲ್ಲಿಯ ಕೆಲಸಗಾರರಿಗೆ ಹೇಳಲಿಕ್ಕೆ.

ಇಂಥ ಪ್ರಸಂಗ ಗಾಂಧೀಜಿಯ ಬಾಳಿನಲ್ಲಿ ದಿನಾಲೂ ಕಂಡುಬರುತ್ತವೆ. ಅವರ ಜೀವನದಲ್ಲಿ ಸರಲತೆ ತಾನೇತಾನಾಗಿ ಹರಡಿಕೊಂಡಿದೆ. ಅಸ್ವಾಮ್ಯ—ಅಪರಿಗ್ರಹದ ತಾಪಸವ್ರತವನ್ನು ತೊಟ್ಟವರಿಗೆ, ಕಲೆಯ ಕ್ಷೇತ್ರ ಸಹಜವಾಗಿಯೇ ಹಿಗ್ಗುತ್ತದೆ. ಅಂಥ ಬಾಳಿನಲ್ಲಿ ಅಲಂಕಾರ ಪ್ರೀತಿಗೆ ಅವಕಾಶವಿಲ್ಲ; ಅಂದವಾದ ವಸ್ತುಗಳನ್ನು ಶೇಖರಿಸುವ ರುಚಿಯಿಲ್ಲ. ಆ ನಿಷ್ಠೆಗೆ ಲಕ್ಷ್ಯಶುದ್ಧಿಯಿದೆ; ಆ ಕಣ್ಣಿಗೆ ಗುರಿಯ ರೂಪ ಕಟ್ಟಿ ಉಳಿದುದು ಯಾವುದಕ್ಕೂ ಎಡೆಕೊಡದು. ಶ್ರೀರಾಮಚಂದ್ರನು ಒಮ್ಮೆ ತನ್ನ ಕೊರಲ ಸರವನ್ನು ತೆಗೆದು ಹನುಮಂತನಿಗೆ ಕೊಟ್ಟನಂತೆ ಅಭಿಮಾನದಿಂದ. ದಾನಕೊಟ್ಟ ದನದ ಹಲ್ಲು ಹಿಡಿದು ನೋಡಬಾರದೆಂಬ ವ್ಯವಹಾರಧರ್ಮಪರಲಿ, ಕೊಟ್ಟವನ ಇದಿರಿಗೇ ನಿರ್ದಾಕ್ಷಿಣ್ಯದಿಂದ ಆ ಸರದ ಮುತ್ತನ್ನು ಒಡೆದುನೋಡಲು ತೊಡಗುವುದೇ! ಒಂದೊಂದಾಗಿ ಅವನ್ನೆಲ್ಲ ಒಡೆದು ಪುಡಿಮಾಡಿದ ಹನುಮಂತ. ಸೀತಾದೇವಿಗೆ ಹನುಮಂತನ ಹುಡುಗಾಟ ಒಗ್ಗಲಿಲ್ಲ. ಭಕ್ತನನ್ನು ಬಿರುಗಣ್ಣಿನಿಂದ ನೋಡಿದಳು. ಹನುಮಂತ ವಿನಯದಿಂದ ಹೇಳಿದ: 'ರಾಮನಾಮ ಇದರಲ್ಲಿಲ್ಲ. ರಾಮನಾಮವಿಲ್ಲದ ವಸ್ತು ರಾಮನ ಕತ್ತಿನದೇ ಆದರೂ ನನಗೆ ಬೇಡ.'

ಆ ಏಕಾಗ್ರಚಿತ್ತಕ್ಕೆ ಮತ್ತೊಂದು ಹೇಗೆ ರುಚಿಸಬೇಕು? ಬಯಸ ಬಹುದಾದ ಅಖಂಡಸೌಂದರ್ಯ, ಸಮಸ್ತಸಂತೋಷ ಅಲ್ಲೇ ಹೆಪ್ಪು ಗಟ್ಟಿರುವಾಗ ಉಳಿದುದು ಹೇಗೆ ಅದಕ್ಕೆ ಒಗ್ಗೀತು? ತುಲಸೀದಾಸ ರಾಮಭಕ್ತ. ಅವನಿಗೆ ಕೃಷ್ಣವಿಗ್ರಹದಲ್ಲೂ ಕೂಡ ರಾಮನೇ ಕಾಣು ತ್ತಿದ್ದನಂತೆ. ಗಾಂಧೀಜಿಯ ತಾಪಸಜೀವನದಲ್ಲಿ ಇಂಥ ವಿಲಕ್ಷಣ ಅನು ಭವವೊಂದು ಕಾಣಬರುತ್ತದೆ. ತಮ್ಮ ನಿಷ್ಠೆಗೆ ಸಿಯಮಕ್ಕೆ ಹೊಂದ ಬಹುದಾದುದೇ ಅವರಿಗೆ ಸತ್ಯ. ಆ ಸತ್ಯವೇ ಸೊಗಸು. ಒಮ್ಮೆ ಗಾಂಧೀಜೀ ಹೇಳಿದರು: 'ನನಗೆ ದೇವರನ್ನು ಪ್ರತ್ಯಕ್ಷವಾಗಿ ನೋಡಬೇಕೆಂಬಾಶೆ ಯಿದೆ. ಸತ್ಯದ ಮೂಲಕ ಅಹಿಂಸೆಯನ್ನು ಸಾಧಿಸುವ ಬಯಕೆಯಿದೆ. ಸತ್ಯವಲ್ಲದ ಮಾರ್ಗದಿಂದ ಅಹಿಂಸೆಯನ್ನು ಸಾಧಿಸುವ ಉಪಾಯ ಇದ್ದರೂ ನನಗೆ ಬೇಡ. ನಾನು ದೇವರನ್ನು ಕಾಣಲಾಶಿಸುತ್ತೇನೆ. ನನ್ನ ದಾರಿಯಲ್ಲಿ ನನಗೆ ದೇವರು ಕಾಣುವುದಾದರೆ ಕಾಣಲಿ. ದೇವರಿಗೆ ಮನ ಸೊಪ್ಪಿದ ಬೆಲೆ ಕೊಡಬೇಕೆಂದರೆ ನಾನು ಆ ದೇವರನ್ನೇ ನೋಡುವುದಿಲ್ಲ. ನಾನು ಕಟ್ಟುವ ಬೆಲೆಗೆ ದೇವರು ಸಿಗಲಿ, ಅವನ ಬೆಲೆಗಲ್ಲ. ಹಾಗಲ್ಲಾ ಚೌಕಾಸಿಮಾಡಿದರೆ ಆ ಬೆಡಗಿಗೆ ನಾನು ಮನಸೋಲುವುದಿಲ್ಲ. ಸತ್ಯ ವಲ್ಲದ ಉಪಾಯದಿಂದ ದೇವರು ಕಾಣಬರುವುದಾದರೆ ನನಗೆ ಆ ಉಪಾ ಯವೂ ಬೇಡ, ಆ ದೇವರೂ ಬೇಡ. ಇದಿರಿಗೆ ಬಂದರೂ ನಾನು ನೋಡ ಲಿಕ್ಕಿಲ್ಲ. ನನ್ನ ಬೆಲೆ, ನನ್ನ ಹಾದಿ—ಕಂಡು ಬಂದರೆ ಬರಲಿ, ಇಲ್ಲದಿದ್ದರೆ ಬಿಡಲಿ. ದೇವರು ಕಟ್ಟಿದ ಬೆಲೆಗೆ ನನಗೆ ಮೋಕ್ಷ ಬೇಕಾಗಿಲ್ಲ, ನಾನು ಕಟ್ಟಿದ ಬೆಲೆಗೆ ಪಡೆದರೆ ಸರಿ.' ಬರಬಾರದ ವೇಷದಲ್ಲಿ ಬಂದರೆ ದೇವರಿಗೂ ಅಲ್ಲಿ ಒಳಗೆ ಬರಲು ಅಪ್ಪಣೆಯಿಲ್ಲ. ಪರ್ಣಕುಟಿಗೆ ಬರಬೇಕಾದರೆ ದೇವ ರಾದರೂ ಖಾದೀತೊಟ್ಟು ಬರಬೇಕು. ತಾನು ದೇವರೆಂದು ಹೇಳಿ ಬರ ಬೇಕು. ವೇಷ ಮರೆಯಿಸಿ ಬರುವ ಅಸತ್ಯಕ್ಕೆ ಅಲ್ಲಿ ಮನ್ನಣೆಯಿಲ್ಲ. ಗರುಡಗರ್ವಭಂಗದಲ್ಲಿ ಕೃಷ್ಣನ ಹೆಸರನ್ನು ಹೇಳಿದರೆ ಆಂಜನೇಯ 'ಯಾರೊ ಗೊತ್ತಿಲ್ಲ ಹೋಗು!' ಎಂದನಂತೆ. ರಾಮನ ಹೆಸರು ಹೇಳಿ ದರೆ ಆಗ ಹದಕ್ಕೆ ಬಂದನಂತೆ. ಏಕಾಂತಭಕ್ತಿಯ ಏಕಾಗ್ರನಿಷ್ಠೆಯ ಪರಿ ಪಾಕ ಅದು.

ಗಾಂಧೀಜೀ ಒಮ್ಮೆ ಸೀತೆಯ ಚೆಲುವನ್ನು ವಿಮರ್ಶಿಸಿದರು. ಅದು ಹೆಂಗುಸರ ಸಭೆ: 'ನಿಮ್ಮ ಹಾಗೆ ಒಡವೆ ವಸ್ತ್ರ ಮೈತುಂಬ ಹೇರಿ ಕೊಂಡಿದ್ದಳೇ ಸೀತೆ? ಆಕೆಯ ಒಡವೆಯಲ್ಲ ಆಕೆಗೆ ಒಪ್ಪಿದ್ದುದು; ಆಕೆ ಉಟ್ಟಿದ್ದ ನಾರುಸೀರೆ. ನಿಮಗೂ ಖಾದೀ ಸೀರೆ ಒಪ್ಪಿದಷ್ಟು ಈ ಚೀನಾಂಬರ ಒಪ್ಪಲಾರವು.' ಅವರಿಗೆ ಒರಟು ಖಾದೀ ಕಂಡಷ್ಟು ಅಂದ ವಾಗಿ ಕಿನಕಾಪು ಬಟ್ಟೆಯೂ ಕಾಣದು. ಖಾದಿಯ ಎಳೆಗಳಲ್ಲಿ ಅವರಿಗೆ ವಿಧವೆಯೊಬ್ಬಳ ಕರುಣಕಥೆ ಕೇಳುತ್ತದೆ. ಅನಾಥೆಯೊಬ್ಬಳ ದೀನಚಿತ್ರ ಕಾಣುತ್ತದೆ. ದಿಕ್ಕಿಲ್ಲದ ಮುದುಕಿಯ ಹರಕೆಯ ಅನುಭವವಾಗುತ್ತದೆ. ಆ ಚಿತ್ತವೃತ್ತಿಗೆ ಅವಿದಿತ ವೇದ್ಯಾಂತರವಾದ ಏಕಸ್ಥಾಯಿ ಇದೆ. ಅದಕ್ಕೆ ಆನಂದ ಹೊರಗಣ ಪದಾರ್ಥಗಳಲ್ಲಿಲ್ಲ, ಒಳಗಣ ಭಾವನೆಯಲ್ಲಿದೆ. ಆನಂದ ವೆಂದರೆ ಸುಖವಲ್ಲ. ಸುಖ ಇಂದ್ರಿಯಭೋಗ್ಯವಾದುದು. ಆನಂದ ಆಧ್ಯಾತ್ಮಿಕವಾದುದು. ನಾಮರೂಪಗಳು ಸುಖದ ಸಾಮಗ್ರಿ. ಬಹು ಭೇದಗಳಿಂದ ಭಿನ್ನಭಿನ್ನವಾದ ಈ ಪ್ರಪಂಚದಲ್ಲಿ ಅಭೇದಾನುಭವದ ಆತ್ಮ ರತಿ ಆನಂದಸಾಮಗ್ರಿ. ಅದೇ ಆನಂದ.

ಆದರೆ ತಲೆಗೆಲ್ಲಾ ಒಂದೇ ಮಂತ್ರವೇ? ರಾಯರೂ ರೈತರೂ ಇಬ್ಬರೂ ನೂಲಬೇಕೆ? ಎಲ್ಲರೂ ಸರಳತೆ ಸರಳತೆಯೆಂದರೆ ಸೌಂದರ್ಯ ಅಡವೀಪಾಲಾದೀತು. ಗಾಂಧೀಜಿಗೆ ಸರಳತೆಯ ಹುಚ್ಚು ಹಿಡಿದಿದೆ. ಅವರು ಗುಡಿಸಲು ಕಟ್ಟಿಕೊಂಡರೆ ನಾವೇಕೆ ನಮ್ಮ ಭವ್ಯ ಪ್ರಾಸಾದ ಗಳನ್ನು ಜರಿಯಬೇಕು. ಅವರು ಹಾಸಿಕೊಳ್ಳುವ ಈಚಲ ಚಾಪೆಯಿಂದ ಸಿಗುವ ಆನಂದ ಚಪ್ಪರಮಂಚದಲ್ಲಿ ಸಿಗಲಾರದೇನು? ಅವರ ಗುಡಿಸಲಿನ ಮಣ್ಣುಮೆತ್ತಿದ ಗೋಡೆ, ಸಗಣಿ ಸಾರಿಸಿದ ನೆಲ, ಬೋಳು ಅಂಗಳ ಇವೇಯೇನು ನಮ್ಮ ಆದರ್ಶ? ಗೋಡೆಗೆ ನಾಲ್ಕು ಪಟ ತೂಗುಹಾಕ ಬಾರದೆ, ನಯವಾದ ರೇಸಿಮೆ ಉಡಬಾರದೆ, ರುಚಿಯಾಗಿ ಊಟ ಮಾಡ ಬಾರದೆ? ಬೇಲೂರಿನ ಗುಡಿಯತನಕ ಹೋಗಿ ಅಲ್ಲಿಯ ಸೊಬಗನ್ನು ಸವಿ ಯದೆ ಬರುವುದು ರಸಿಕತೆಯೆ? ಈ ತರದ ಬಾಳಿನಲ್ಲಿ ಕಲೆಗೇನು ಬೆಲೆ ಯಿದೆ? ಹೀಗೆ ಎಷ್ಟೋ ಜನ ಕೇಳುತ್ತಾರೆ. ಅವರ ತುಂಡುಪಂಜೆ, ಬಕ್ಕ

ತಲೆ ನೋಡಿ 'ಗಾಂಧೀ ಬರೀಗೊಡ್ಡು, ನೀರಸ' ಎಂದಿದಾರೆ. 'ಗಾಂಧೀಜಿಗೂ ಕಲೆಗೂ ಏನಯ್ಯಾ ಸಂಬಂಧ, ಗೋಕುಲಾಷ್ಟಮಿಗೂ ಇಮಾಂಸಾಬಿಗೂ ಇದ್ದಹಾಗೆ!' ಎಂದು ನನ್ನ ಗೆಳೆಯರೊಬ್ಬರು ಹೇಳಿದರು. ಅವರು ಕಲಾವಿದರು, ಸಾಹಿತಿ. ಅವರೇ ಏಕೆ? ನೂರಕ್ಕೆ ತೊಂಬತ್ತೊಂಬತ್ತು ಜನ ಹಾಗೆಯೆ ತಿಳಿದಿದಾರೆ.

ಗಾಂಧೀಜಿಗೆ ಈ ವಾದದಲ್ಲಿ ಹುರುಳು ಕಾಣುವುದಿಲ್ಲ. ಗುರಿಯನ್ನು ಬಿಟ್ಟು ಸುತ್ತಾಡುವುದು ವೃಥಾ ಕಾಲಹರಣ. ಅವರು ದರಿದ್ರನಾರಾಯಣನ ಭಕ್ತರು. 'ಏನೇ ಮಾಡಲಿ, ಏನೇ ಆಡಲಿ, ನಾನು ನಮ್ಮ ಮೂವತ್ತುಮೂರು ಕೋಟಿ ಜನರನ್ನು ಮರೆಯಲಾರೆ. ಹಗಲಿರುಳು ಅವರ ಚಿಂತೆಯೇ ಚಿಂತೆ ನನಗೆ. ಚೆಲುವನ್ನು ನೋಡಿ ಆ ಚೆಲುವಿನ ನಡುವೆ ಸತ್ಯವನ್ನು ಕಾಣುವ ಹಾಗೆ ನಮ್ಮ ಜನಕೋಟಿಗೆ ನಾವು ಕಲಿಸಬಲ್ಲೆವೆ? ಆ ರೀತಿ ಶಿಕ್ಷಣ ಕೊಡುವುದು ಸಾಧ್ಯವೆ? ಅವರಿಗೆ ಮೊದಲು ಸತ್ಯ ತೋರಿಸುವ. ಅವರೇ ಅದರಲ್ಲಿ ಚೆಲುವನ್ನು ಆ ಮೇಲೆ ನೋಡಿಯಾರು. ಕನಸಿನಲ್ಲೂ ಎಚ್ಚರದಲ್ಲೂ ನನಗೆ ಉತ್ಕಲದ ಚಿತ್ರ ಕಣ್ಣಿಗೆ ಕಟ್ಟಿ ಕಾಣುತ್ತಿದೆ. ಆ ಹತಭಾಗ್ಯ ಜೀವಚ್ಛವಗಳಿಗೆ ಯಾವುದರಿಂದಲಾದರೂ ಲಾಭವಾಗುವುದಾದರೆ ಅದೇ ನನ್ನ ಪಾಲಿಗೆ ಚೆಲುವು. ಮೊದಲು ಹೊಟ್ಟೆಗೆ ಹಿಡಿ ಹಿಟ್ಟು, ಆಮೇಲೆ ಉಳಿದುದು. ಸದ್ಯ ಬದುಕಲಿಕ್ಕೆ ಅತ್ಯಗತ್ಯವಾದುದನ್ನು ಮೊದಲು ಕೊಡೋಣ. ಅನಂತರ ಅಂದಚೆಂದಗಳೆಲ್ಲ ತಾವೇ ಬಂದಾವು? ಅವರ ಜೀವನರಾಗದ ಶ್ರುತಿ ತಿಳಿಯದೆ ಅವರ ರಸ ಜೀವನ ತಿಳಿಯುವುದಿಲ್ಲ.

'ನಿಮ್ಮ ಬಾಳಿನ ರೀತಿಯಲ್ಲಿ ಕಲೆ ಕಾಣುವುದಿಲ್ಲ. ಕಲೆಗೆ ಬಹಿಷ್ಕಾರ ಹಾಕಿದಿರೇನು ನೀವು?' ಎಂದು ಒಬ್ಬರು ಆಪ್ತವರ್ಗದವರು, ಗಾಂಧೀಜಿಯನ್ನು ಕೇಳಿಯೇ ಬಿಟ್ಟರು ಒಂದುಸಲ.

ಗಾಂಧೀಜೀ ಹೇಳಿದರು: 'ಈ ವಿಷಯದಲ್ಲಿ ಜನ ನನ್ನ ಬಗ್ಗೆ ಬಹಳ ತಪ್ಪು ತಿಳಿದುಕೊಂಡಿದ್ದಾರೆ. ಎಲ್ಲ ವಸ್ತುಗಳಿಗೂ ಎರಡು ಅಂಗಗಳಿವೆ—ಅಂತರಂಗ, ಬಹಿರಂಗ. ಇವೆರಡರಲ್ಲಿ ನಾವು ಯಾವುದರ ಮೇಲೆ ಕಾಲೂರಿ

ನಿಲ್ಲುತ್ತೇವೆಂಬುದೇ ಮುಖ್ಯ. ನಮಗೆ ಯಾವುದರಲ್ಲಿ ಅಭಿರುಚಿಯೆಂಬುದು ಪ್ರಶ್ನೆ. ಅಂತರಂಗವಿಕಾಸಕ್ಕೆ ನೆರವಾಗದಿದ್ದರೆ ಬಹಿರಂಗವು ವ್ಯರ್ಥ. ಅದಕ್ಕೆ ಬೆಲೆಯಿಲ್ಲ. ಸತ್ಯವಾದ ಕಲೆ ಅಂತರಂಗದಿಂದ ಒಡಮೂಡಿ ಬಂದುದು; ಆ ವಿಕಾಸದ ಆವಿರ್ಭಾವ. ಒಳಗಿರುವ ಬೆಳಕನ್ನು ಎಷ್ಟೆಷ್ಟು ದೂರ ಹೊರಗೆ ಹರಿಯಿಸಬಲ್ಲವೋ ಅಷ್ಟಷ್ಟು ಬೆಲೆ ಹೊರಗಿನ ರೂಪಕ್ಕೆ. ಮಾನವನ ಅಂತರಂಗದ ಪ್ರತಿಬಿಂಬವಾದಷ್ಟು ಪ್ರಮಾಣದಲ್ಲೇ ಬಹಿರಂಗಕ್ಕೆ ಬೆಲೆ. ಆ ತರದ ಕಲೆ ನನಗೆ ತುಂಬಾ ಇಷ್ಟ. ಆದರೆ ಈಗೇನು, ಎಲ್ಲರೂ ಕಲಾವಿದರೇ! ಅವರ ಕಲೆಯಲ್ಲಿ ಮಾತ್ರ ಆತ್ಮೋನ್ನತಿಯ ಪ್ರಯತ್ನವೂ ಇಲ್ಲ, ಆತ್ಮವಿಕಾಸದ ಗುರುತೂ ಇಲ್ಲ.'*

ಸ್ವಭಾವವಾದ, ವಾಸ್ತವವಾದ ಇವು ಇಂದು ಕಲೆಯ ರಾಜ್ಯದಲ್ಲಿ ಕಾಲುಹಾಕಿವೆ.† 'ಕಲೆ ಕಲೆಗಾಗಿ' ಎಂಬ ವಾದವೊಂದು ಎದ್ದಿದೆ.

---

* ಬಹಿರಂಗದ ಫಲ ಅಷ್ಟೇ. ನಮ್ಮ ಚಿತ್ತವೃತ್ತಿಯನ್ನು ವಸ್ತುವಿಶೇಷವಾದ ಅಂತರಂಗಕ್ಕೆ ಎಳೆದುಕೊಂಡು ಹೋಗಿ ಅಲ್ಲಿ ಬಿಟ್ಟು, ತಾನು ಹಿಂದೆ ಸರಿದುಕೊಳ್ಳುತ್ತದೆ. ಕಳಾವಂತನ ಮುಖ್ಯವಾದ ಕೆಲಸ ಆ ಚಿತ್ತವೃತ್ತಿಯನ್ನು ಅಲ್ಲಿ ಏಕಾಗ್ರವಾಗಿ ನಿಲ್ಲಿಸುವುದೇ. ಆದುದರಿಂದ ಯಾವ ಕಲೆಯಲ್ಲಾಗಲಿ ಬಹಿರಂಗಾಭಿನಯ ಮಾಡುವವನಿಗಿಂತ ಅಂತರಂಗದ ಭಾವಭೇದಗಳನ್ನು ಸ್ಪಷ್ಟವಾಗಿ ಪ್ರದರ್ಶಿಸುವುದೇ ನಮ್ಮನ್ನು ಹೆಚ್ಚು ಸೆಳೆಯುತ್ತದೆ. ಕಲ್ಲಿನಲ್ಲಿ ಗಡಿಗೆ ಕೊರೆಯುವವನಿಗಿಂತ ಪ್ರತಿಮೆಯನ್ನು ಕಟೆಯುವವನಿಗೆ ಮರ್ಯಾದೆಯೂ ಬೆಲೆಯೂ ಹೆಚ್ಚು. ಕಾರಣ—ಮೊದಲಿನದರಲ್ಲಿ ಅಂತರಂಗ ಚರ್ಚೆ ಇಲ್ಲ. ಎರಡನೆಯದರಲ್ಲಿ ಅಂತರಂಗದೃಷ್ಟಿ ಅನಿವಾರ್ಯ. ಇಲ್ಲದೆ ಇದ್ದರೆ ಮೊದ್ದು ಗೊಂಬೆ ಎನ್ನುತ್ತೇವೆ. ಮುಖ್ಯವಾಗಿ ಕಲೆಗೆ ಸಾಧ್ಯ ಚಿತ್ತೈಕಾಗ್ರತೆ ಅದರ ಫಲ ಶಾಂತಿ.

ನಾಟಕೋಪನ್ಯಾಸಗಳು: **ರಾ. ಅನಂತಕೃಷ್ಣ ಶರ್ಮ**

† ಸ್ವಭಾವವಾದ ಬಹಳ ಬೆಳೆದುಹೋಗಿದ್ದರೂ ಸ್ವಲ್ಪ ವಿಮರ್ಶೆ ಮಾಡಿದರೆ ಸಾಕು ಸಡಲಿ ಹೋಗುತ್ತದೆ. ಅನುಕರಣದಿಂದಲೆ ಕಲೆ ಪ್ರಾರಂಭ ನಿಜ. ಆದರೆ ಸಂಪೂರ್ಣವಾಗಿ ಯಾವ ವಸ್ತುವನ್ನು ಅನುಕರಿಸಬಹುದು.? ಒಂದು ಮಲ್ಲಿಗೆ ಹೂವನ್ನು ಬಟ್ಟೆಯಲ್ಲೋ ಕಾಗದದಲ್ಲೋ ಕತ್ತರಿಸಬಹುದು; ಲೋಹದಿಂದ ಎರಕ ಹುಯ್ಯಬಹುದು; ದಂತದಲ್ಲಿ ಕೆತ್ತಬಹುದು; ಪಟದ ಮೇಲೆ ಬಣ್ಣದಿಂದ ಚಿತ್ರಿಸಬಹುದು; ಬೆರಳು ಮಡಿಸಿ ತೋರಿಸಬಹುದು; ಅದರ ಮೇಲೆ ಪದ್ಯ ಬರೆಯಬಹುದು. ಆದರೆ ಇವು ಯಾವುದರಲ್ಲೂ, ಎಲ್ಲದರಲ್ಲೂ ಸೇರಿಸಿ ನೋಡಿದರೂ ನಿಜವಾದ ಹೂವಿನ ಬಣ್ಣ,

ಸತ್ಯವನ್ನು ಕಾಣಬೇಕೆಂಬುದಕ್ಕಿಂತ ಕಂಡದ್ದೇ ಸತ್ಯವೆಂಬ ಪಂಥ ಮೊದಲಾಗಿದೆ. ಕೆಲವು ಕಡೆ ಅಶ್ಲೀಲತೆ ಕಲೆಯ ಹೆಸರಿನಲ್ಲಿ ತಾನೇತಾನಾಗಿ ಮೆರೆಯುತ್ತಿದೆ. 'ಅಂತರಂಗ ಹೇಗಾದರೂ ಇರಲಿ, ಬಹಿರಂಗ ಅಂದವಾಗಿದ್ದರೆ ಸಾಕು' ಎಂಬ ಅರ್ಥವಿಲ್ಲದ ತೃಪ್ತಿಯುಂಟಾಗಿದೆ. ಇಂಥ ಕಲೆ ಗಾಂಧೀಜಿಗೆ ಹಿಡಿಸುವುದಿಲ್ಲ.

'ಜೀವಿಗೆ ತನ್ನ ಅಂತರಾತ್ಮದರ್ಶನ ಮಾಡಿಸಿಕೊಡಲು ನೆರವಾಗದ ಕಲೆ ಕಲೆಯಲ್ಲ. ನನ್ನ ಮಟ್ಟಿಗೆ ಕಲಾಸಾಮಗ್ರಿಯೆನಿಸಿಕೊಂಡಿರುವ ಹೊರಗಣ ರೂಪ-ವಸ್ತುಗಳ ಸಹಾಯ ನನ್ನ ಆತ್ಮಸಾಧನೆಗೆ ಅಗತ್ಯವಿಲ್ಲ. ನನ್ನ ಬಳಿ ಕಲಾಕೃತಿಗಳಾಗಲಿ ಕಲಾವಸ್ತುಗಳಾಗಲಿ ಕಾಣದಿದ್ದರೂ, ನನ್ನ ಜೀವನವು ಕಲಾಪರಿಪೂರ್ಣವೆಂದು ನಾನು ಹೇಳುತ್ತೇನೆ. ನನ್ನ ಗುಡಿಸಿಲ ಗೋಡೆಗಳು ಶೂನ್ಯವಾಗಿರಬಹುದು. ನೆತ್ತಿಯ ಮೇಲೆ ನೀಳಾಗಿ

---

ಸ್ಪರ್ಶ, ಆಳತೆ, ಸುಗಂಧ, ರೂಪ ಮೊದಲಾದ ಸರ್ವಾಂಗಗಳನ್ನೂ ನಾವು ಅನುಕರಿಸಿದ ಹಾಗೆ ಆಗುತ್ತದೆಯೇ? ರಂಗಸ್ಥಳದ ಮೇಲೆ ಒಬ್ಬನನ್ನು ಇರಿದುಕೊಲ್ಲುವ ಸನ್ನಿವೇಶ ಬಂದಾಗ ನಿಜವಾಗಿಯೂ ಅವನನ್ನು ಇರಿದು ಕೊಂದರೆ ಹೊರತು ಅವನು ಸತ್ತಹಾಗಾಯಿತೇ, ಹೀಗೆ ಅನರ್ಥದಾಯಕವೂ ಅಸಾಧ್ಯವೂ ಆಗುವುದು ಹಾಗಿರಲಿ. ಸಂಪೂರ್ಣಾನುಕರಣೆ ಕಲೆಗೆ ಅನಾವಶ್ಯಕ. ಏಕೆಂದರೆ, ಕಲೆಯ ಕೆಲಸ ವಸ್ತುವಿನ ವಿಶಿಷ್ಟ ಸ್ವರೂಪವನ್ನು-ಇದು ಇಂಥದು ಎಂದು ಗುರುತಿಸುವುದಕ್ಕೆ ಬೇಕಾದ ಮುಖ್ಯ ಧರ್ಮವನ್ನು-ನಮ್ಮ ಭಾವನಾ ವಿಧಿಯಲ್ಲಿ ಪ್ರತಿಬಿಂಬಿಸುವುದನ್ನು ಬಿಟ್ಟು ಅದರ ಅಂಗೋಪಾಂಗ ಜ್ಞಾನವನ್ನು ನಮ್ಮ ಮಿದುಳಿಗೆ ಹತ್ತಿಸುವುದಲ್ಲ. ಚಿತ್ರಿಸಿದ ಜಂತು ಕತ್ತೆಯಲ್ಲ ಕುದುರೆ ಎಂದು ತಿಳಿಸಬೇಕಾದಾಗ ಉದ್ದವಾದ ಕುಚ್ಚನಂಥ ಬಾಲ ತೋರಿಸಬೇಕಾದ ವಿಶೇಷಾಂಗಗಳಲ್ಲಿ ಒಂದು. ಆದರೆ ಆ ಬಾಲದ ಕೂದಲನ್ನೆಲ್ಲ ಲೆಕ್ಕಹಾಕಿ ತೋರಿಸಬೇಕಾಗಿಲ್ಲ. ಮಲ್ಲಿಗೆ ಬಿಳಿಯದು. ಅದನ್ನು ಕರಿಯ ಕಲ್ಲಿನಲ್ಲಿ ರೂಪಿಸಬೇಕಾದೀತು. ಹಿಮಾಲಯದಂಥ ಸರ್ವೋನ್ನತ ಪರ್ವತವನ್ನು ಅಂಗುಲದಷ್ಟು ಸ್ಥಲದಲ್ಲಿ ಸಂಗ್ರಹವಾಗಿ ಚಿತ್ರಿಸಬಹುದು. ಶ್ರವಣಬೆಳುಗೊಳದ ಗೋಮಟೇಶ್ವರ ವಿಗ್ರಹ ಅವರತ್ತು ಅಡಿ ಎತ್ತರ ಇದ್ದರೂ ಮನುಷ್ಯವಿಗ್ರಹವೇ. ವಸ್ತುವಿನ ಅಂತರಂಗ ತತ್ವವನ್ನು ಚೆನ್ನಾಗಿ ಭಾವನೆಮಾಡಬಲ್ಲ ಶಿಲ್ಪಿ ಸಿಕ್ಕರೆ ನಾವು ಸಾಮಾನ್ಯವಾಗಿ ಅವಶ್ಯಕವೆಂದು ಮುಖ್ಯವೆಂದು ತಿಳಿಯುವ ಹೊರಗಿನ ಅಂಗಗಳು ಕೂಡ ನಿರರ್ಥಕ ಅನಿಸುತ್ತದೆ.

ನಾಟಕೋಪನ್ಯಾಸಗಳು: ರಾ. ಅ. ಕೃ.

ಕವಿದಿರುವ ಅನಂತ ಸೌಂದರ್ಯದಿಂದ ತುಂಬಿದ ತಾರಾಮಂಡಲವನ್ನು ನೋಡಬೇಕೆಂದು ಗುಡಿಸಿಲಿನ ಚಪ್ಪರವನ್ನೂ ನಾನು ತೆಗೆದೇನು. ಮೇಲೆ ನೋಡಿದರೆ ಕಾಣುವ ನಕ್ಷತ್ರ-ಗ್ರಹಗಳ ಅಲೌಕಿಕ ಲೀಲೆಯು ಆನಂದ ವನ್ನೂ ಆ ರಮಣೀಯ ದೃಶ್ಯಗಳನ್ನೂ ಯಾವ ಮಾನವ ಕಲಾಕೃತಿ ಕೊಡಬಲ್ಲದು? ಹೀಗೆಂದರೆ ನಾನು ಸಾಮಾನ್ಯ ಕಲಾ-ವಸ್ತುಗಳನ್ನೆಲ್ಲ ಬಹಿಷ್ಕರಿಸಿದ್ದೇನೆಂದು ತಿಳಿಯಬಾರದು. ನಿಸರ್ಗ ಸೌಂದರ್ಯದ ಚಿರಂತನ ಪ್ರತೀಕಗಳೆದುರು ಇವು ಎಷ್ಟು ನಿಸ್ಸಾರವೆಂಬುದನ್ನು ತೋರಿಸಿದೆ, ಅಷ್ಟೆ. ಮಾನವನ ಕಲಾಕೃತಿಗೆ ಬೆಲೆ ಸಿಕ್ಕಬೇಕಾದರೆ, ಅವು ಆತ್ಮವಿಕಾಸಕ್ಕೆ ಸಹಾಯವಾಗಬೇಕು.'

ಕಲೆ ಇಂದ್ರಿಯಾನುಭೂತಿಯಲ್ಲ, ಭಾವಾನುಭೂತಿ. ರೂಪವಲ್ಲ ಕಲೆಯ ರಾಜ್ಯ, ಗುಣ. ಸ್ಥೂಲಶರೀರವಲ್ಲ ಅದರ ಲಕ್ಷ್ಯ, ಸೂಕ್ಷ್ಮಶರೀರ. ಅದರಲ್ಲಿ ವ್ಯಕ್ತಿವಿಕಾರಕ್ಕೆ ಎಡೆಯಿರಬಾರದು. ಸಮಷ್ಟಿವಿಕಾಸಕ್ಕೆ ಹಾದಿ ಯಿರಬೇಕು. 'ಸರ್ವೋತ್ಕೃಷ್ಟವಾದ ಕಲೆ ಸರ್ವಭೋಗ್ಯವಾದೀತು; ವ್ಯಕ್ತಿಭೋಗ್ಯವಾಗದು.' ಬೇರೆಬೇರೆ ರುಚಿಗಳಿರುವಾಗ ಇದು ಸಾಧ್ಯವೆ? 'ಬಾಹ್ಯಾವಲಂಬನೆ ಕಡಮೆಯಾದರೆ ಕಲೆ ಸರ್ವಭೋಗ್ಯವಾಗುವುದು. ಎಂತಲೇ ನಾನು ಪದೇಪದೇ ಅನ್ನುತ್ತೇನೆ. ಲೆಕ್ಕವಿಲ್ಲದ ಚಿಕ್ಕೆಗಳೂ ಚಂದ್ರನೂ ಬೆಳಗುವ ಮುಗಿಲನ್ನು ನೋಡಿ ಯಾರು ಜಗತ್ಕರ್ತನ ಲೀಲೆ ಯಲ್ಲಿ ತಲ್ಲೀನರಾಗಬಲ್ಲರೋ ಅವರಿಗೆ ಚಿತ್ರಕಾರನು ಬರೆದ ಮುಗಿಲು ನಸುಕು-ಸಂಜೆಗಳನ್ನು ನೋಡುವ ಅಗತ್ಯವೇನು? ಗಳಿಗೆಗಳಿಗೆಗೂ ಹೊಚ್ಚಹೊಸ ಬಣ್ಣ ತೋರುತ್ತ ಹೊಸಹೊಸ ಸೊಬಗನ್ನು ಬೀರುವ ಆಕಾಶದಿಂದಲೇ ಅವರು ತಮಗೆ ಬೇಕಾದುದನ್ನು ಹೀರಿಕೊಳ್ಳಬಲ್ಲರು.

'ವಿಚಾರಮಾಡಿ ನೋಡಿ. ಎಲ್ಲಿ ಸೃಷ್ಟಿದೇವಿ ನಮ್ಮ ಕಣ್ಣಿಗೆ ಹಬ್ಬ ವಾಗಿ ರಮಣೀಯವಾಗಿ ಸೂರ್ಯೋದಯವನ್ನು ರಚಿಸಿಲ್ಲವೋ ಅಲ್ಲಿ ಮನುಷ್ಯ ಬರೆದ ಚಿತ್ರ ಕೊಂಚ ತೃಪ್ತಿ ಕೊಟ್ಟೀತು. ವರುಷದಲ್ಲಿ ಹನ್ನೆರಡು ತಿಂಗಳು, ನಿಸರ್ಗದ ಸೂರ್ಯೋದಯ ಸೂರ್ಯಾಸ್ತಗಳ ಲೀಲೆ ನೋಡಲು ಸಿಕ್ಕುವಲ್ಲಿ, ಚಿತ್ರದ ಸೂರ್ಯೋದಯ ಸೂರ್ಯಾಸ್ತಗಳನ್ನು ನೋಡಲು

ಮನುಷ್ಯ ಕಾತರನಾದಾನೆ? ಪರುಷದಲ್ಲಿ ಆಗೊಮ್ಮೆ ಈಗೊಮ್ಮೆ ಅದರ ನೋಟ ಲಭಿಸುವ ಸ್ಥಳದಲ್ಲಿ ತನಗಾಗಿ, ತನ್ನಂಥವರಿಗಾಗಿ ಚಿತ್ರಕಾರ ಚಿತ್ರ ಬರೆಯುತ್ತಾನೆ; ಮೂರ್ತಿಯೊಂದನ್ನು ನಿರ್ಮಿಸುತ್ತಾನೆ. ಮೂರ್ತಿಯ ಒಳಗಿನ ಭಗವಂತನ ಚಿಂತನೆ–ದರ್ಶನಗಳಿಲ್ಲದೆಯೆ ಮೂರ್ತಿಯನ್ನು ಮಾಡಿಸಬಲ್ಲವರ ಮಾತೇ ಬೇಡ. ತನ್ನ ಹೃದಯದಲ್ಲೇ ಸದಾ ಭವ್ಯಾಕಾಶದ ಲೀಲೆಯನ್ನು ನೋಡಬಲ್ಲವನಿಗೆ ಹೊರಗಣ ಮುಗಿಲಿನ ಚಂದ್ರ-ನಕ್ಷತ್ರಗಣವನ್ನು ನೋಡುತ್ತಿರಬೇಕಾದ ಅಗತ್ಯವೂ ಕೂಡ ಕಡಮೆಯಾಗುತ್ತದೆ.'

'ನಿಜವಾಗಿ ನೋಡಿದರೆ ಒಳಗೆ ಇಲ್ಲದುದು ಹೊರಗೆ ಉಂಟೆ? ದೃಷ್ಟಿಯಲ್ಲಿಲ್ಲದುದು ಸೃಷ್ಟಿಯಲ್ಲಿದೆಯೆ? ಕಬೀರದಾಸ ಹಾಡಿದಾನೆ ಆ ಅನುಭವಾಮೃತ:

**ಯಾ ಘಟ ಭೀತರ್ ಸಾತ್ ಸಮುಂದರ್ ಯಾಹೀಮೇ ನದ್ದೀ ನಾರಾ**
**ಯಾ ಘಟ ಭೀತರ್ ಕಾಸೀ ದ್ವಾರಕಾ ಯಾಹೀಮೇ ಠಾಕೂರ ದ್ವಾರಾ**
**ಯಾ ಘಟ ಭೀತರ್ ಚಂದ್ರಸೂರ್ ಹೈ ಯಾಹೀಮೇ ನವಲಖ್ ತಾರಾ**
**ಕಹೇ ಕಬೀರ್ ಸುನೋ ಭಾಯಿ ಸಾಧೋ ಯಾಹೀಮೇ ಸತ್ ಕಿರತಾರಾ**

'ಈ ಮೈಯೊಳಗೇ ಸಪ್ತಸಮುದ್ರಗಳಿವೆ. ಹೊಳೆ ಕಾಲುವೆ ಇವೆ. ಕಾಶಿ-ದ್ವಾರಕೆ-ಠಾಕುರದ್ವಾರ ಎಲ್ಲ ತೀರ್ಥಗಳೂ ಇವೆ. ಇದರಲ್ಲೇ ಚಂದ್ರ-ಸೂರ್ಯರೂ ನವಲಕ್ಷ ನಕ್ಷತ್ರಗಳೂ ಎಲ್ಲ ಸೃಷ್ಟಿಯೂ ಇವೆ' ಇದನ್ನು ಹಾಡಿದಾಗ ಕಬೀರನ ಹೃದಯದಲ್ಲಿ ಶಬ್ದ-ಸ್ಪರ್ಶ-ರೂಪ-ಗಂಧಗಳ ಸರ್ವಸೃಷ್ಟಿಯೂ ಮೂಡಿತ್ತು. ಅವನಿಗೆ ಬಾಹ್ಯಾಕಾಶದ ಅಗತ್ಯವೇ ಇರಲಿಲ್ಲ. ಇಂಥ ಅವಸ್ಥೆಯಲ್ಲೇ ಆತ ಹೀಗೆ ಹಾಡಿದ್ದು.'

ಇದೆಲ್ಲ ಯೋಗಾನಂದದ ಕಲೆ. ವಿಷಯಾನಂದದಲ್ಲಿ ಮುಳುಗಿ ಬಾಳನ್ನು ಹೋಳಿಯ ಹಬ್ಬದ ಭೀಭತ್ಸದಲ್ಲಿ ಹರಿಯಿಸುವ ಕಲೆ ಕಲೆಯಲ್ಲ, ಅದು ಸಂಕೋಲೆ. ಕಲೆ ನಮ್ಮನ್ನು ಮೇಲ್ಮಟ್ಟಕ್ಕೆಳೆಯಬೇಕು, ಕೆಳಗೆ ಸೆಳೆಯಬಾರದು. ನರ್ತಕಿಯ ರೂಪಲಾವಣ್ಯದಲ್ಲಿ ಹುಡುಕಬೇಕಾದುದಿಲ್ಲ ಕಲೆಯನ್ನು. ಅವಳ ಕಾಲಿನ ಲಯದಲ್ಲಿ ಆ ಗತಿಯಲ್ಲಿ ಕಾಣಬೇಕು.

ನೈಜವನ್ನು ಬಿಟ್ಟು ಬಾಹ್ಯದ ಸೆಳೆತಕ್ಕೆ ಸಿಕ್ಕರೆ ಕಲೆ ರಾಗದ್ವೇಷಮಯ ವಾಗುತ್ತದೆ. ಕೃತ್ರಿಮವಾಗಿ ಕಂಟಕವಾಗುತ್ತವೆ. ವಿನೋದ-ವಿಲಾಸಗಳ ಸಾಮಗ್ರಿಯಾಗಿದ್ದ ಕಲೆಯನ್ನು ಗಾಂಧೀಜಿ ವಿಕಾಸದ ಉಪಾಯವನ್ನಾಗಿ ಮಾಡಿದಾರೆ. ಸಿಂಗಾರ ಒಯ್ಯಾರಗಳ ಕಸದ ಗುಂಡಿಯಲ್ಲಿ ಬಿದ್ದಿದ್ದ ಕಲೆ ಯನ್ನು ಗಾಂಧೀಜೀ ಜೀವನಸಿಂಹಾಸನದ ಮೇಲೆ ಕೂಡಿಸಿದ್ದಾರೆ. 'ಕಲೆ ಮಾಯಾಭ್ರಾಂತಿಯ ಜಾಲವಾಗದಿರಲಿ. ಸತ್ಯಸಾಕ್ಷಾತ್ಕಾರದ ಸೋಪಾನವಾಗಲಿ' ಎಂಬುದೇ ಅವರ ಕಲಾಭಿಮಾನದ ಗುಟ್ಟು. 'ಮೊದಲು ಸತ್ಯ ಆಮೇಲೆ ಸೌಂದರ್ಯ' ಎಂಬುದು ಅವರ ಹಾದಿ.

ಅಂದ-ಚೆಂದಗಳು ಸತ್ಯವಲ್ಲವೆ? ಅದೂ ದೈವಸೃಷ್ಟಿಯೇ ತಾನೆ? ಸವಿಯಾದ ಸಂಗೀತ ಕೇಳಿದಾಗ ನಮ್ಮ ಮನಸ್ಸು ನೊಗ್ಗಾಗಿ ಮುದುಡಿ ಕೊಳ್ಳುತ್ತದೆ; ಆ ಚೆಲುವಿನಲ್ಲಿ ಸತ್ಯವಿಲ್ಲವೆ? ಇರದಿದ್ದರೆ ತಾನೆ ಏನು ನಷ್ಟ? ಕಲಾವಿದರೆಲ್ಲ 'ರಸಾನಂದವೇ ಕಲೆಯ ಗುರಿ' ಯೆಂದಿದಾರೆ. ರಮಣೀಯಾರ್ಥಪ್ರತಿಪಾದನೆಯೇ ಕಲೆಯೆಂದಿದಾರೆ. ಚೆಲುವಿನಲ್ಲಿ ಸತ್ಯ ಕಾಣದೆ? ಚೆಲುವೇ ಸತ್ಯವಲ್ಲವೆ?

'ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ' ಎಂದು ಇಂಗ್ಲೀಷು ಕವಿಯೊಬ್ಬ ಹಾಡಿದ. ಹಾಗೆ ಹಾಡಿದಾಗ ಕವಿಯ ಮನಸ್ಸಿನಲ್ಲಿ ಕಣ್ಣಿಗೆ ಕಂಡ ಸೊಗಸಾದ ವಸ್ತುವೆಲ್ಲ ಸತ್ಯವೆಂದಿರಲಾರದು. ಬೆಳ್ಳಗಿರುವುದೆಲ್ಲ ಹಾಲಲ್ಲ. ಕವಿಯ ಕಣ್ಣು ನಾಮರೂಪದ ಬಲೆಯಲ್ಲಿ ಸೆರೆ ಸಿಕ್ಕುವುದಿಲ್ಲ. ಕಣ್ಣಿಗೆ ಕಾಣುವ ಸೊಗಸು ಚೆಲುವು ಎಲ್ಲಾ ಸತ್ಯದ ಮೇಲೆ ಮುಚ್ಚಿದ ಬಂಗಾರದ ಮುಚ್ಚಳ. ಆ ಮಿರುಗುವ ಮುಚ್ಚಳ ತೆಗೆದು ಪಾತ್ರೆಯೊಳ ಗಿನ ನಿತ್ಯಸತ್ಯದಲ್ಲಿ ಕೈಯಿಡುತ್ತಾನೆ ಕವಿ. ವಿಕಲಾಂಗನಾಗಿ ಕುರೂಪಿ ಯಾದ ಭಿಕಾರಿಯನ್ನು ಬೀದಿಯಲ್ಲಿ ಕಂಡಾಗ ದೂರ ಸರಿಯುತ್ತೇವೆ. ಮನಸ್ಸು ಆ ರೂಪಿಗೆ ಹೇಸಿಕೊಳ್ಳುತ್ತದೆ. ಅದೇ ಚಿತ್ರಕಾರನೊಬ್ಬನು ಅವನ ಚಿತ್ರ ಬರೆದು ಅದರಲ್ಲಿ ಅವನ ಬಾಳಿನ ದೈನ್ಯವನ್ನು ಕೋಡಿಹರಯಿ ಸಿದರೆ ಆ ಚಿತ್ರ ಸುಂದರವಾದುದಾಗುತ್ತದೆ. ಅದನ್ನು ನಡುಮನೆಯಲ್ಲಿ ತೂಗುಹಾಕುತ್ತೇವೆ. ರಂಭೆ-ಊರ್ವಶಿಯರಿಗಿಂತ ಚೆಲುವೆಯರುಂಟೆ?

ಅವರ ಚೆಲುವಿಗೆ ನಮ್ಮ ಜನ ಮರುಳಾಗಲಿಲ್ಲ. ಇವರು ಗದ್ದುಗೆಗೇರಿಸಿದ ಹೆಣ್ಣು, ಕರಾಳಸ್ವರೂಪಿಣಿಯಾದ ಕಾಳಿ, ರವಿ ಕಾಣದುದ ಕವಿ ಕಾಣುವ ನಂತೆ. ರವಿಗೆ ಕಾಣುವುದೆಲ್ಲ ಹೊರಗಿನ ರೂಪ. ಅವನು ಕಾಣಲಾರದುದು ಆ ವಸ್ತುವಿನ ಭಾವ, ಅದರೊಳಗಿನ ಮಿಡಿತ. ಅದನ್ನು ಕಾಣುವವ ಕವಿ. ಆ ನೈಜದ ಆನಂದವನ್ನು ಬೀರುವುದು ಕಲೆಯ ಕೆಲಸ.

ಯಾರಿಗೆ ಏನಾದರೂ ಆಗಲಿ, ಗಾಂಧೀಜಿಗೆ ಮಾತ್ರ ಸತ್ಯವೇ ಸೌಂದರ್ಯ. ಸತ್ಯದ ಬೆಳಕನ್ನು ಕನ್ನಡಿಸುವ ಎಲ್ಲ ವಸ್ತುವೂ ಚೆಲುವೇ. ನಿಜವಾದ ಚಿತ್ರ, ನಿಜವಾದ ರೂಪ, ನಿಜವಾದ ಗೀತ, ಎಲ್ಲವೂ ತುಂಬ ಚೆನ್ನು. ಸಾಧಾರಣ ಮನುಷ್ಯನಿಗೆ ಸತ್ಯದಲ್ಲಿ ಚೆಲುವು ಕಾಣಿಸದು. ಅವ ನಿಗೆ ಸತ್ಯ ಭೀಕರ ಕಾಣುತ್ತಿದೆ. ಅದರ ಚೆಲುವನ್ನು ಅರಿಯಲಾರದೆ ಬರಿಯ ಭೀಷಣತೆಯನ್ನು ಕಂಡು ಓಡಿಹೋಗುತ್ತಾನೆ. ಅವನ ಪಾಲಿಗೆ ಆ ಸೌಂದರ್ಯ ಇಲ್ಲದೆ ಹೋಗುತ್ತದೆ. ಸತ್ಯದಲ್ಲಿ ಸೌಂದರ್ಯವನ್ನು ಕಾಣಲು ಎಂದು ಮನುಷ್ಯ ಸಮರ್ಥನಾಗುತ್ತಾನೆಯೋ ಅಂದು ಅವನು ಕಲೆ ಯನ್ನು ಕಾಣಲರಿತ, ಕಲಾದರ್ಶನ ಮಾಡಲರಿತ ರಸಿಕನಾದ.'

ಈ ಪ್ರಪಂಚವೊಂದು ದೊಡ್ಡ ಅರಮನೆ. ಅದರ ರಾಣಿಯನ್ನು ಎಲ್ಲರೂ ಅರಸುತ್ತಿದ್ದಾರೆ. ಅರಮನೆಗೆ ಲೆಕ್ಕವಿಲ್ಲದಷ್ಟು ಬಾಗಿಲಿವೆ. ಆ ಬಾಗಿಲೆಲ್ಲ ರಾಣಿಯ ಒಳಿಗೆ ಒಯ್ಯುವುದಿಲ್ಲ. ರಾಣಿ ಸತ್ಯದ ಬಾಗಿಲಲ್ಲಿ ಕೂತಿದಾಳೆ. ಅಲ್ಲೇ ಆಕೆಯ ದರ್ಶನ. ಬದುಕು ಇಷ್ಟು ನಿಕರವಾಗಿಲ್ಲ. ಬೇರೆ ಬೇರೆ ಬಾಗಿಲಲ್ಲಿ ನುಗ್ಗಿದ ಜನರೂ ರಾಣಿಯನ್ನು ಕಂಡಂತೆ ಹೇಳು ತ್ತಾರೆ. ಹೊಲಸು ಬಾಳು ಬದುಕಿದವರು ಕೆಲವರೂ ಉತ್ತಮೋತ್ತಮ ಕಲಾಕೃತಿಗಳನ್ನು ಜಗತ್ತಿಗೆ ನೀಡಿದಾರೆ. ಹಿಂದಿನ ಮಹಾಕವಿಗಳು ಎಲ್ಲರೂ ಪವಿತ್ರರಾಗಿರಲಿಲ್ಲ, ಸತ್ಯವನ್ನು ಬಿಟ್ಟು ರೂಪಕ್ಕೇ ಮರುಳಾಗಿದ್ದ ವರೂ ಇದ್ದರು. ಹಾಗೆ ನೋಡಿದರೆ ಕಲೆಗೆ ಮುಖ್ಯವಾದ ಭಾವಾನು ಭೂತಿಗೆ ಸತ್ಯ, ಸೌಂದರ್ಯ ಎರಡೂ ಎರಡು ದಾರಿಗಳೆನ್ನಬಾರದೆ?

ಗಾಂಧೀಜೀ ಎರಡನೆಯ ಬಾಗಿಲಲ್ಲಿ ಕಾಣುವುದು ಬರೀ ಭ್ರಾಂತಿ ಯೆಂದಾರು. 'ಬಾಳಿನಲ್ಲಿ ಸತ್ಯ ಅಸತ್ಯಗಳು ಕಲೆಬೆರಕೆಯಾಗಿವೆ. ಎರಡೂ

ಒಟ್ಟಿಗೆ ಇರುತ್ತವೆ. ಕವಿ ಕಲಾಕಾರರಲ್ಲೂ ಈ ಎರಡೂ ಬುದ್ಧಿಗಳಿವೆ. ಅವನ ನೋಟ ಸತ್ಯದಲ್ಲಿ ಸುಳಿದರೆ ಅದು ರಸವಾಗಿ ರಮಣೀಯವಾಗಿ ಕಾವ್ಯಕಲೆ ಆಗುತ್ತದೆ. ಅಂಥ ರಸನಿಮಿಷಗಳು ಬಾಳಿನಲ್ಲಿ ಅಪರೂಪವಾದರೆ ಕಲೆಯಲ್ಲೂ ಅಷ್ಟೆ.' ಚೆಲುವು ಬರೀ ನೆಳಲು, ಸತ್ಯವೇ ನಿಜವಾದ ವಸ್ತು. ಪದಾರ್ಥವಿಲ್ಲದೆ ನೆಳಲುಂಟೆ? 'ಸತ್ಯವಿಲ್ಲದೆ ಸೌಂದರ್ಯಕ್ಕೆ ಇರವೆಲ್ಲಿಯದು?'

ಇವೆರಡಕ್ಕೂ ಇರುವ ಈ ಗಂಟು ಸುಲಭವಾಗಿ ತಿಳಿಯುವುದಿಲ್ಲ. ದೊಡ್ಡ ದೊಡ್ಡ ವಿದ್ವಾಂಸರಿಗೆ ಇದು ಬಿಡಿಸಲು ಬಾರದ ಒಗಟಾಗಿದೆ. ತಂಪಾದ ಶರತ್ಕಾಲದ ಬೆಳುದಿಂಗಳು ಸೊಬಗಿನ ಮಳೆಯಲ್ಲವೆ? ಹೊತ್ತು ಮುಳುಗುವಾಗ ಅನುಭವವಾಗುವ ಸಂಧ್ಯಾರಾಗದ ಚೆಲುವು ಸತ್ಯವಲ್ಲವೆ? ಕಾಮನಬಿಲ್ಲು ಎಷ್ಟು ಚೆನ್ನಾಗಿರುತ್ತದೆ? ಫಲ–ಪುಷ್ಪಗಳಿಂದ ತುಂಬಿದ ಮರ ಮನಸ್ಸು ಸೆಳೆವುದಿಲ್ಲವೆ? ಇವುಗಳಲ್ಲಿ ಪವಿತ್ರ ಅಪವಿತ್ರ ಭಾವನೆಗಳಿಗೆ ಎಡೆಯೇ ಇಲ್ಲ. ಇವುಗಳ ಮಾತು ಹೇಗೆ?

'ಈ ನೋಟಗಳೆಲ್ಲ ಸೃಷ್ಟಿಕರ್ತನ ಅಗಾಧಲೀಲೆಯ ಗುರುತು. ಆ ಲೀಲೆಯ ನೆನವಾದರೆ ಇವು ಚೆಲುವು. ಸೃಷ್ಟಿಯ ಮಹಾಸತ್ಯದ ಹಣತೆಗಳಿಂತಲೇ ಇವು ಚೆಲುವಾಗಿವೆ; ಇಲ್ಲದಿದ್ದರೆ ಆ ಚೆಲುವೆಲ್ಲಿಂದ ಬರಬೇಕು? ಬೆಳುದಿಂಗಳ ಸೊಬಗನ್ನಾಗಲಿ ಮುಳುಗುವ ಸೂರ್ಯನ ಅಂದವನ್ನಾಗಲಿ ಆನಂದಿಸುವಾಗ, ಸೃಷ್ಟಿಕರ್ತನ ಧ್ಯಾನದಲ್ಲಿ ಮುಳುಗಿ ನನ್ನ ಮನಸ್ಸು ತುಂಬಿಹೋಗುತ್ತದೆ. ಸರ್ವಸೃಷ್ಟಿಯಲ್ಲೂ ಆತನ ಕೈವಾಡವನ್ನೂ ಆತನನ್ನೂ ಗುರುತಿಸಿಕೊಳ್ಳುತ್ತೇನೆ. ಅವನ ನೆನಪೇ ಕೊಡದೆ ಹೋದರೆ ಸೂರ್ಯೋದಯ, ಸೂರ್ಯಾಸ್ತಗಳಿಂದ ಆಗಬೇಕಾದುದೇನು? ಅವೂ ಒಂದು ಆತಂಕವೇ. ಆತ್ಮೋನ್ನತಿಗೆ ಅಡ್ಡವಾದುದೆಲ್ಲ ಬರೀ ಬಯಲು ಭ್ರಾಂತಿ; ಒಂದು ಜಾಲ. ನಮ್ಮ ಮೈಯಿದ್ದ ಹಾಗೆ; ಅನೇಕ ಸಲ ನಮ್ಮ ಮೈಯೆ ನಮ್ಮ ಮುಕ್ತಿಗೆ ಅಡ್ಡಿ.'

ಕಲೆಯ ದೇವಿ ಮೂರು ಮೊಗದಾಕೆ. ಸತ್ಯ, ಶಿವ, ಸುಂದರ ಮೂರು ಮುಖಗಳು. ನಡುವಿನ ಮುಖ ಸತ್ಯ.

ಕಲಾಸರಸ್ವತಿ ವೆಂಕಟಪ್ಪನವರನ್ನು ಕರ್ನಾಟಕದಲ್ಲಿ ಅರಿಯುದವರು ಯಾರು? ಅವರ ಅರ್ಧನಾರೀಶ್ವರ, ಸಿದ್ಧಾರ್ಥನ ತ್ಯಾಗದ ಚಿತ್ರಗಳು ಪ್ರಬುದ್ಧ ಕರ್ಣಾಟಕದ ಪ್ರಯತ್ನದಿಂದ ಕನ್ನಡ ಜನರಿಗೆ ಪರಿಚಯದು ವಾಗಿವೆ. ಕನಸಿನಲ್ಲಿ ಎಚ್ಚತ್ತಂತೆ ಅವರ ಬಗ್ಗೆ ಎಲ್ಲಿಯಾದರೂ ಮಾತು ಬರುವುದುಂಟು. ಅಷ್ಟು ಹುದುಗಿಕೊಂಡಿರುವ ಜೀವ ಅವರದು. ಅವರ ರೇಖಾವರ್ಣ-ವಿನ್ಯಾಸ ಅದ್ಭುತವಾದುದು. ಸಮುಕ, ಬೆಳಗು, ಮೂರೂ ಸಂಜೆ, ಕೊಳ ಮುಂತಾದ ಅವರ ಚಿತ್ರಗಳನ್ನು ನೋಡಿದವರು ತುಂಬಾ ಹೊಗಳಿದ್ದಾರೆ.

ವೆಂಕಟಪ್ಪನವರ ಕಲೆಯ ಬಗ್ಗೆ ಇಲ್ಲಿ ಬರೆಯುತ್ತಿಲ್ಲ. ಅದಕ್ಕೆ ಇದು ತಾವೂ ಅಲ್ಲ. ಗಾಂಧೀಜೀ ಮೈಸೂರಿಗೆ ಹೋದಾಗ ವೆಂಕಟಪ್ಪನವರೂ ಬಂದು ಮಹಾತ್ಮನನ್ನು ನೋಡಿದರು. ತಮ್ಮ ಕಲಾಕೃತಿಗಳನ್ನೆಲ್ಲ ತೋರಿಸಿದರು. ತಮ್ಮ ಶಿಲ್ಪಕೃತಿಗಳನ್ನೂ ತೋರಿಸಿದರು. ಆ ಕಲೆಯಲ್ಲಿ ಅವತರಿಸಿದ್ದ ಶಾಂತಿರಸವನ್ನು ಗಾಂಧೀಜೀ ತುಂಬಾ ಮೆಚ್ಚಿಕೊಂಡರು. 'ತುಂಬಾ ಸಂತೋಷವಾಯಿತು. ಇದೇ ರೀತಿ ಬೆಳೆದುಬರಲಿ ನಿಮ್ಮ ಕಲೆ. ಆದರೆ ಒಂದು ಮಾತು; ರಾಟೆ ನಿಮಗೆ ಹಿಡಿಸಿದರೆ ಅದಕ್ಕೆ ಜನಜೀವನದಲ್ಲಿ ಎಂಥ ಸ್ಥಾನವಿದೆಯೆಂಬುದನ್ನು ಚಿತ್ರಿಸಿದರೆ ತುಂಬಾ ಸಂತೋಷ. ನಿಮಗೆ ರಾಟೆ ಹಿಡಿಸಿದರೆ ಆ ಮಾತು' ಎಲ್ಲಿ ಹೋದರೂ ತನ್ನ ಶಂಖವನ್ನೇ ಊದುವ ದಾಸಯ್ಯನಂತೆ ಗಾಂಧೀಜೀ.

ಮನುಷ್ಯನ ಮುಖ್ಯವಾದ ಗುಣ ರಚನೆ–ಕಲೆ, ನಿಸರ್ಗದಲ್ಲಿ ಸಿಗುವ ಒರಟು ಗಡುಸು ಪದಾರ್ಥಗಳಿಂದ ಅವನಿಗೆ ತೃಪ್ತಿಯಿಲ್ಲ. ಅದಕ್ಕೆ ಅಂದ ಚೆಂದ, ಬಣ್ಣ ಬೆಡಗು ಸೇರಿಸಬೇಕು. ಕೈಯಲ್ಲಿ ಒಂದೇ ದುಡ್ಡು ಇದ್ದರೆ ರೊಟ್ಟಿ ತೆಗೆದುಕೊ; ಎರಡು ದುಡ್ಡಿದ್ದರೆ, ಒಂದಕ್ಕೆ ರೊಟ್ಟಿ ಇನ್ನೊಂದಕ್ಕೆ ಹೂವು ತೆಗೆದುಕೊ–ಎಂದು ಹೇಳಿದಾರೆ ಪೈಗಂಬರರು. ಅದರ ಅರ್ಥ ಇಷ್ಟೆ–ಮನುಷ್ಯ ಸ್ವಭಾವದಿಂದ ಕಲಾವಂತ. ಅಂತಲೇ ಉಡುವ ಬಟ್ಟೆ ಹೇಗೋ ಅಂತೂ ಮೈಮುಚ್ಚಿದರೆ ಸಾಲದು. ಅದು ಅಂದವಾಗಬೇಕು ಎಂದು ಕಷ್ಟಪಡುತ್ತಾನೆ. ತನಗೆ ಸಾಮಾನ್ಯವಾಗಿ ಬೇಕಾಗುವ ಎಲ್ಲ ಪದಾರ್ಥಗಳಿಗೂ ಅಂದವನ್ನು ಕೊಡಲು ತನ್ನ ರಕ್ತವನ್ನು ಹಳ್ಳ

ಹರಿಯಿಸಿದ್ದಾನೆ. ಹೀಗಿರುವಾಗ ನೈಸರ್ಗಿಕ ಜೀವನವೇ ನಿಜವಾದ ಕಲೆ ಯಾದೀತೇ?—ಹೀಗೆ ಒಬ್ಬರು ಗಾಂಧೀಜಿಯನ್ನು ಕೇಳಿದರು.

ಗಾಂಧೀಜೀ ಅಂದ ಬೇಡ ಎನ್ನುತ್ತಾರೆಯೆ? 'ಮನುಷ್ಯ ಕಲಾ ಮಂತರಚನಾಸಮರ್ಥ ಎಂಬುದರಲ್ಲಿ ಸಂದೇಹವೇನು! ನಿಸ್ಸಂದೇಹ ವಾಗಿಯೂ ಅವನಿಗೆ ಚೆಲುವು ಬೇಕು. ಆದ್ದರಿಂದಲೇ ಬಣ್ಣವೂ ಬೇಕು. ಅವನ ರಚನಾಶಕ್ತಿ ಕಲಾವಂತಿಕೆಗಳ ಔನ್ನತ್ಯವೇ ನಿಗ್ರಹವು ನಿಜವಾದ ಕಲೆ ಎಂಬುದನ್ನು ಅವನಿಗೆ ಕಲಿಸಿತು. ಬರಿಯ ಬಣ್ಣದ ಸಂತೆಯಲ್ಲಿ ಅಂದ ವಿಲ್ಲ, ಬರಿಯ ಇಂದ್ರಿಯ ಭೋಗದಲ್ಲಿ ತಿರುಳಿಲ್ಲ ಎಂಬ ಅರಿವನ್ನು ಆ ರಸಿಕತೆಯೇ ಕಲಿಸುತ್ತಿದೆ. ಅದರಲ್ಲಿ ಆ ವಿವೇಕವಿದೆ. ಆ ಕಲಾದೃಷ್ಟಿಯು ಉಪಯುಕ್ತತೆಯಲ್ಲಿ ಸುಖವನ್ನು ಅರಸುವಹಾಗೆ ಮಾಡುತ್ತದೆ. ಇದರ ಪರಿಣಾಮವಾಗಿ ಬಹಳ ದಿನದ ಕೆಳಗೆಯೆ—ಮಾನವ ವಿಕಾಸದ ಮೊದಲ ಹೆಜ್ಜೆಯಲ್ಲಿಯೆ—ನಾಲಿಗೆಯ ರುಚಿಗಾಗಿ ಅಲ್ಲ ತಿನ್ನಬೇಕಾದುದು, ಹೊಟ್ಟೆ ತುಂಬಿಸಲಿಕ್ಕೆ, ಜೀವ ಹಿಡಿಯಲಿಕ್ಕೆ ಎಂದು ಮನುಷ್ಯ ತಿಳಿದುಕೊಂಡ. ಬರಬರುತ್ತ ಅವನಿಗೆ ಅದಕ್ಕಿಂತ ಮೇಲಾದ ಅರಿವು ಒಂದು ಉಂಟಾಯಿತು. ಸುಮ್ಮನೆ ಬದುಕಿಕೊಂಡು ಹೋಗುವುದರಲ್ಲಿ ಸೊಗಸೂ ಇಲ್ಲ ಸುಖವೂ ಇಲ್ಲ; ತನ್ನ ಜೊತೆಯ ಜೀವ ಸಮುದಾಯಕ್ಕೆ ನೆರವಾಗಿ, ಅದರ ಮೂಲಕ ತನ್ನನ್ನು ಸೃಷ್ಟಿಸಿದ ದೇವರ ಸೇವೆ ಮಾಡುವುದೇ ಸರಿ.

ತನಗೆ ಅಗತ್ಯವಾದ ಪದಾರ್ಥಗಳಲ್ಲಿ ಅಂದವನ್ನು ತುಂಬುತ್ತಾನೆ ಮನುಷ್ಯ ಎಂಬುದು ನಿಜ. ಆದರೆ ಅಗತ್ಯವಲ್ಲದ ಪದಾರ್ಥದಲ್ಲಿ ಅಂದ ತುಂಬುವ ಕಲೆಯೋ? ಕಲೆಯ ತಳಹದಿ ಉಪಯುಕ್ತತೆ ಅಗತ್ಯಗಳಾಗಿರ ದಿದ್ದರೆ ಅಂಥ ಕಲೆಯ ವಿಷಯದಲ್ಲಿ ಜಾಗರೂಕರಾಗಿರಬೇಕು.

ನಿಸರ್ಗ ಎಂದಕೂಡಲೇ ಹಾವು ಚೇಳು ಅಥವಾ ಹುಲಿ ಸಿಂಹ ಗಳಂತೆ ನಾವು ಬದುಕಬೇಕು ಎಂದು ಅರ್ಥ ಮಾಡಬಾರದು. ಮಾನವನ ಉತ್ತಮ ಸ್ವಭಾವವನ್ನು, ಆಧ್ಯಾತ್ಮ ಜೀವನವನ್ನು ಗಮನಿಸಬೇಕು. ಅದಕ್ಕೆ ಸತತ ಪ್ರಯತ್ನ ಬೇಕು. ಆಗಲೇ ಅದು ತಿಳಿದೀತು' ಎಂದು ತಿಳಿಸಿ ಹೇಳಿದರು ಗಾಂಧೀಜೀ.

ಗಾಂಧೀಜಿಗೆ ಬಾಳಿನಲ್ಲಿ ತಪಸ್ಸೇ ಪ್ರಧಾನ. ತಪೋಜೀವನವೇ

ನಿಜವಾದ ಕಲೆ. ಹೆಸರಾದ ಕಲಾಕೋವಿದರೆನಿಸಿದ **ದಿಲೀಪಕುಮಾರ ರಾಯ**ರೊಡನೆ ಮಾತಾಡುತ್ತ ಒಮ್ಮೆ ಗಾಂಧೀಜೀ ಇದನ್ನೇ ಹೇಳಿದರು. 'ಬಾಳಿನಲ್ಲಿ ತಪಸ್ಸು ಎಲ್ಲಕ್ಕಿಂತ ಹೆಚ್ಚಿನ ಕಲೆಯೆಂದು ನನ್ನ ಅಭಿಪ್ರಾಯ.' ಈ ತಪಸ್ಸಿನ ಗೊಂದಲದಲ್ಲಿ ಸಂಗೀತಕ್ಕೆ ಗಾಂಧೀಜೀ ಬಹಿಷ್ಕಾರ ಹಾಕಿದಾರೆಯೋ ಏನೋ ಎಂದು ದಿಲೀಪಕುಮಾರನಿಗೆ ಗಾಬರಿ. ಆತನಿಗೆ ಸಂಗೀತವೇ ಪ್ರಾಣ. ಆತನ ಅಳುಕನ್ನು ತೀರಿಸಿ ಹೇಳಿದರು ಗಾಂಧೀಜಿ: 'ಅಲ್ಲ ಸಂಗೀತಕ್ಕೆ ನಾನು ವಿರೋಧಿಯಾಗಬಲ್ಲೆನೆ? ಸಂಗೀತವಿಲ್ಲದೆ ಭಾರತದ ಧಾರ್ಮಿಕಜೀವನ ವಿಕಾಸಗೊಂಡೀತೆಂಬ ಕಲ್ಪನೆ ಕೂಡ ಮಾಡಲಾರೆನಲ್ಲ ನಾನು! ಸಂಗೀತ ಇದ್ದಂತೆ ಎಲ್ಲ ಕಲೆಗಳು ನನಗೆ ಇಷ್ಟವೇ; ಆದರೆ ಕಲೆಯ ಹೆಸರಿನಲ್ಲಿ ಈಗ ಪ್ರಪಂಚದ ಮುಂದೆ ಬರುವ ಅನೇಕ ಪದಾರ್ಥ ನನಗೆ ಸರಿಬರುವುದಿಲ್ಲ. ಅವನ್ನು ನಾನು ಅಗತ್ಯವಾಗಿ ವಿರೋಧಿಸುತ್ತೇನೆ. ಕಲೆಗೆ ಹೃದಯವಿರಬೇಕು.'

ದಿಲೀಪಕುಮಾರನೆಂದ:–'ಕಲೆ ಜೀವನಕ್ಕಿಂತ ಹೆಚ್ಚಾದುದೆಂದು ನಾನೂ ಒಪ್ಪುವುದಿಲ್ಲ.'

ಗಾಂಧೀಜೀ ಮುಂದುವರಿಸಿದರು: 'ಜೀವನವು ಸಮಸ್ತ ಕಲೆಗಳಿಗಿಂತ ಶ್ರೇಷ್ಠವಾದುದು. ಯಾರು ಉತ್ತಮರೀತಿಯಲ್ಲಿ ಬಾಳಬಲ್ಲನೋ ಅವನೇ ಉತ್ತಮ ಕಲಾಕಾರ. ಉತ್ತಮ ಜೀವನದ ತಳಹದಿಯಿಲ್ಲದ ಕಲಾಕೃತಿ ಆದೀತು ಹೇಗೆ? ಬಾಳನ್ನು ಹಸನು ಮಾಡುವುದು ಮೇಲು ಮಟ್ಟಕ್ಕೆ ಏರಿಸುವುದೇ ಕಲೆಯ ಬೆಲೆ. ಜೀವನವೇ ಶ್ರೇಷ್ಠ ಕಲೆ. ಕಲೆ ವಿಶ್ವವನ್ನು ಜೀವನವನ್ನು ಅರಿತುಕೊಳ್ಳಬೇಕು.' ಅದರಲ್ಲಿ ರಸವನ್ನು ಹೀರಬೇಕು.

'ಋಷಿಯಾಗದವ ಕವಿಯಾಗಲಾರ' ಎಂದು ಹಿರಿಯರು ಹೇಳಿದ್ದಾರೆ. ಇಂದು ಗಾಂಧೀಜೀ ಅದನ್ನೇ ಮತ್ತೆ ಹೇಳುತ್ತಿದ್ದಾರೆ. ಕವಿಯಾಗುವವನು ಮೊದಲು ಋಷಿಯಾಗಬೇಕು. ಆಗ ನುಡಿಯಲ್ಲಿ ನುಡಿದೇವಿ ಮೂಡಿ ಬಂದಾಳು, ಆಡಿದುದೇ ಕಲೆ ಕಾವ್ಯವಾದೀತು. ಜೀವನವೇ ಒಂದು ರಸಕಾವ್ಯವಾದೀತು.

ಗಾಂಧೀಜೀ ಸ್ವತಃ ಅದಕ್ಕೊಂದು ಉದಾಹರಣೆ.

---

## ಸಾಹಿತಿ ಗಾಂಧಿ

ಸೌಂದರ್ಯೋಪಾಸನೆಗೆ ಅನೇಕ ದಾರಿಗಳಿವೆ. ರಸಿಕ ಜೀವವು ತನ್ನ ಒಳಗಿನ ಅನುಭವವನ್ನು ತುಳುಕಿಸುವ ಸಾಧನೆಗಳು ಅನಂತವಾಗಿವೆ. ತಾಳಕುಟ್ಟಿ ಗಂಟಲು ಹರಿದು ಹೋಗುವಹಾಗೆ ಚೀರಿಕೊಳ್ಳುತ್ತ ಭಜನೆ ಮಾಡುವವರು ಒಂದು ಗುಂಪು. ಮಾತೇ ಬರದ ಮೂಕರಹಾಗೆ ಸದ್ದು ಆದರೆ ಸಿಡಿಲೇ ಬಿಂತೆಂದು ಹೆದರಿ ತಮ್ಮ ಉಸಿರೇ ತಮಗೆ ಕೇಳಿಸದಹಾಗೆ ನಿಶ್ಶಬ್ದವಾಗಿ ನಮಾಜು ಮಾಡುವವರು ಮತ್ತೊಂದು ಗುಂಪು. ಎರಡರಲ್ಲೂ ಒಂದೇ ಬಗೆಯ ತಲ್ಲೀನತೆಯ ಸಾಧನೆ. ಅದೇ ಸರಿ, ಇದೇ ಸರಿ ಎಂದು ಹಟ ಹಿಡಿದರೆ ಆ ಸಾಧನೆಯು ನೋಟ ಮುಸಕಾಗುತ್ತದೆ. ಆ ಹಟ ಸೌಂದರ್ಯೋಪಾಸನೆಯೆಂದರೆ ಸತ್ಯಾನ್ವೇಷಣೆ ಎಂಬ ಮಾತನ್ನು ಮರೆಯಿಸುತ್ತದೆ. ಅದರ ಮೇಲೆ ಒಂದು ತೆರೆಯನ್ನು ಹಾಕುತ್ತದೆ.

ಸತ್ಯಾನ್ವೇಷಣದ ದಾರಿಯಲ್ಲಿ ಹತ್ತಾರು ಕವಲು ಒಡೆದು ಬೇರೆ ಬೇರೆ ಮತ ಪಂಥಗಳಾಗಿವೆ. ಸೌಂದರ್ಯೋಪಾಸನೆಯ ರೀತಿ ಬೇರೆ ಬೇರೆಯಾಗಿ ಹತ್ತೆಂಟು ಕಲೆಗಳಾಗಿವೆ. ಜಕಣಾಚಾರಿ ಡಂಕಣಾಚಾರಿಯರು ಕಲ್ಲಿನಲ್ಲಿ ಆ ಅನಂತ ಸೌಂದರ್ಯವನ್ನು ಹರಿಸಿದರು. ತ್ಯಾಗರಾಜ ತಾನಸೇನರಿಗೆ ನಾದದಲ್ಲಿ ಆ ದಾರಿ ಸಿಕ್ಕಿತು. ಕಾಳಿದಾಸ ಭವಭೂತಿಗಳು ಶಬ್ದಾರ್ಥದ ಕೃತಿಯಾದ ಸಾಹಿತ್ಯದಲ್ಲಿ ಆ ಚೆಲುವನ್ನು ಅರಸಿದರು. ಶರಣರ

ಸತ್ಯಾನ್ವೇಷಣೆ ವಚನಗಳ ಸೊಬಗಿನ ರೂಪದಲ್ಲಿ ಮೂಡಿತು. ರಾಣಿ ಮೀರಾಬಾಯಿಯ ಸೌಂದರ್ಯೋಪಾಸನೆ ಭಕ್ತಿಯ ಸಾಕ್ಷಾತ್ಕಾರದ ಅನುಭವವನ್ನು ಕೊಟ್ಟಿತು. ಉದಯಶಂಕರನ ನಾಟ್ಯ, ರವೀಂದ್ರನ ಕಾವ್ಯ, ವೆಂಕಟಪ್ಪನ ಚಿತ್ರ, ವೀಣೆ ಶೇಷಣ್ಣನವರ ವೀಣಾವಾದನ ಎಲ್ಲಾ ಆ ರಸ ಸಮುದ್ರದ ಅಲೆಗಳು. ಎಲ್ಲವೂ ಕಲೆಯೇ, ಎಲ್ಲವೂ ಆ ನಿತ್ಯ ರಾಮಣೀಯ ಕತೆಯನ್ನು ಅನುಭವಿಸುವ ಯೋಗವೇ. ಆದುದರಿಂದಲೇ ಗಾಂಧೀಜೀ ಹೇಳಿದುದು: ಉತ್ತಮ ಜೀವನವೇ ಶ್ರೇಷ್ಠವಾದ ಕಲೆ.

ರವೀಂದ್ರನಾಥ ಠಾಕೂರರು ಕೆಲವು ವರ್ಷಗಳ ಕೆಳಗೆ ಕವಿತೆಯ ಕೊಳಲನ್ನು ಬದಿಗಿಟ್ಟು ಕುಂಚ ಹಿಡಿದು ಜಗತ್ತನ್ನು ನಡುಗಿಸಿಬಿಟ್ಟರು. ಚಿತ್ತರಂಜನದಾಸರು 'ಆತ್ಮಗೀತೆ'ಯನ್ನು ಹಾಡಿ ಕಾವ್ಯಲೋಕದಲ್ಲಿ ವಿಹರಿಸಿದರು. ಆದರೆ ಜಗತ್ತು ಅವರನ್ನು ಚಿತ್ರಕಾರರೆಂದಾಗಲಿ ಇವರನ್ನು ಕವಿಯೆಂದಾಗಲಿ ತಿಳಿಯುವುದಿಲ್ಲ. ಯಾರಾದರೊಬ್ಬರು ರೇಖಿನ ಕೆಲಸ ದಲ್ಲಿದ್ದವರು ವಿಶ್ರಾಂತಿಪಡೆದು ಸುಖವಸತಿ ಮಾಡಿಕೊಂಡಿದ್ದಾಗಲೂ ಅವರು ಮಾಸ್ತರರೇ. ಊರು ಮುಂದಿನ ತೋಟ ದೇಸಾಯರ ಕೈಬಿಟ್ಟು ಮೂರು ತಲೆಮಾರು ಆಗಿದ್ದರೂ ಅದು ದೇಸಾಯರ ತೋಟವೇ. ಹುಚ್ಚು ಚಿಕಿತ್ಸೆಗೆ ಹೋಗುವುದಿಲ್ಲ ಜನ. ಒಂದು ಹೆದ್ದಾರಿ ಹಿಡಿದು ಸಾಗುತ್ತಾರೆ.

ಗಾಂಧೀಜೀ ಉತ್ತಮ ಸಾಹಿತಿ ಎಂದರೆ ಜನರಿಗೆ ರವೀಂದ್ರರು ಚಿತ್ರಕಾರರು, ದಾಸರು ಕವಿ ಎಂದಷ್ಟೇ ಬೆರಗು ಆಗುತ್ತದೆ. ಅವರ ರಾಜ ಕಾರಣ ತ್ರಿವಿಕ್ರಮನ ಪಾದದಂತೆ ಬೆಳೆದು ಇಡೀ ಜೀವನವನ್ನೇ ಕವಿದಿದೆ. ಆ ಬಣ್ಣದ ತೆರೆಯ ಹಿಂದೆ ಗಾಂಧೀಜಿಯ ವ್ಯಕ್ತಿತ್ವದ ಉಳಿದ ಗೆರೆಗಳು ಮುಚ್ಚಿ ಹೋಗಿವೆ. ಜನರ ಕಣ್ಣಿಗೆ ಸಾಧಾರಣವಾಗಿ ಅವರ ರಾಜಕಾರಣ ವಿನಾ ಉಳಿದುದು ಏನೂ ಕಾಣದು. ದೇಸಾಯರ ತೋಟದ ಕತೆ ಯಿದ್ದಂತೆಯೆ ಇದು.

ಗಾಂಧೀಜೀ ಸತ್ಯಾನ್ವೇಷಿಗಳು. ಸತ್ಯಶಕ್ತಿಯನ್ನು ಬೆಳೆಸಿ ತಮ್ಮ ಬಾಳಿನ ಎಲ್ಲ ಕ್ಷೇತ್ರಗಳಲ್ಲೂ ಅದನ್ನು ಹರಿಯಿಸುತ್ತಾರೆ. ಆ ಶಕ್ತಿಗೆ, ಆ ಸತ್ಯಕ್ಕೆ ಒಂದು ಬಗೆಯ ಚೆಲುವು ಇದೆ. ಆ ಚೆಲುವು ಗಾಂಧೀಜಿಯ

ಕರ್ಮಮಾರ್ಗದಲ್ಲಿ ಸಾಹಿತ್ಯವಾಗಿ ರೂಪುಗೊಂಡಿದೆ. ಆದರೆ ಆ ಸಾಹಿತ್ಯವು ಮನೋರಂಜನೆಗಾಗಿ ಗೀಚಿಹಾಕಿದ ಕಲಾಕೃತಿಯಲ್ಲ. ಕಲ್ಪನೆಯ ರೆಕ್ಕೆ ಗುದುರೆಯನ್ನೇರಿ ಹೋಗಿ ನವರತ್ನಗಳಿಂದ ಕೆತ್ತಿದ ಅರಮನೆಯಲ್ಲಿ ದೇವ ಲೋಕದ ಅಪ್ಸರೆಯರನ್ನು ಕಾಣುವ ಕವಿಕರ್ಮವೂ ಅದರಲ್ಲಿಲ್ಲ. 'ಅಯ್ಯಾ ಎಂದೊಡೆ ಸ್ವರ್ಗ; ಎಲವೋ ಎಂದೊಡೆ ನರಕ' ಎಂದು ಬಸವೇಶ್ವರನು ಅಂದಾಗ ಸೊಗಸಾದ ನುಡಿಯನ್ನು ಆಡಬೇಕೆಂಬ ಪ್ರಯತ್ನವಿಲ್ಲ. ಆ ಭಾವ ಸತ್ಯವಾದುದು. ಅದನ್ನು ಆಡಿದಾಗ ಅದು ಅಂದವಾಗಿಯೆ ಹೊರಗೆ ಹರಿಯಿತು. My wife moves me as no other woman in the world can. Not that She has no faults. Even so I feel for and about Hinduism with all its faults and limitations. (ನನ್ನ ಹೆಂಡತಿಯ ಹಾಗೆ ನನ್ನನ್ನು ಮಿಡಿಯಬಲ್ಲ ಹೆಣ್ಣು ಈ ಜಗತ್ತಿನಲ್ಲಿ ಯಾರೂ ಇಲ್ಲ. ಆಕೆಯಲ್ಲಿ ದೋಷಗಳಿಲ್ಲವೆಂದಲ್ಲ. ಹಿಂದುಧರ್ಮದ ಬಗ್ಗೆ ನನಗೆ ಅದೇ ತರದ ಭಾವನೆ ಇದೆ; ಅದರಲ್ಲಿ ತಪ್ಪಿರಲಿ ಕುಂದಿರಲಿ.) ಎಂದಾಗ ಗಾಂಧೀಜಿಯ ಮನಸ್ಸಿನಲ್ಲಿ ಸೊಗಸಾದ ಹೋಲಿಕೆಯೊಂದನ್ನು ಕೊಟ್ಟು ಹಿಂದುಧರ್ಮದಲ್ಲಿ ತಮಗೆ ಇರುವ ಶ್ರದ್ಧೆಯನ್ನು ತೋರಿಸಬೇಕೆಂದಿರ ಲಿಲ್ಲ. ಅನುಭವದಲ್ಲಿ ಒಂದು ಭಾವ ಸಹಜವಾಗಿ ಮೂಡಿತ್ತು. ಅದೇ ಹೀಗೆ ಪ್ರಕಟವಾಯಿತು. The Cow is a poem on pity (ಆಕಳು ಕರುಣೆಯ ಕಾವ್ಯ) ಎಂದು ಒಮ್ಮೆ ಗಾಂಧೀಜೀ ಹೇಳಿದರು. ಆಗಲೂ ಅಷ್ಟೆ; ಮೂಕಜಂತುಗಳೂ ತಾನೂ ಒಂದೇ ನಾಟಕದ ಎರಡು ವೇಷ ಎಂಬ ಅನುಭವದ ವಚನ.

ಸಾಹಿತ್ಯಕ್ಕಾಗಲಿ, ಚಿತ್ರಕ್ಕಾಗಲಿ, ನಾಟ್ಯಕ್ಕಾಗಲಿ, ಗಾನಕ್ಕಾಗಲಿ ಎಲ್ಲಕ್ಕೂ ಆಧಾರ ಸಹಜವಾದ ಭಾವ. ಅದು ಅನುಭವದಿಂದ ಬರ ತಕ್ಕದ್ದು. ಆ ಭಾವ ಎಷ್ಟೆಷ್ಟರ ಮಟ್ಟಿಗೆ ಸ್ವಾನುಭವದಿಂದ ಬಂದುದೋ ಅಷ್ಟಷ್ಟು ಮಟ್ಟಿಗೆ ಅದರ ಹರಿತ ಹೆಚ್ಚಾಗುತ್ತದೆ. ಸಾಧಾರಣವಾಗಿ ನಾವು ಇತರರ ಅಭಿಪ್ರಾಯಗಳನ್ನೇ ಅನುಸರಿಸುತ್ತೇವೆ. ನಾವೇ ಪರಿ ಶೋಧಿಸಿ ತಿಳಿದುಕೊಂಡವು ಕಡಮೆ. ಆದರೆ ಭಾವ ಸಹಜವಾದಂತೆ

ಅದರಲ್ಲಿ ಸತ್ಯ ಮೂಡಿದಂತೆ ಭಾಷೆಗೊಂದು ಬಿಗಿ ಬಲ ಬರುತ್ತದೆ. ಅಂದ ಕವಿತೆಗೂ ಬಂದ ಕವಿತೆಗೂ ಇರುವ ಭೇದ ಇದೇ. ಒಂದು ಬಣ್ಣ ತೊಡೆದು ತುಟಿಗೆಂಪು ಸವರಿಕೊಂಡ ಕೃತ್ರಿಮ ಲಾವಣ್ಯದ ಸಿನಿಮಾ ನಟಿಯಂತೆ. ಇನ್ನೊಂದು ಸಹಜ ಸೌಂದರ್ಯದ ಮುಗ್ಧ ಬಾಲೆಯಂತೆ. ಗಾಂಧೀಜಿಯ ಸಾಹಿತ್ಯ ಅಕೃತ್ರಿಮವಾದುದು. ಅಂತಲೇ ಅದರಲ್ಲಿ ಒಂದು ಬಿಗಿಯಿದೆ. ಒಂದು ಶಕ್ತಿಯಿದೆ.

ಗಾಂಧೀಜೀ ಗುಜರಾತಿ, ಹಿಂದೀ ಇಂಗ್ಲೀಷು ಭಾಷೆಗಳಲ್ಲಿ ಬರೆದಿದಾರೆ. ಈ ಮೂರೂ ಭಾಷೆಗಳಲ್ಲಿ ಮಾತು ಆಡಿದಾರೆ. ಈ ಎರಡೂ ರೀತಿಯಲ್ಲಿ ಈ ಮೂರೂ ಭಾಷೆಯ ಸಾಹಿತ್ಯವನ್ನು ಬೆಳೆಸಿದಾರೆ. ಇಂಗ್ಲೀಷು ನಮ್ಮ ನುಡಿಯಲ್ಲ. ನಾವು ಅವರ ಭಾಷೆಗೆ ಕೊಡಬಹುದಾದ ಮುಡಿಪು. ಸಲ್ಲಿಸಬಹುದಾದ ಸೇವೆ ಬಹಳ ಕಡಮೆ. ಆದರೆ ಗಾಂಧೀಜೀ ಇಂಗ್ಲೀಷಿಗೆ ತೊಡಿಸಿದ ಒಡವೆ ಸಾಧಾರಣವಾದುದಲ್ಲ. ಮೊದಲು 'ಯಂಗ್ ಇಂಡಿಯಾ' ಈಗ 'ಹರಿಜನ'—ಇವೆರಡು ಪತ್ರಿಕೆಗಳ ಮೂಲಕ ವಾರವಾರವೂ ತಮ್ಮ ಅಭಿಪ್ರಾಯಗಳನ್ನು ಗಾಂಧೀಜೀ ಇಂಗ್ಲಿಷಿನಲ್ಲಿ ಪ್ರಕಟಿಸಿದಾರೆ. ಇಪ್ಪತ್ತು ವರುಷಗಳಿಂದ ಅಖಂಡವಾಗಿ ಈ ಕೆಲಸ ನಡೆದಿದೆ. ಅದರಿಂದ ವಿಪುಲವಾದ ಸಾಹಿತ್ಯ ಬೆಳೆದುಹೋಗಿದೆ. ಆ ಸಾಹಿತ್ಯಕ್ಕೆ ಇಂಗ್ಲೀಷು ನುಡಿಯಲ್ಲಿ ಕೊನೆತನಕ ಬಾಳುವ ಸ್ಥಾನವಿದೆ.

ಇಂಗ್ಲೀಷು ಬಲ್ಲ ನಮ್ಮ ನಾಡಿನ ಜನ ಗಾಂಧೀಜಿಯ ಈ ಸಾಪ್ತಾಹಿಕ ಸಾಹಿತ್ಯವನ್ನು ಶ್ರದ್ಧೆಯಿಂದ ಓದುವುದು ಸಹಜ. ಇವರಿಗೆ ಆ ಬರೆಹದಲ್ಲಿ ಒಂದು ಬೆಳಕಿದೆ, ಒಂದು ದಾರಿ ತೆರೆಯುತ್ತದೆ. ಅನೇಕ ಜನ ಇಂಗ್ಲೀಷರು ಅಷ್ಟೇ ಶ್ರದ್ಧೆಯಿಂದ–ಇನ್ನೂ ಹೆಚ್ಚು ಶ್ರದ್ಧೆಯಿಂದ ಓದುತ್ತಾರೆ. ಅವರಲ್ಲೂ ಇತರ ಪಡುವಲ ಜನರಲ್ಲೂ ಗಾಂಧೀಜಿಯ ಬರೆವಣಿಗೆಗೆ ಒಳ್ಳೆಯ ಗೌರವವಿದೆ. ಆ ಭಾಷೆಯ ಮೇಲೆ ಗಾಂಧೀಜಿಗೆ ಇರುವ ಹಿಡಿತ ಬಲವಾದುದು. ಇಂಗ್ಲೀಷು ಭಾಷೆಯ ನುಡಿಗಟ್ಟು ಸುಲಭವಾಗಿ ದೊರಗಿಸಿಕೊಳ್ಳಬಹುದಾದುದಲ್ಲ. ಅದರ ನುಡಿಕಾರ ವಿಲಕ್ಷಣವಾದುದು. ಗಾಂಧೀಜಿಗೆ ಅದರ ಸೂಕ್ಷ್ಮಗಳೆಲ್ಲ ಕೈವಶವಾಗಿವೆ ಎಂದು ಇಂಗ್ಲೀಷು

ಸಾಹಿತಿಗಳು ಒಪ್ಪಿಕೊಂಡಿದ್ದಾರೆ. ಎಷ್ಟೋ ಜನ ಇಂಗ್ಲೀಷು ಓದುಗರು ಹರಿಜನ ಪತ್ರಿಕೆಗಾಗಿ ಕಾದಿರುತ್ತಾರೆ. ಅವರಿಗೆ ಆ ದೇಶದ ಸಂಸ್ಕೃತಿಯಲ್ಲಿ ಸಾಕಷ್ಟು ಶಾಂತಿ ಸಿಗುವುದಿಲ್ಲ. 'ಹರಿಜನ ಪತ್ರಿಕೆ ಬಂದರೆ ನೀರಿಲ್ಲದೆ ಸೆಕೆಯಿಂದ ಬಾಯಾರುವ ಸೀಮೆಯಲ್ಲಿ ತಿಳಿಯಾದ ನೀರು ಕುಡಿಯಲು ಸಿಕ್ಕಂತೆ ಅನಿಸುತ್ತದೆ.' ಎಂದು ಒಬ್ಬ ಇಂಗ್ಲೀಷು ಹೆಂಗಸು ಬರೆದಿದ್ದಾಳೆ. ಸತ್ಯಾನ್ವೇಷಿಗಳಿಗೆ ಪಡುವಲನಾಡು ಬರಬರುತ್ತ ಮರಳುಗಾಡಾಗುತ್ತಿದೆ. ಹಿಂಸೆ, ದ್ವೇಷ, ಲೂಟಿ, ಸುಲಿಗೆಗಳು ತತ್ತ್ವಗಳ ವೇಷ ಹಾಕಿಕೊಂಡು ಜನರನ್ನು ಮೋಸದಿಂದ ಅಡ್ಡದಾರಿಗೆ ಎಳೆಯುತ್ತಿವೆ. ಒಂದು ಕಡೆ ಕತ್ತಿಯ ಝಳಪು, ಇನ್ನೊಂದು ಕಡೆ ಯಂತ್ರದ ಗಾಲಿಯ ಕುಯಿಲು, ಎರಡರ ನಡುವೆ ಜನ ದಿಕ್ಕುಗಾಣದೆ ಹೋಗಿದ್ದಾರೆ. ಈ ಮರಳುಗಾಡಿನಲ್ಲಿ ಅಲೆಯುವ ಅನೇಕ ಜೀವಿಗಳಿಗೆ ಗಾಂಧೀ ಸಾಹಿತ್ಯವು ಒಂದು ತಿಳಿನೀರಿನ ಚಿಲುಮೆ. 'ಹರಿಜನ ಪತ್ರಿಕೆಯಲ್ಲಿ ಗಾಂಧೀಜಿಯ ಬರೆಹವನ್ನು ಓದಿದರೆ ಈ ಜಗತ್ತಿನ ಅರ್ಥವಿಲ್ಲದ ಗಲಭೆ ಗೊಂದಲಗಳ ಸದ್ದಿನಿಂದ ಮುಕ್ತರಾಗಿ ನಿರ್ಮಲವಾದ ಶುದ್ಧವಾದ ಗಾಳಿಯಲ್ಲಿ ಮೇಲೇರಿದಂತೆ ಆಗುತ್ತದೆ. ಏಕೆ ಗೊತ್ತೆ? ವಾದ ವಿವಾದದ ಜಗಳದ ಕೆಸರು ಹೊಡೆದಾಟದ ಧೂಳು ಅಲ್ಲಿ ನಮ್ಮ ದೃಷ್ಟಿಗೆ ಅಡ್ಡ ಬಾರವು, ಎಲ್ಲವೂ ತಿಳಿಯಾಗಿ ಕಾಣುತ್ತದೆ. ಅಲ್ಲಿ ಶುದ್ಧವಾದ ಗಾಳಿ ಸಿಗುವುದು ಏಕೆ ಗೊತ್ತೆ? ಪೂರ್ಣವಾದ ಸತ್ಯಸಂಧತೆಯಿಂದ ಪ್ರೇರಿಸಲ್ಪಟ್ಟ ಮಾತು ಅವು.' ಆ ಸತ್ಯಪ್ರಿಯತೆ ಆ ಪ್ರಾಮಾಣಿಕತನದಲ್ಲಿ ಸ್ವರ್ಗದ ಸೌರಭವಿದೆ. 'ಅದು ದೇವಲೋಕದ ಸವಿಯುಸಿರು.'

ಹೀಗೆ ಹೇಳಿದಾಗ ಡಾಕ್ಟರ್ ಮಾಡ್ ರಾಯ್‌ಡನ್ ಗಾಂಧೀಜಿಯ ಸಾಹಿತ್ಯದ ಬಗ್ಗೆ ಹೇಳಬಹುದಾದುದು ಎಲ್ಲವನ್ನೂ ಸಂಗ್ರಹವಾಗಿ ನಾಲ್ಕೇ ವಾಕ್ಯಗಳಲ್ಲಿ ಹೇಳಿದಳು. ಭೋಗದ ಬಯಕೆಯಲ್ಲಿ ವಿಷಯದ ಸೆಳೆತದಲ್ಲಿ ಮುಳುಗಿ ಮಾನವ ಜಾತಿಯ ಸಾಹಿತ್ಯ ಕೆಲವು ಕಾಲದಿಂದ ಹೊಲಸಾಗಿದೆ. ಸತ್ಯವನ್ನು ತಿಳಿಯಲೂ ಜನರಿಗೆ ತಿಳಿಸಲೂ ಸಾಹಿತ್ಯದ ಹಾಗೆ ಬಲವಾದ ಸಾಧನೆ ಮತ್ತೊಂದಿಲ್ಲ. ಸತ್ಯೈಕಮಾರ್ಗದಿಂದ ಆ ಪ್ರಚಾರ

ನಡೆಯುತ್ತಿದೆ. ನಿಜ; ಆದರೆ ಅಂಥ ಕೃತ್ಯ ಪದೇ ಪದೇ ನಡೆಯುವುದು ಸಾಧ್ಯವಲ್ಲವೆಂದೋ ಏನೋ ಜನ ಅದನ್ನು ಸಾಹಿತ್ಯದಲ್ಲಿ ಹೆಣೆದು ಕೊಂಡು ಶಾಶ್ವತವಾಗಿ ತಮ್ಮ ಕಣ್ಣೆದುರಿಗೆ ಇರುವಂತೆ ಮಾಡಿಕೊಳ್ಳು ತ್ತಾರೆ. ಇಂದ್ರಿಯಗಳ ಇಂದ್ರಜಾಲದಲ್ಲಿ ಸಿಕ್ಕಿಕೊಂಡು ಸಾಹಿತ್ಯಭ್ರಾಂತಿ ಯನ್ನೇ ನಿಜವೆಂದು ನಂಬಿಕೊಂಡಿದೆ. ಎತ್ತ ತಿರುಗಿದರೂ ಆ ನಾತವೇ ಮೂಗಿಗೆ ಬಡಿಯುತ್ತಿರುವಾಗ ಗಾಂಧೀಜೀ ಸಾಹಿತ್ಯದಲ್ಲಿ ಸತ್ಯವನ್ನು ನುಸುಳಿಸಿದರು. ಆ ಮಾಯಾ ಸಂಸ್ಕೃತಿಯನ್ನು ಕತ್ತರಿಸಿ ಸಾಹಿತ್ಯದಲ್ಲಿ ಸತ್ಯಸಂಸ್ಥಾಪನೆ ಮಾಡಿದಾರೆ ಗಾಂಧೀಜೀ.

ಸತ್ಯಕ್ಕಿಂತ ಮೇಲಾದ ಧರ್ಮವಿಲ್ಲ, ಧರ್ಮಕ್ಕಿಂತ ಮೇಲಾದ ಬಾಳು ಇಲ್ಲ ಎನ್ನುವ ಕಾಲ ಕಳೆದು ದುಡ್ಡಿದ್ದವನೇ ದೊಡ್ಡಪ್ಪ, ದೊಣ್ಣೆಯೇ ಧೊರೆ ಎಂಬ ಕಾಲ ಬಂದಿದೆ. ದುಡ್ಡು ಗಳಿಸುವುದೇ ಧರ್ಮ ವೆಂದು ಉಪದೇಶ ಮಾಡಿ ಅರ್ಥಶಾಸ್ತ್ರ ಪಂಡಿತರು ಮನುಷ್ಯನ ದುರಾ ಶೆಯ ಹೊಳೆಗೆ ಕಟ್ಟಿದ್ದ ನಿಗ್ರಹದ ಅಣೆಕಟ್ಟನ್ನು ಒಡೆದುಬಿಟ್ಟರು. ಹಿಂದಿನ ಕವಿಗಳು ಕನಸಿನಲ್ಲಿ ಕಂಡಿದ್ದ ಗಂಧರ್ವಲೋಕವನ್ನು ಮನುಷ್ಯ ಭೂಮಿಯ ಮೇಲೆ ಕಟ್ಟತೊಡಗಿದ. ಅಲ್ಲಲ್ಲಿ ಬಂಗಾರದ ಬೆಟ್ಟ ಬೆಳೆದವು; ಕೈಗೆ ಸಿಕ್ಕಷ್ಟು ಬಾಚಿಗೊಳ್ಳೋಣವೆಂಬ ತತ್ವ ಹುಟ್ಟಿ ಬಲಿಷ್ಟರಾದವರು ಅದಕ್ಕೆ ತಕ್ಕ ನಿಯಮಗಳನ್ನು ರಚಿಸಿಕೊಂಡರು. ಈ ವಸ್ತುಸಂಗ್ರಹ ಬುದ್ಧಿ ಯನ್ನು ಅಲ್ಲಲ್ಲಿ ಕೆಲವರು ತಪ್ಪು ಎಂದರು. ಪ್ರಪಂಚದಲ್ಲಿ ಅನ್ಯಾಯ ತುಂಬಿ ದ್ವೇಷದ ಗಾಳಿ ಹರಡಿತು.

ಭೂಮಿಯು ಉಸಿರಿದ್ದ ಒಡಲು, ಆ ಜೀವ ಮಿದುವಾದ ಹೆಣ್ಣು ಜೀವ ಎಂಬ ನವಿಯಾದ ತಿಳಿವು ಜನರಲ್ಲಿ ಹರಡಿ ಹಿಂದಿನ ಕಾಲದಲ್ಲಿ ಜೀವಾದ್ವೈತಕ್ಕೆ ಅವಕಾಶ ಕೊಟ್ಟಿತ್ತು. ನಾವೆಲ್ಲ ಭೂಮಿತಾಯಿಯ ಸಂತಾನ; ಬದುಕಿದ್ದಷ್ಟು ದಿನ ಒಬ್ಬರಿಗೊಬ್ಬರು ಹಿತವಾಗಿ ಬಾಳೋಣ ಎಂಬ ಬುದ್ಧಿ ಇತ್ತು. ಸ್ವರ್ಗವನ್ನೇ ಇಲ್ಲಿ ಕಟ್ಟಬಯಸಿ, ಕೊಂಬಮುಟ್ಟಿಗೆ ಕಟ್ಟಿಯೂ ಕಟ್ಟಿದ ಈಗಿನ ಜನ ಭೂಲೋಕದ ಸಮರಸದ ಆನಂದವನ್ನೇ ಮಾತ್ರ ಪಾತಾಳಕ್ಕೆ ಒಗೆದರು. ಇಲ್ಲಿಗೆ ಇಳಿದ ಸ್ವರ್ಗದ ಭಾರಕ್ಕೇ ಅದು

ಕುಸಿದುಹೋಯಿತೋ ಏನೋ. ಯಾವುದೋ ಒಂದು ದೇಶದಲ್ಲಿ ಆಶೆ ಬುರುಕನಾದ ದೊರೆ ಒಬ್ಬನಿದ್ದನಂತೆ. ಅವನಿಗೆ ಐಶ್ವರ್ಯದ ಮೇಲೆ ಬಹಳ ಆಸೆ. ಮುಟ್ಟಿದ್ದೆಲ್ಲ ಬಂಗಾರವಾಗಿಬಿಟ್ಟರೆ ತನಗೆ ಬೇಕಾದಷ್ಟು ಸಂಪತ್ತು ಆದೀತು ಎಂದು ಅವನ ಯೋಚನೆ. ಹೇಗೋ ಹಾಗೆ ತಪಸ್ಸು ಮಾಡಿ ಅಂಥ ವರವನ್ನೂ ಪಡೆದ. ಮುಟ್ಟಿದ್ದೆಲ್ಲ ಬೂದಿಯಾಗಲಿ ಎಂದು ಕೇಳಿ ಇವನ ಗುರು ಒಬ್ಬ ಭಸ್ಮಾಸುರನಾಗಿದ್ದ. ಇವನು ಸ್ವರ್ಣಾಸುರನಾದ. ಮುಟ್ಟಿದ್ದೆಲ್ಲ ಬಂಗಾರವಾಗುತ್ತಿದ್ದುದನ್ನು ನೋಡಿ ಆಸೆ ತಗ್ಗಲಿಲ್ಲ; ಬೆಳೆ ಯಿತು. ತನ್ನ ಮಗಳನ್ನೇ ಮುಟ್ಟಿದ. ಆ ಮಗು ಕೂಡಲೆ ಅಪರಂಜಿ ಚಿನ್ನದ ಗೊಂಬೆಯಾಯಿತು. ಆ ಹಿಗ್ಗಿನಲ್ಲಿ ಮಗುವಿನ ಹೊಳ್ಳೆ ಉಸಿರಾಡ ಲಾರದಷ್ಟು ಗಟ್ಟಿಯಾಗಿ ಹೋದವೆಂಬುದು ಒಡನೆಯೇ ತಿಳಿಯಲಿಲ್ಲ. ತಬ್ಬಿಕೊಂಡು ನೋಡಿದ. ಮಗು ಬಂಗಾರವಾಯಿತಾಗಲಿ ಅದರ ಜೀವ ಇಂಗಿಹೋಗಿತ್ತು. ತನ್ನ ಆಸೆಯ ಕನಸನ್ನು ಸಾಧಿಸಲು ಹೋಗಿ ಅನು ಭವದ ಸತ್ಯವನ್ನೇ ಕಳೆದುಕೊಂಡ. ಮಾನವ ಜಾತಿಯ ಪಾಡು ಈಗ ಹಾಗೇ ಆಗಿದೆ.

ಈ ಬೆಳಕು ಕತ್ತಲೆಗಳ ಕದನದಲ್ಲಿ—ದೇವಾಸುರ ಮಥನದಲ್ಲಿ— ಮೊದಲು ಹುಟ್ಟಿದುದು ಅರ್ಥವಾದದ ವಿಷ. ಆ ವಿಷದ ಬಟ್ಟಲು ಬಂಗಾ ರದ್ದು. ಅದರ ಹೊಳಪಿನಲ್ಲಿ ಕಂಡುಬಂದದ್ದು ನಾಗರಿಕತೆ. ಬಟ್ಟಲು ತಂದ ಕೈಯುಂಗುರಿಗೆ ಸೆಳೆಸೆಳೆಯುವ ಕೆಂಪು ತೊಡೆದಿದೆ. ಕೊನೆಗೆ ಹುಟ್ಟಿದುದು ಅಮೃತಹಸ್ತನಾದ ಧನ್ವಂತರಿ ಗಾಂಧೀಜೀ. ಅರ್ಥವೂ ಕಾಮವೂ ಕನ ಸಿಗೆ ಕೈಯೊಡ್ಡಿ ಇದ್ದುದನ್ನು ಕಳೆದುಕೊಳ್ಳುವ ಹುಚ್ಚುತನದ ಜೂಜು. ಧರ್ಮದ ಕಲ್ಲಿನ ಮೇಲೆ ಮಾನವ ಜೀವನದ ಮನೆ ಕಟ್ಟಬೇಕು. ಅರ್ಥ ಕಾಮದ ಮಳಲಿನಲ್ಲಿ ಕಟ್ಟಬಾರದು. ಆ ಧರ್ಮ ಬೇರೆ ಯಾವುದೂ ಅಲ್ಲ; ಸತ್ಯ ಎಂದು ಗಾಂಧೀಜಿ ಕೈಯೆತ್ತಿ ಕೂಗಿ ಹೇಳುತ್ತಿದಾರೆ.

ಸತ್ಯ—ಧರ್ಮ ಮಳೆನೀರು ಇದ್ದಂತೆ. ಕಲ್ಲಿನ ಮೇಲೆ ಸುರಿದರೂ ಕೆಳಗಿಳಿದು ಹೊಲದಲ್ಲಿ ಹರಿದು ಬೀಜಕ್ಕೆ ಪ್ರಾಣ ಕೊಟ್ಟೀತು. ಸತ್ಯಸಂಧ ನಾದ ಜೀವಿ ಒಬ್ಬನೇ ಆದರೂ ಸಾಕು; ಚತುರಂಗಬಲವೂ ಅವನೇ

ಎನ್ನುತ್ತಾರೆ ಗಾಂಧೀಜಿ. ನಿಗ್ರಹನಿಯಮಜ್ಞಾನದಿಂದ ಕೂಡಿ ಲೋಕ ಸಂಗ್ರಹನಿರತರಾದ ಸಾಧಕರ ಗುಂಪು ಒಂದು ಬೆಳೆಯಬೇಕಾಗಿದೆ. ಅಂಥ ತಪಸ್ವಿಗಳು ಹತ್ತೇ ಜನರಾದರೂ ಮಾನವ ಕುಲವನ್ನೇ ಉದ್ಧಾರ ಮಾಡಿ ಯಾರು. ಆಗ ಸತ್ಯಕ್ಕೆ ಜಯವಾದೀತು; ಧರ್ಮಕ್ಕೆ ನೆಲೆಯಾದೀತು.

ಗಾಂಧೀಜೀ ಹೀಗೆಂದು ಧರ್ಮಯುದ್ಧವನ್ನು ಹೂಡಿದಾರೆ. ಅವರು ಈ ಕಾಳಗದಲ್ಲಿ ಗೆಲ್ಲಲಿ ಸೋಲಲಿ; ಹೊಸದೊಂದು ಯುದ್ಧನೀತಿ ಜಗತ್ತಿಗೆ ದಾನ ಬಂತು. ಸತ್ಯಾಗ್ರಹವು ಆ ನೀತಿ; ಅಹಿಂಸೆ ಸತ್ಯಗಳು ಅದರ ಅಸ್ತ್ರ ಶಸ್ತ್ರ; ಅಸಹಕಾರವು ಅದರ ವ್ಯೂಹ; ಪರಾಜಯವಲ್ಲ ಅದರ ಫಲ, ಪರಿವರ್ತನೆ. ಜೀವಾದ್ವೈತವನ್ನು ನಂಬಿ ಮಾನವ ಜೀವನದ ಪವಿತ್ರ ಧ್ಯೇಯಗಳಲ್ಲಿ ಶ್ರದ್ಧೆಯುಳ್ಳ ಜನರಿಗೆ ಅದೊಂದು ಸತ್ಯಪಥ—ನಿತ್ಯಪಥ. ಅಹಿಂಸೆಯಿಂದ ಹುಲಿಯನ್ನೂ ಹಿಡಿಯಬಹುದು. ಅದನ್ನು ಬೋನಿ ನೊಳಗೂ ಹಾಕಬಹುದು. ಅದರ ಗುಣ ಬದಲಾಯಿಸಲಾದೀತೆ? ಹಿಂಸೆಗೆ ಎದೆ ಬಿರಿದೀತು, ಕರಗದು. ಪ್ರೇಮಕ್ಕೇ ಅದು ಸಾಧ್ಯ. ನಿಶ್ಚಲ ಪ್ರೇಮಕ್ಕೆ ಕರಗದುದು ಯಾವುದೂ ಇಲ್ಲ.

ಈ ಹಿನ್ನೆಲೆ ನೆನಪು ಮಾಡಿಕೊಳ್ಳದಿದ್ದರೆ ಗಾಂಧೀ ಸಾಹಿತ್ಯ ಅರ್ಥ ವಾಗದು. ತಾವು ಮಾಡಿದ ಎಲ್ಲ ಕೆಲಸದಲ್ಲೂ ಏನೋ ಒಂದು ಹೊಸ ತನ, ಒಂದು ಸ್ವತಂತ್ರತೆ ತೋರಿಸಿದಾರೆ ಗಾಂಧೀಜಿ. ಸಾಹಿತ್ಯದಲ್ಲೂ ಅಷ್ಟೆ. ಕೀರ್ತಿಗಾಗಿ ಕಾವ್ಯ ಬರೆದವರು ಕೆಲವರಾದರೆ ಹಣ ಗಳಿಸುವ ದಕ್ಕಾಗಿ ಕೆಲವರು ಬರೆದರು. ಹೀಗೆ ಕೀರ್ತಿ—ಲಾಭಗಳಿಗಾಗಿ ಸಾಹಿತ್ಯಕ್ಕೆ ಕೈಹಾಕುವದು ಸರಿಯೆಂದು ನಮ್ಮವರು ಸಿದ್ಧಾಂತವನ್ನೇ ಮಾಡಿಬಿಟ್ಟರು. 'ಕಾವ್ಯಂ ಯಶಸೇ ಅರ್ಥಕೃತೇ' ಎಂದರು. ಕೀರ್ತಿ ಕೊಡುವವರು ಪಂಡಿ ತರು; ಹಣ ಕೊಡುವವರು ರಾಜರು. ಇವರಿಬ್ಬರು ಮೆಚ್ಚಿದುದೇ ಕಾವ್ಯ. ಇಂಥ ಕಾವ್ಯ 'ರಮಣೀಯಾರ್ಥ'ವನ್ನು ಪ್ರತಿಪಾದಿಸಲೇಬೇಕು ತಾನೆ, ಆ ರಮಣೀಯಾರ್ಥ ದೊರೆ—ಪಂಡಿತರ ಅಭಿರುಚಿಗೆ ಅನುಕೂಲವಾಗಿರ ದಿದ್ದರೆ ಕಾವ್ಯಕ್ಕೆ ಮೆಚ್ಚುಗೆ ಸಿಗಬೇಕು ಹೇಗೆ? ಅದರಲ್ಲೂ ಪಂಡಿತರು ಮೆಚ್ಚಿದರೆ ಗಾಳಿಗೆ ಹಾರಿಹೋಗುವ ಬಣ ಕೀರ್ತಿ. ಮುಖ್ಯವಾಗಿ ದೊರೆ

ಮೆಚ್ಚಬೇಕು. ಆತನ ಅಭಿರುಚಿಗೆ ತೃಪ್ತಿಯೊದಗಿಸಬೇಕು. ಸಾಹಿತ್ಯ ಈ ಹಾದಿಯಲ್ಲಿ ನಡೆದು ಎಲ್ಲಿಗೆ ಮುಟ್ಟಿದೆಯೆಂದರೆ ನಮ್ಮ ನಾಟಕದಲ್ಲಿ ಧರ್ಮವಾಗಿ ಮಾಡಿಕೊಂಡ ಹೆಂಡತಿಯು ಹಾಗೆ, ಅಷ್ಟೇ ಗೌರವದಿಂದ ಪಕ್ಕದ ಮನೆಯಾತನ ಹೆಂಡತಿಯೂ ಸೂಳೆಯೂ ನಾಯಿಕೆಯಾಗಬಹು ದಾಯಿತು. ಸ್ವೀಯೆ, ಪರಕೀಯೆ, ವೇಶ್ಯೆ—ಈ ಮೂವರಿಗೂ ನಾಟಕ ಸಮಾನಸ್ಥಾನವನ್ನು ಕೊಟ್ಟಿತು. ಇದಿರಲಿ.

ಇನ್ನೂ ಒಂದು ಬಗೆಯ ಕಾವ್ಯಸೃಷ್ಟಿ ಪ್ರಪಂಚದಲ್ಲಿ ಆಗಿದೆ. ಬಾಳಿ ನಲ್ಲಿ ನಮಗೆ ಅನುಭವವಾದ ಆನಂದ—ದುಃಖಗಳನ್ನು ಹಾಗೇ ಅರಗಿಸಿ ಕೊಳ್ಳದೆ ನಾವು ನೆರೆಹೊರೆಯವರೊಡನೆ ಹೇಳಿಕೊಳ್ಳುವ ರೀತಿಯಲ್ಲಿ ಕೆಲವರು ಕಾವ್ಯ ಹೇಳಿದಾರೆ. ಅವರಿಗೆ ತಮ್ಮ ಅನುಭವ ಒಂದು ಭಾರ. ಅದನ್ನು ಹೇಳಿದರೆ ಆ ಭಾರ ತಗ್ಗುತ್ತದೆ; ಒಂದು ಹೊಸ ಸಂತೋಷ ಬರುತ್ತದೆ. ಇಲ್ಲಿ ಯಾವುದನ್ನೂ ಗಳಿಸುವ ಬುದ್ಧಿಯಿಲ್ಲ. ಸಾಧಾರಣ ವಾಗಿ ದೇಸಿಮಾರ್ಗದ ಕಾವ್ಯವೆಲ್ಲ ಇಂಥದೇ. ಜನಪದಸಾಹಿತ್ಯವನ್ನು ಈಗೀಗ ನಾವು ಆದರಿಸುತ್ತಿದೇವೆ. ವಚನಸಾಹಿತ್ಯಕ್ಕಾಗಲಿ ದಾಸರ ಪದ ಗಳಿಗಾಗಲಿ ಇನ್ನೂ ಸರಿಯಾದ ಸ್ಥಾನ ದೊರೆತಿಲ್ಲ. ಕನ್ನಡ ಕವಿಚರಿತೆ ಕಾರರು ಇವರನ್ನು ತಮ್ಮ ಪಟ್ಟಿಯಲ್ಲಿ ಸೇರಿಸಿದರಾಗಲಿ, ತೆಲುಗಿನ ಕವಿ ಚರಿತೆಯ ಕರ್ತರು ಅವರ ವೇಮನ, ಅವರ ಗೇಯಕಾವ್ಯ, ಅವರ ಶತಕ ಕವಿಗಳು—ಮೈಲಿಗೆ ಎಂದು ಬಿಟ್ಟುಬಿಟ್ಟರು. ಎಲ್ಲ ಕಡೆಯಲ್ಲೂ ಹೀಗೇ ನಡೆದಿದೆ.

ಗಾಂಧೀಜಿಯ ಸಾಹಿತ್ಯ ಈ ಮೂರನ್ನೂ ಬಿಟ್ಟು ನಾಲ್ಕನೆಯ ಜಾತಿಗೆ ಸೇರಿದುದು. ಅವರಿಗೆ ಕೀರ್ತಿಯೂ ಬೇಕಾಗಿಲ್ಲ, ಹಣವೂ ಬೇಕಾ ದುದಿಲ್ಲ. ಅವರ ಸ್ಫೂರ್ತಿ ಜನಪದಸಾಹಿತ್ಯ, ದಾಸರು ಶರಣರು ನಮ್ಮ ನಾಡಿಗೆ ದಾನಮಾಡಿದ ಸಂಸ್ಕೃತಿಯಿಂದ ಹುಟ್ಟಿದುದು. ಗುಜರಾತಿ, ಹಿಂದೀ ಇಂಗ್ಲೀಷುಭಾಷೆಗಳ ಶರಣಸಾಹಿತ್ಯಕ್ಕೆ ಅವರು ಶರಣು ಹೋಗಿ ದಾರೆ. ತುಲಸೀದಾಸನ ರಾಮಾಯಣವೇ ಅವರಿಗೆ ವೇದ. ಅನೇಕ ವೇಳೆ ಅವರಾಡುವ ಮಾತಿನಲ್ಲಿ ಆ ಸಂಸ್ಕೃತಿಯ ನೆರಳು ಬಿದ್ದಿರುವುದು

ಕಾಣುತ್ತದೆ. ಅವರು ಮಾಡುವ ಕೆಲಸದಲ್ಲೂ ಆ ವಿನಯದಲ್ಲಿ ಕಾಣುವ ವೈರಾಗ್ಯ ಮೂಡಿಬಂದಿದೆ. ಭಗವದ್ಭಕ್ತರ ಕೀರ್ತನೆಗಳು ಅವರ ಮನಸ್ಸಿಗೆ ಸಂಕಟ ಸಮಯದಲ್ಲಿ ಶಾಂತಿಕೊಟ್ಟ ಹಾಗೆ ಉಳಿದವು–ಗೀತೆಯ ವಿನಾ–ಕೊಟ್ಟಂತೆ ತೋರುವುದಿಲ್ಲ.

ಆದರೂ ಈ ಹಾದಿಯನ್ನು ಗಾಂಧೀಜೀ ತುಳಿಯಲಿಲ್ಲ. ಅವರು ಕರ್ಮಯೋಗಿ; ಅನಾಸಕ್ತರಾಗಿ ಜಗದ್ಧಿತವನ್ನು ಮಾಡುವುದು ಅವರ ಗುರಿ. ಅವರ ಸತ್ಯೋಪಾಸನೆಯಲ್ಲಿ ಕಾವ್ಯಯೋಗಕ್ಕೆ ಸ್ಥಾನವಿಲ್ಲ. ಅವರಿಗೆ ಸಾಹಿತಿಯಾಗುವ ಹಂಬಲವಿಲ್ಲ. ಈಗಲೂ ಯಾರಾದರೂ ಅವರನ್ನು ನೀವು ಸಾಹಿತಿ ಎಂದರೆ ನಕ್ಕಾರು. 'ನಿಮ್ಮ ಕಾವ್ಯ ನನಗೆ ಓದಿ ಹೇಳಲು ಇದೊಂದು ಉಪಾಯವಲ್ಲ ತಾನೆ' ಎಂದು ಹಾಸ್ಯವನ್ನೂ ಮಾಡಬಹುದು. ಅವರಿಗೆ ಸಾಹಿತ್ಯ ಬರೆಯುವ ಚಟವೂ ಇಲ್ಲ, ಚಪಲವೂ ಇಲ್ಲ, ಯಾವಾಗಲೂ ಆ ಪ್ರಯತ್ನ ಮಾಡಿಲ್ಲ. ತಾವು ಏನಾದರೂ ಬರೆಯುವಾಗ ಅದು ಅಂದವಾಗಿರಲಿ ಎಂಬ ಕೃಷಿಯಿಲ್ಲ; ಸತ್ಯವಾಗಿರಲಿ ಎಂಬ ನೋಟವಿದೆ. ಅಸತ್ಯ–ಉತ್ಪ್ರೇಕ್ಷೆ, ಅತಿಶಯೋಕ್ತಿ–ಅದರಲ್ಲಿ ನುಸುಳದಿರಲಿ ಎಂಬ ಎಚ್ಚರವಿದೆ. ಕವಿಕರ್ಮದಲ್ಲಿ ಗಾಂಧೀಜಿಗೆ ಅಷ್ಟಾಗಿ ನಂಬಿಗೆಯೂ ಇದ್ದಂತಿಲ್ಲ. ಯಾರಾದರೂ ಆಗದ ಹೋಗದ ಗಾಳಿಯ ಮಾತನ್ನು ಆಡಿದರೆ 'ನೀವು ಬಿಡಿ, ಕವಿಗಳು!' ಎಂದು ಅವರನ್ನು ಎಚ್ಚರಿಸುತ್ತಾರೆ. ಕವಿಗಳು ಎಂದರೆ ಸ್ವಲ್ಪ ಅವ್ಯವಹಾರದ ಜಾತಿಗೆ ಸೇರಿದವರು ಎಂಬ ಮೃದುಹಾಸ್ಯ ಅಲ್ಲಿದೆ. ಆದರೆ ನಿಜವಾಗಿ ಗಾಂಧೀಜಿಗೆ ತಾವೇ ಒಬ್ಬ ಉತ್ತಮ ಕವಿಯೆಂಬುದು ತಿಳಿದಿಲ್ಲವೋ ಏನೋ.

ಕವಿಕರ್ಮದಲ್ಲಿ ಗಾಂಧೀಜಿಗೆ ನಂಬಿಗೆ ಕಡಮೆ ಎಂದು ಹೇಳಿತು. ಅಂದರೆ ತುಲಸೀದಾಸ ಕವಿಯಲ್ಲವೆಂದಾಗಲಿ, ಅವನ ಕಾವ್ಯಕ್ಕೆ ಬೆಲೆ ಕೊಡಬಾರದೆಂದಾಗಲಿ ಅವರ ಅಭಿಪ್ರಾಯವಲ್ಲ. ನಿಜವಾಗಿ ಅವರಿಗೆ ತಮ್ಮ ಬಾಳಿನಲ್ಲಿ ಅಮೂಲ್ಯವಾದುದು ಯಾವುದಾದರೂ ಇದ್ದರೆ ಅದರಲ್ಲಿ ಕಾವ್ಯಾನುಭವವೂ ಒಂದು. 'ಕರುಣಾಳು ಬಾ ಬೆಳಕೆ' ಎಂಬ ಇಂಗ್ಲೀಷು ಗೀತ ಅವರ ಮನಸಿಗೆ ಕೊಟ್ಟ ಹಾಯನ್ನು ಅವರೇ ವರ್ಣಿಸಿದಾರೆ. ಒಂದು

ದಿನ ಸತ್ಯಾಗ್ರಹಾಶ್ರಮದಲ್ಲಿ ಸಂಜೆಯ ಪ್ರಾರ್ಥನೆ ನಡೆದಾಗ ರವೀಂದ್ರ ನಾಥರ ಹಾಡು ಒಂದನ್ನು ಇಂಪಾಗಿ ಹಾಡಲಾಯಿತು. ಆ ಭಾವ ಆ ಗಾನಗಳು ಅಲ್ಲಿದ್ದವರ ಮನಸಿಗೆ ಒಂದು ಸಮಾಧಾನ ಶಾಂತಿಯನ್ನು ಕೊಟ್ಟವು. ಗಾಂಧೀಜಿಗೆ ದಿನವೂ ಪ್ರಾರ್ಥನೆ ಮುಗಿದಮೇಲೆ ನಾಲ್ಕು ಮಾತು ಹೇಳುವದು ರೂಢಿಯಾಗಲಿ, ಆ ದಿನ ಮಾತಾಡದೆ ಮೆಲ್ಲನೆ ಎದ್ದು ಹೋದರು. ಆ ರಸಾನುಭವದಿಂದ ಮನಸಿನ ಕೊಳ ಶಾಂತವಾಗಿತ್ತು. ಮಾತು ಯಾರೇ ಆಡಿದರೂ ಆ ಕೊಳದಲ್ಲಿ ತೆರೆಯೆಬ್ಬಿಸಿದಂತೆ. ' ಇಂಗ್ಲೀಷು ಸಾಹಿತ್ಯದಲ್ಲಿ ಬೈಬಲಿಗಿಂತ ಉತ್ತಮವಾದ ಗ್ರಂಥವುಂಟೆ? ಬೈಬಲೇ ಇರ ದಿದ್ದರೆ ಇಂಗ್ಲೀಷು ಸಾಹಿತ್ಯ ಶೂನ್ಯವಾಗಿ ಹೋಗುತ್ತಿತ್ತು. ಆ ಸಾಹಿ ತ್ಯಕ್ಕೆ ಷೇಕ್ಸ್‌ಪಿಯರ್ ಒಂದು ಪಾಲಾದರೆ ಬೈಬಲ್ ಮೂರು ಪಾಲು' ಎಂದು ಗಾಂಧೀಜೀ ಹೇಳಿದುದನ್ನು ಕೆಲವರು ತಪ್ಪು ತಿಳಿದುಕೊಂಡು ದುಂಟು. ಷೇಕ್ಸ್‌ಪೀಯರ್ ತನ್ನ ನಾಟಕ ಒಂದರಲ್ಲಿ ಒಂದು ಪಾತ್ರದ ಬಾಯಿಂದ Not that I loved Cæser less, but I loved Rome more- ನನಗೆ ಸೀಜರ್ ದೊರೆಯಮೇಲೆ ಪ್ರೀತಿ ಕಡಮೆ ಎನ್ನಬೇಡಿ; ಹಾಗಲ್ಲ, ನನಗೆ ರೋಮ್ ನಗರದಮೇಲೆ ಹೆಚ್ಚು ಪ್ರೀತಿ ಎನ್ನಿ—ಎಂದು ಆಡಿಸಿದ್ದಾನೆ. ಗಾಂಧೀಜಿಗೆ ಕವಿಕರ್ಮದಲ್ಲಿ ನಂಬಿಗೆ ಕಡಮೆ ಎಂದಾಗಲೂ ಷೇಕ್ಸ್‌ಪಿಯರ್ ಒಂದುಪಾಲು ಬೈಬಲ್ ಮೂರುಪಾಲು ಎಂದಾಗಲೂ ಕಲ್ಪನೆಗಿಂತ ಅನುಭವ ಲೇಸು, ಭಾಷೆಗಿಂತ ಭಾವ ಮುಖ್ಯ, ಎಲ್ಲಕ್ಕಿಂತ ಸತ್ಯವೇ ಹೆಚ್ಚಿನದು ಎಂಬ ಅಭಿಪ್ರಾಯ ಕಂಡುಬರುತ್ತದೆ. ಇಲ್ಲದಿದ್ದರೆ ' ಕೊರಾನಿಲ್ಲದಿದ್ದರೆ ಅರಬ್ಬೀ ಭಾಷೆಯನ್ನು ಜಗತ್ತು ಮರೆತೇ ಹೋಗು ತ್ತಿತ್ತು. ಹಾಗೆಯೆ ತುಲಸೀದಾಸನಿಲ್ಲದ ಹಿಂದೀ ಸಾಹಿತ್ಯವನ್ನು ಹೇಗೆ ಊಹಿಸಬೇಕು ' ಎಂದು ಅವರು ಹೇಳಿದ ಮಾತಿಗೆ ಬೆಲೆ ತಿಳಿಯುವದಿಲ್ಲ.

ಎಳೆತನದಲ್ಲಿ ಗಾಂಧೀಜೀ ಸಾಹಿತ್ಯದಲ್ಲಿ ಸತ್ಯದ ಸವಿಯನ್ನು ಕಂಡಿ ದ್ದಾರೆ. ಆ ಅನುಭವಗಳು ಅವರಿಗೆ ತಮ್ಮ ಬಾಳಿನಲ್ಲೇ ಸತ್ಯದ ಬಾಗಿಲು ತೆರೆದವು. ಅವರು ನೋಡಿದ ಒಂದು ನಾಟಕ ಅವರ ಮನಸ್ಸಿನಲ್ಲಿ ನೂರು ಸಲ ಆಡಿದ ಹಾಗೆ ಮೊಳಕು ಹಾಕಿಕೊಂಡರು.' ನಾಟಕದಲ್ಲಿ ನೋಡಿದ

ಹರಿಶ್ಚಂದ್ರನಂತೆ ನಾವೇಕೆ ಆಗಬಾರದು ಎನಿಸಿತು. ಈಗ ಆ ನಾಟಕ ಓದಿದರೆ ನನ್ನ ಕಣ್ಣು ಹನಿತುಂಬಿಯಾವು ಎನ್ನುತ್ತಾರೆ.

ಒಂದು ಪದ್ಯ ಅವರ ಮನಸಿಗೆ ನಾಟಿ ಅವರ ಇಡೀ ಬಾಳಿಗೇ ಒಂದು ಬಣ್ಣಕೊಟ್ಟಿತು. ಅದು ಒಂದು ಸಾಮಾನ್ಯವಾದ ನೀತಿಪದ್ಯ. ನೀರು ಕೊಟ್ಟವರಿಗೆ ಅನ್ನ ನೀಡು; ಕೈಮುಗಿದರೆ ಅಡ್ಡಬೀಳು; ತಾಮ್ರದ ಕಾಸು ಕೊಟ್ಟವಗೆ ಬಂಗಾರದನಾಣ್ಯ ಕೊಡು; ಕಷ್ಟಕ್ಕೆ ಆದವನಿಗಾಗಿ ಪ್ರಾಣವಾದರೂ ಕೊಯ್ದುಕೊಡು; ಒಂದು ನೀಡಿದವಗೆ ಹತ್ತು ನೀಡು; ಕೇಡು ಬಗೆದವಗೆ ಲೇಸುಬಗೆ; ಇದೇ ಸತ್ಯದ ಗುಟ್ಟು. ಇದು ಅದರ ಅರ್ಥ.*

ಅವರ ಬಾಯಿಂದ ಆಗಾಗ ಬರುವ ನುಡಿ ಇನ್ನೊಂದು ಇದೆ. 'ತ್ಯಾಗ ನ ಟಕೇ ರೇ ವೈರಾಗ ವಿನಾ'– ವೈರಾಗ್ಯವಿರದ ಬರೀ ತ್ಯಾಗ ನಿಲ್ಲದು.

ಗಾಂಧೀಜೀ ಸಾಹಿತ್ಯದ ಬಾಗಿಲಿಗೆ ಬಂದದ್ದು ಸತ್ಯದ ದಾರಿಯಿಂದ. ಅವರ ಸತ್ಯಾನ್ವೇಷಣೆಯಲ್ಲಿ ಅನಾಸಕ್ತ ಕರ್ಮದ ಹಾದಿಯನ್ನು ಅವರು ತುಳಿದರು. ಅವರಿಗೆ ಸತ್ಯವೇ ಬ್ರಹ್ಮ–ಅಹಿಂಸೆಯೇ ಉಪಾಯ ಎಂಬ ಆಂತರಿಕ ಶ್ರದ್ಧೆ ಉಂಟಾಯಿತು. ಆ ಅನುಭವದ ಬೆಳಕನ್ನು' ಮರೆಮಾಡುವುದು ಅವರಿಗೆ ಸಾಧ್ಯವಾಗಲಿಲ್ಲ. ದೇವರು ಸತ್ಯ–ಅಹಿಂಸೆಗಳ ಪ್ರಸಾರಕ್ಕಾಗಿ ತನ್ನನ್ನು ಒಂದು ನಿಮಿತ್ತವಾಗಿ ಮಾಡಿದಾನೆ, ತಾವು ಈ ವಿಷಯದಲ್ಲಿ ಅವನ ಕೈಯ ಆಯುಧ ಎಂದು ಅವರಿಗೆ ನಂಬಿಗೆ ಆಯಿತು.

---

* ಬೊಗಸೆ ನೀರಿತ್ತವಗೆ ತೃಪ್ತಿಯುಪ್ಪಂತುಣಿಸು
ಒಳ್ಳಿತನು ಬಯಸಿದಗೆ ಭಕ್ತಿಯಿಂ ಬಾಗು
ಕಿರುಗಾಸನಿತ್ತವಗೆ ತಿರುಗಿ ಚಿನ್ನ ನೀಡು
ಪ್ರಾಣವಂ ಕಾಯ್ದವಗೆ ಪ್ರಾಣದಾನವ ಮಾಡು–
ಕಿರಿನೆರವಿಗೂ ಹಿರಿಯ ಸೇವೆಯ ಸಲಿಸುವುದು
ಪ್ರಾಜ್ಞರಾದವರ ನಡೆಯಂತೆಯೇ ಅವರ ನುಡಿ
ಜ್ಞಾನಿಗಳು ಮಾನವರ ಭೇದಗಳನೆಣಿಸದೆಯೆ
ಕೇಡಿಗುಂ ಸಂತಸದಿ ಶುಭವನೆಸಗುವರು.

ಕನ್ನಡದಲ್ಲಿ ಹೀಗೆ ಇದು ಭಾಷಾಂತರವಾಗಿದೆ.

I can no longer hide the light under a bushel— ನಾನಿನ್ನು ಈ ಬೆಳಕನ್ನು ಬಚ್ಚಿಡಲಾರೆ–ಎಂದು ಹೇಳಿದರು. ಮೊದಲೇ ಕರ್ಮಮಾರ್ಗ, ಮೇಲೆ ಈ ಶ್ರದ್ಧೆ–ತಮ್ಮ ಸಿದ್ಧಾಂತದ ಪ್ರಚಾರಕ್ಕಾಗಿ ಅವರು ಬರೆಯ ತೊಡಗಿದರು. ಸಾಲದುದಕ್ಕೆ ಅಗಾಧವಾದ ಚಳುವಳಿಯನ್ನೂ ನಡೆಯಿ ಸುವ ಹೊಣೆ ಬೇರೆ. ಹೀಗಾಗಿ ಗಾಂಧೀಜಿಯ ಸಾಹಿತ್ಯ ಒಂದು ಸಾಧನೆ ಯಾಯಿತು; ಅದೇ ಒಂದು ಗುರಿಯಾಗಲಿಲ್ಲ.

ಆದರೂ ಅವರ ಬರೆವಣಿಗೆಯಲ್ಲಿ ಕಂಡುಬರುವ ಹದ, ಹರಿತ ಉತ್ತಮ ಸಾಹಿತ್ಯದ ಗುರುತಾಗಿವೆ. ಶೈಲಿಯೇ ಕವಿಯ ಜೀವಾಳ ಎಂಬ ಮಾತು ಸಾಹಿತ್ಯ ವಿಮರ್ಶೆಯಲ್ಲಿ ರೂಢಿಯಿದೆ. ಕವಿ ತಾನು ಹೇಳಬೇಕಾದ ಭಾವವನ್ನು ಹೇಳುವ ರೀತಿ, ಹೇಳುವ ಕೆಲಸಕ್ಕೆ ಬಳಸುವ ಮಾತು, ಅದ ರಲ್ಲಿ ಬರುವ ದೃಷ್ಟಾಂತ–ಎಲ್ಲವೂ ಆ ಶೈಲಿಯೆಂಬ ಮಾತಿನಲ್ಲಿ ಅಡಕವಾ ಗಿದೆ. ಗಾಂಧೀಜಿಯ ಸಾಹಿತ್ಯವನ್ನು ಓದಿದರೆ ಅವರಿಗೆ ತಮ್ಮದೇ ಆದ ಒಂದು ವಿಲಕ್ಷಣ ಶೈಲಿಯಿದೆ ಎಂದು ಹೊಳೆಯಲು ತಡವಾಗುವುದಿಲ್ಲ. ಅಷ್ಟು ಒಡೆದು ಕಾಣುತ್ತದೆ ಅದು. ಸಂಗ್ರಹ, ಸರಳ, ಸ್ಪಷ್ಟ–ಎಂದು ಅದನ್ನು ವರ್ಣಿಸಬಹುದು. ಸಂಗ್ರಹವಿದ್ದಷ್ಟೇ ಸರಳ, ಸರಳವಿದ್ದಷ್ಟೇ ಸ್ಪಷ್ಟ. ಈ ಮೂರೂ ಗುಣ ಒಂದೇ ಕಡೆ ಸಿಗುವದು ಕಷ್ಟ. 'ಕಿರಿದ ರೊಳು ಪಿರಿದರ್ಥವಂ' ತಿಳಿಸುವ ಬರೆಹದಲ್ಲಿ ಸರಳತೆಗಿಂತ ವಕ್ರೋಕ್ತಿ–ಕೊಂಕುನುಡಿ ಹೆಚ್ಚು. ಅನೇಕ ಸಲ ಕಿರಿಯ ಮಾತಿನಲ್ಲಿ ಅರ್ಥಕ್ಕಿಂತಲೂ ಕೊಂಕೇ ಹೆಚ್ಚಾಗಿರುತ್ತದೆ. ಅದು ಕೊಂಕುನುಡಿಗೆ ಸಹಜ. ಸರಳವಾದ ಶೈಲಿ ಇದ್ದ ಕಡೆ ಸಂಗ್ರಹಗುಣ ಇರುವುದು ಅಪರೂಪ. ಸ್ಪಷ್ಟತೆ ಯಂತೂ ಹೆಚ್ಚು ಕಡಮೆ ನಾವು ಕಾಣದ ಗುಣವೆಂದೇ ಹೇಳಬಹುದು. ಗಾಂಧೀಜಿಯ ಬರೆಹದಲ್ಲಿ ಇವು ಮೂರೂ ಹೆಣೆದುಕೊಂಡುಬಿಟ್ಟಿವೆ. ಅವರ ವಾಕ್ಯಗಳು 'ಚಿಟಿಕೆ ಹಾಕುವದರೊಳಗಾಗಿ ಮುಗಿಸಬಹುದಾದ ಚಿಕ್ಕ ನುಡಿ. ಗುಂಡಿನೇಟಿನಂತೆ ಗುರಿತಪ್ಪದ ತಿಳಿಯಾದ ಮೊನೆಯಾದ ಮಾತು.' ಅದರ ವೇಗದಲ್ಲಿ ಒಂದು ಬೆಳಕು ಹುಟ್ಟುತ್ತದೆ. ಅದರ ಬಲ ದಲ್ಲಿ ಸೃಷ್ಟಿ–ಪ್ರಳಯಗಳೆರಡೂ ಹುದುಗಿವೆ. ಎಲ್ಲರೂ ಗಾಂಧೀ ಸೋತು

ಹೋದನೆಂದಾಗ ಒಂದೇ ಒಂದು ವಾಕ್ಯದಿಂದ ಸೋಲಲ್ಲ ಇದು, ಗೆಲವು ಅನಿಸುವಹಾಗೆ ಮಾಡಿಬಿಡುತ್ತಾರೆ.

ಮಾತು ಬಳಸುವದರಲ್ಲಿ ಗಾಂಧೀಜೀ ಶುದ್ಧ ಕೋಮಟಿ. ತಾವು ಹೇಳಬೇಕಾದುದು ಜನರ ಮನಸಿಗೆ ಸ್ಪಷ್ಟವಾಗಿ ಸರಿಯಾಗಿ ತಿಳಿಯಲು ಎಷ್ಟುಬೇಕೋ ಅಷ್ಟೇಮಾತು. ಒಂದೇ ಒಂದು ಮಾತಾದರೂ ಹೆಚ್ಚಾಗಿ ಉಪಯೋಗಿಸುವದಿಲ್ಲ. ದೃಢವಾದ ಅಭಿಪ್ರಾಯವಿದ್ದವರಿಗೆ ತಮ್ಮ ಮನಸಿನ ಭಾವವನ್ನು ಸ್ಪಷ್ಟವಾಗಿ ಸುಲಭವಾಗಿ ತಿಳಿಸಬೇಕೆಂದಾಗ ಉದ್ದುದ್ದ ವಾಕ್ಯ ಸರಿಹೋಗುವುದಿಲ್ಲ. 'ಉದ್ದವಾದ ವಾಕ್ಯ ದೊಡ್ಡ ಹೊಟ್ಟೆಯ ಆನೆಯಂತೆ. ಆನೆಯ ಹೊಟ್ಟೆಗೆ ತಿಂಡಿ ಒದಗಿಸುವದು ಬಹಳ ಕಷ್ಟ. ಸೊಪ್ಪೋ ಸೆದೆಯೋ ಸಿಕ್ಕದ್ದನ್ನೆಲ್ಲ ತಂದು ಅದಕ್ಕೆ ಕೊಡಬೇಕು. ಅರ್ಥಕ್ಕೆ ಭಾವಕ್ಕೆ ಒಂದು ಮಿತಿ ಇದೆ; ಮಾತಿಗೆ ಇಲ್ಲ. ಕೆಲಸಕ್ಕೆ ಬಾರದ ಮಾತಿನ ಕಸದ ತಿಪ್ಪೆಯನ್ನು ಕೂಡಿಹಾಕಿ ವಾಕ್ಯರಚನೆ ಬೆಳೆಸಬಹುದಾಗಲಿ ಅಸಲಿಗೇ ಮೋಸವಾಗುತ್ತದೆ.' ತಾವು ಬರೆದುದನ್ನು ಮತ್ತೆ ಮತ್ತೆ ಪರಿಶೀಲಿಸುವ ಅವಕಾಶ ಗಾಂಧೀಜಿಗೆ ಬಹಳ ದೊರೆತಿವೆ. ಅವರ ಬರೆಹ ಅನೇಕಸಲ ಮತ್ತೆ ಮತ್ತೆ ಅಚ್ಚಾಗಿವೆ. ಆದರೂ ಅವರು ಮೊದಲು ಬರೆದುದನ್ನು ತಿದ್ದುವುದು ಕಡಮೆ; ಕಡಮೆ ಎನ್ನುವುದಕ್ಕಿಂತ ತಿದ್ದುವಹಾಗೆ ಏನೂ ಇರುವದಿಲ್ಲ.ಆದರಲ್ಲಿ ಎನ್ನುವುದು ಹೆಚ್ಚು ಸತ್ಯ. ಏನು ತಿದ್ದಬೇಕು? ತೂಕಮಾಡಿ ಅಗತ್ಯವಿದ್ದಷ್ಟೇ ಮಾತು ಬಳಸುವ ಶೈಲಿಯಲ್ಲಿ ಏನು ಹೆಚ್ಚು ಕಡಮೆ ಮಾಡಬೇಕು? ಹೇಳಿದ ಭಾವವನ್ನು ಮತ್ತೊಂದುಸಲ ಹೇಳಬೇಕಾದಾಗ ಮೊದಲು ಆಡಿದ ವಾಕ್ಯವನ್ನೇ ಹೇಳಲು ಹಿಂಜರಿಯದ ನಿಸ್ಸಂಕೋಚ ಸ್ವಭಾವ. ಹೊಸ ರೀತಿಯಲ್ಲಿ ಹೊಸ ಅಲಂಕಾರ ಕಟ್ಟಿ ಹೇಳುವ ಪದ್ಧತಿಯಿದ್ದರೆ ತಾನೆ. 'ಹಿಂದ್ ಸ್ವರಾಜ್ಯ'ವೆಂಬದು ಅವರು ಮೊದಲು ಬರೆದ ಗ್ರಂಥ. ಹಿಂದುಸ್ತಾನಕ್ಕೆ ಎಂಥ ಸ್ವರಾಜ್ಯ ಬೇಕು, ಅದು ಹೇಗೆ ಸಿಗಬೇಕು ಎಂಬ ಪ್ರಶ್ನೆಗೆ ಅವರು ಕೊಟ್ಟ ಉತ್ತರ ಅದು. ಅದರಲ್ಲೇ ಅವರು ತಮ್ಮ ಜೀವನದ ಸಂದೇಶವನ್ನು ಸಾರಿದರು. ಆ ಪುಸ್ತಕ ಅವರು ಬರೆದದ್ದು ೧೯೦೮ರಲ್ಲಿ. ಹದಿಮೂರು ವರುಷದ

ತರುವಾಯ ಆದರಬಗ್ಗೆ ಬರೆದಾಗ ಹೀಗೆಂದರು: 'ಒಂದೇ ಒಂದು ಪದದ ವಿನಾ ಆದರಲ್ಲಿ ಏನನ್ನೂ ಆಳಿಸುವದಿಲ್ಲ. ಆ ಪದವನ್ನೂ ಕೂಡ ಒಬ್ಬ ಗೆಳತಿಯ ಸಂತೋಷಕ್ಕಾಗಿ ತೆಗೆದುಹಾಕುತ್ತೇನೆ.' ಕನ್ನಡದಲ್ಲಿ ಭಾರತ ಬರೆದ ಗದುಗಿನ ನಾರಣಪ್ಪನಿಗೂ 'ಪದವಿಟ್ಟು ಆಳಿಪದೊಂದು ಅಗ್ಗಳಿಕೆ' ಇದೆ. ಆದರೆ ಇಬ್ಬರ ನಡುವೆ ಎಷ್ಟು ಭೇದ!

ಮಾತು ಮಿತವಿದ್ದಂತೆ ಅರ್ಥವೂ ಅತಿಸುಲಭ. 'ಈ ಪುಸ್ತಕ ಎಳೆಯ ಮಕ್ಕಳೂ ಕೂಡ ಓದಿ ತಿಳಿದುಕೊಳ್ಳಬಹುದಾಗಿದೆ' ಎಂದು ಹಿಂದ್ ಸ್ವರಾಜ್ಯದ ಬಗ್ಗೆ ಅವರೇ ಬರೆದುಕೊಂಡಿದಾರೆ. ಇದು ನಿಜ. ಅವರಷ್ಟು ಸುಲಭ ಶೈಲಿಯಲ್ಲಿ ಬರೆಯುವುದು ಎಲ್ಲರಿಗೂ ಸಾಧ್ಯವಿಲ್ಲ. ಚಿಕ್ಕ ಪದ ಏದ್ದರೆ ದೊಡ್ಡ ಪದ ಬೇಡ. ಸುಲಭವಾದ ಮಾತು ಸಿಗುವಹಾಗಿದ್ದರೆ ಅದೇ ಸರಿ. ಹಳ್ಳಿಯ ಜನರಿಗೆ ತಿಳಿಯಬೇಕು. ಸಾಮಾನ್ಯಜನರಿಗೆ ತಮ್ಮ ಭಾವ ತಿಳಿಯುವ ಮಟ್ಟಕ್ಕೆ ತಮ್ಮ ಭಾಷೆ ಇಳಿಯಬೇಕು. ಈ ಹಾದಿ ಯಲ್ಲಿ ಗಾಂಧೀಜೀ ಎಡಬಿಡದೆ ದುಡಿದಿದಾರೆ. ಗುಜರಾತಿಯಲ್ಲಿ ಮೊದಲು 'ನವಜೀವನ' ಹೊರಡಿಸುತ್ತಿದ್ದರು. ಅದು ವಾರಕ್ಕೊಮ್ಮೆ ಹೊರಬಿದ್ದರೆ ಗುಜರಾತಿನಲ್ಲಿ ಹಳ್ಳಿ ಹಳ್ಳಿಯಲ್ಲೂ ಅಂಚೆಯ ಮನೆಯ ಮುಂದೆ ಜನರ ನುಗ್ಗಾಟ. ಅದು ಸತ್ಯಾಗ್ರಹ ಚಳುವಳಿಯ ಕಾಲ. ನವಜೀವನಕ್ಕೆ ೨೫ ಸಾವಿರ ಜನ ಚಂದಾದಾರರಿದ್ದರಂತೆ. ಓದುಬರೆಹ ಚೆನ್ನಾಗಿ ಕಲಿತವರ ಮನೆಯಲ್ಲಿ ನವಜೀವನ ಇದೆಯೆ ಎಂದು ಕೇಳಬೇಕಾದುದೇ ಇಲ್ಲ ವಾಯಿತು. ನವಜೀವನ ಓದುವುದು ಎಂದರೆ ಖಾದೀ ಹಾಕುವಹಾಗೆ; ದೇಶಭಕ್ತಿಯ ಗುರುತಾಗಿ ಹೋಯಿತು. ಗಾಂಧೀಜಿಗೆ ಈಗಿನಹಾಗೆ ಆಗ ಬಿಡುವಿರುತ್ತಿರಲಿಲ್ಲ. ಕೈತುಂಬ ಕೆಲಸವಿರುತ್ತಿತ್ತು. ಆದರೂ ನವಜೀವನ ಕ್ಕಾಗಿ ಬಿಡುವು ಮಾಡಿಕೊಳ್ಳುತ್ತಿದ್ದರು. ಹಳ್ಳಿಯಲ್ಲಿ ಯಾರಾದರೂ ಓದುವವರಿದ್ದರೆ ಅಲ್ಲಿ ಜನ ಗುಂಪುಕಟ್ಟಿ ನೊಣ ಮುಕ್ಕರಿಸಿದಹಾಗೆ ಮುತ್ತಿಬಿಡುತ್ತಿದ್ದರು. ಗಾಂಧೀಜೀ ಬರೆಹದ ಮೂಲಕ ಜನರನ್ನು ಆಡಿ ಸಿದಹಾಗೆ ಹಿಂದುಸ್ಥಾನದಲ್ಲಿ ಹಿಂದೆ ಯಾರೂ ಮಾಡಿಲ್ಲ. ಜನರ ಮನಸಿಗೆ ನಾಟುವಹಾಗೆ ಬರೆಯುವದು ಸಾಹಿತಿಯ ಜೀವಗುಣ. ಇದು ಗಾಂಧೀ ಜಿಗೆ ಪೂರಾ ವಶವಾಗಿದೆ.

ಈ ಗೆಲುವಿನ ಗುಟ್ಟು ಅವರ ಭಾವಗಳ ತೀವ್ರತೆ. ಭಾವವು ಸಹಜವಾದಾಗ ಅದು ಹರಿತವಾಗುತ್ತದೆ. ಆಗ ಭಾಷೆಗೆ ಒಂದು ಬಗೆಯ ಬಿಗಿ, ಬಲ ಬರುತ್ತದೆ. ಭಾವ ಕೃತ್ರಿಮವಾದರೆ, ಎರವು ತಂದುದಾದರೆ ಭಾಷೆ ಭಾರವಾಗಿ ಹಸಗೆಡುತ್ತದೆ. 'ಭಾವವು ತುಂಬಿದ ಕೊಡದಹಾಗೆ. ಭಾಷೆ ಅದನ್ನು ಮೇಲೆ ಎಳೆಯುವ ಹಗ್ಗ.' ತುಂಬಿದ ಕೊಡವನ್ನು ಎಳೆವಾಗ ಹಗ್ಗ ನೇರವಾಗಿ ದೃಢವಾಗಿ ಅಂಬಿನಂತೆ ನಿಲ್ಲುತ್ತದೆ. ಸುಕ್ಕು ಇಲ್ಲ, ಸುಳಿ ಇಲ್ಲ, ಹುರಿ ತಿರುಗುವುದಿಲ್ಲ. ಹರಿತವಾದ ಭಾವವಿದ್ದಲ್ಲಿ ತೊಡಕಿಲ್ಲದೆ ಭಾಷೆ ಬರುತ್ತದೆ. ಅದನ್ನೇ ಧಾರೆ ಎನ್ನುತ್ತಾರೆ. ಭಾವ ದಾರ್ಢ್ಯವಿದ್ದ ಹೊರತು ಈ ಧಾರೆ ಇರುವದಿಲ್ಲ. ಈ ಧಾರೆ ಇದ್ದಲ್ಲಿ ಅದು ಇರುತ್ತದೆ. ಗಾಂಧೀಜಿಯೇ ಅಂದಿದಾರೆ: 'ಅನುಭವವಿಲ್ಲದ ಅಪ್ರಮಾಣವಾದ ಮಾತು ಎಷ್ಟು ಉದಾತ್ತವಾದರೂ ಅದರಲ್ಲಿ ಜೀವವಿಲ್ಲ, ಅದು ಜನರ ಮನಸಿಗೆ ಹಿಡಿಸದು; ಅವರ ಎದೆಗೆ ತಟ್ಟದು. ಅದೇ ಅನುಭವದಿಂದ ಬಂದ ಮಾತು ಪ್ರಮಾಣಕ್ಕೆ ತಿಳಿದ ಸತ್ಯ. ಅದು ಫಲಕಾರಿ.'

ಅಂತೇ ಗಾಂಧೀಜಿಯ ಶೈಲಿಯಲ್ಲಿ ಒಂದು ಸೆಳೆತವಿದೆ, ಒಂದು ಬಗೆಯ ಗಾಂಭೀರ್ಯವಿದೆ. ಬೈಬಲಿನ ಹಾಗಿದೆ ಇವರ ಶೈಲಿ ಎಂದು ಇಂಗ್ಲೀಷು ಜನ ಹೇಳುವುದುಂಟು. ಶೈಲಿಯು ಕವಿಯ ಅಂತರಂಗ, ಆತನ ಮುಖ. ಗಾಂಧೀಜಿಯ ಶೈಲಿಯಲ್ಲಿ ಬೈಬಲು ಕಂಡರೆ ಅವರ ಅಂತರಂಗ ಸತ್ಯಪೂರ್ಣವಾದುದು, ಕ್ರಿಸ್ತನಹಾಗೆ ಎಂದಂತೆ.

ಬೈಬಲಿನಲ್ಲಿ ಗಾಂಧೀ ಸಾಹಿತ್ಯದಲ್ಲಿದ್ದಹಾಗೆ ವಿಷಯಬಾಹುಳ್ಯವಿಲ್ಲ. ಅದರ ಸರಳತೆ, ಸಂಗ್ರಹಶಕ್ತಿ ಅನುಭವದ ನೈಶಿತ್ಯ ಎಲ್ಲಾ ಇದರಲ್ಲಿದೆ. ಇದರ ತರ್ಕದ ರೀತಿ, ಶಾಸ್ತ್ರೀಯ ದೃಷ್ಟಿ ಅದರಲ್ಲಿಲ್ಲ. ಅದರ ಪವಾಡಗಳಲ್ಲಿ ಕಾಣದ ಒಂದು ತೂಕ ಇದರಲ್ಲಿದೆ. ಕೆಲವರು ಗಾಂಧೀಜಿಯ ಶೈಲಿಯನ್ನು ಗ್ರೀಸ್ ದೇಶದ ಪ್ಲೇಟೋಗೆ ಹೋಲಿಸಿದಾರೆ. ಭಾವದ ಆಳದಲ್ಲಿ ಕ್ರಿಸ್ತನಿಗೆ ಸರಿ ಎಂದಿದಾರೆ. ದಯಾರಸದಲ್ಲಿ ಸಾಧು ಫ್ರಾನ್ಸಿಸ್‌ಗೆ, ಕಿರಿಮಾತಿನ ನಡಿಗೆಯಲ್ಲಿ ರಷ್ಯಾದೇಶದ ಚೆಕವ್‌ಗೆ ಹೋಲಿಸಿದಾರೆ. ಸಂವಾದದಲ್ಲಿ ಸಾಕ್ರಟೀಸನ ಹಾದಿ ಇವರದು ಎಂದಿದಾರೆ. ಗಾಂಧೀಜಿಯ ಧರ್ಮ

ಸ್ಫೂರ್ತಿ ಇಂಥ ಇಂಥ ಮೂಲಗಳಿಂದ ದೊರಕಿತು ಎಂಬುದನ್ನು ಅವರೇ ಹೇಳಿದಾರೆ. ಸಾಹಿತ್ಯದಲ್ಲಿ ಹಾಗೆ ಅವರಿಗೆ ಯಾರೂ ಹಾದಿ ತೋರಿಸಿದಂತಿಲ್ಲ. ಅದು ಸಹಜವಾಗಿಯೇ ಬಂದ ಗುಣ. ಅದರಲ್ಲಿ ಬುದ್ಧನ ಉಪಮಾನ ಪದ್ಧತಿಯ ಗುರುತು ಇದೆ. ಭಾಗವತ ಸಂಪ್ರದಾಯದ ವಿನಯವಿದೆ. ಕಬೀರ ಅಕಬರರ ಧರ್ಮವೈಶಾಲ್ಯವಿದೆ. ಶಂಕರಾಚಾರ್ಯರ ತರ್ಕ, ರಾಮಾನುಜನ ಪ್ರಪತ್ತಿ, ತುಲಸೀದಾಸನ ಗಾಢಭಕ್ತಿ, ಇವೆಲ್ಲದರ ಜೊತೆಗೆ ಇದಿರುಪಕ್ಷದವರು ಹೇಳಿದುದೂ ನಿಜವೇಕೆ ಆಗಬಾರದು ಎಂಬ ಅನಾಸಕ್ತಿ—ಎಲ್ಲವೂ ಅದರಲ್ಲಿ ಕಾಣುತ್ತವೆ. ಸಂಗ್ರಹಶಕ್ತಿ, ನಿರ್ಭಯಗಳಲ್ಲಿ ಸರ್ವಜ್ಞನ ಹಾಗೆ. ಮಾತು ಬಳಸುವ ತೂಕದಲ್ಲಿ ಫ್ರೆಂಚ ಸಾಹಿತಿ ಮೋಟರ್ ಲಿಂಕನ‌ಹಾಗೆ. ಒಟ್ಟಿನಲ್ಲಿ ಗಾಂಧೀಜಿ ಗಾಂಧೀಜಿಯ ಹಾಗೆ. ಅವರ ಹಾಗೆ ಮತ್ತೊಬ್ಬರಿಲ್ಲ.

ಮಾತು ಗುಂಡಿನಂತೆ ಎಂದು ಮೊದಲೇ ಹೇಳಿತು. ಮೇಯೋ ಎಂಬಾಕೆ ಹಿಂದುಸ್ಥಾನವನ್ನು ಅಸಹ್ಯವಾಗಿ ವರ್ಣಿಸಿ ಒಂದು ಪುಸ್ತಕ ಬರೆದಾಗ ಅವರು ಮಾಡಿದ ವಿಮರ್ಶೆ ಓದಿದರೆ ಆ ಗುಂಡಿನೇಟು ಗೊತ್ತಾಗುತ್ತದೆ. ಅದನ್ನು Drain Inspector's Report- ಚರಂಡಿ ಕೊಚ್ಚೆಯ ಪರೀಕ್ಷೆಯ ವರದಿ—ಎಂದರು. It is a book which no European and every Indian should read- ಈ ಪುಸ್ತಕ ಯಾವ ಐರೋಪ್ಯನೂ ಓದಬಾರದುದು, ಎಲ್ಲ ಭಾರತೀಯರೂ ಓದಬೇಕಾದುದು—ಎಂದು ಒಂದೇ ವಾಕ್ಯದಲ್ಲಿ ಅವತಾರ ಮುಗಿಸಿಬಿಟ್ಟರು. ಆ ವಾಕ್ಯದಲ್ಲಿ ಅವರ ಪ್ರಾಮಾಣಿಕತೆಯೂ ದೇಶಪ್ರೇಮವೂ ಎರಡೂ ಕಾಣುತ್ತವೆ. ಯಾರೋ ಕುತರ್ಕ ಮಾಡಿ ಪತ್ರ ಬರೆದರೆ ಅದನ್ನು Snares of Satan— ಕಲಿಯ ಜಾಲ— ಎಂದರು. ಇಂಥ ಪ್ರಯೋಗ ಮನಸಿಗೆ ನೆಟ್ಟು ನೆನಪಿನಲ್ಲಿ ನಿಲ್ಲುತ್ತವೆ. ರವೀಂದ್ರರು ಖಾದೀ ಚಳುವಳಿಯ ಬಗ್ಗೆ ಪರದೇಶೀ ಬಟ್ಟೆಯ ಬಹಿಷ್ಕಾರದ ಬಗ್ಗೆ ಗಾಂಧೀಜಿಗೆ ಎಚ್ಚರಿಕೆ ಕೊಟ್ಟಾಗ ಅವರನ್ನು Great Sentinel- ಎಂದು ಕರೆದು ತಮ್ಮ ವಿನಯ ತೋರಿಸಿದರು. Himalayan Blunder- ಹಿಮಾಚಲದಂಥ ಅಪರಾಧ, Fallen Sisters- ಪತಿತ ಸೋದರಿಯರು,

ಸತ್ಯಶೋಧನೆ ಮುಂತಾದ ಪ್ರಯೋಗ ನಮ್ಮ ಬಳಿಕೆಯಲ್ಲಿ ನುಸುಳಿಕೊಂಡಿವೆ.

ಎರಡೇ ಮಾತಿನಲ್ಲಿ ಬ್ರಹ್ಮಾಂಡದಷ್ಟು ಅರ್ಥವನ್ನು ತುಂಬಿಹೇಳುವ ಸಂಗ್ರಹಪದ್ಧತಿ ನಮಗೆ ಹೊಸದಲ್ಲ. ಸರ್ವಜ್ಞ ಈ ಕಲೆಯಲ್ಲಿ ನಮಗೆ ಗುರು. ಎಲ್ಲರೂ ಅನುಭವಿಸಿ ತಿಳಿದ ಉಪಮಾನಗಳು ಅವನ ಇನ್ನೊಂದು ಗುಣ. ಇವೆರಡೂ ಗುಣ ಗಾಂಧೀಜಿಯಲ್ಲಿ ಕಾಣುತ್ತವೆ. ಅನುಭವಕ್ಕೆ ನಿಲುಕುವ ದೃಷ್ಟಾಂತ ಕೊಡುವದು ಜನಪದ ಸಾಹಿತ್ಯದ ಲಕ್ಷಣ. ಸಂಗ್ರಹದ ಶಕ್ತಿ ಮಾತ್ರ ಸರ್ವಜ್ಞನ ಜಾತಿಯು ಸೊತ್ತು. Free love is Dog's love- ನಿರ್ಬಂಧವಿಲ್ಲದ ಸ್ತ್ರೀಪ್ರೇಮ 'ನಾಯಿಕಾಮ, ಎಂದಾಗ ಸ್ವೈರ ವೃತ್ತಿಯ ಬಗ್ಗೆ ಹೇಳಬೇಕಾದುದು ಏನೂ ಉಳಿಯಲಿಲ್ಲ. ನವ ನಾಗರಿಕ ತರುಣಿಯನ್ನು Juliet to half a dozen Romeos- ಎಂದಾಗ ಹೊಸಕಾಲದ ಬೆಡಗುಗಾತಿಯ ಮಾಯಕಾರಿತನಕ್ಕೆ ಅಳಿಸಲಾರದ ಮಸಿ ಬಳಿದರು. Hindu is a coward, Mussalman is a bully- ಹಿಂದುವು ಹೇಡಿ, ತುರಕನು ಜಗಳಗಂಟ ಎಂದು ಹಿಂದುಸ್ತಾನದ ಸ್ಥಿತಿಯನ್ನು ವರ್ಣಿಸಿದರು. ನಮ್ಮ ನಾಡಿನ ಕುಂದುಕೊರತೆಗಳಿಗೆ, ದೌರ್ಭಾಗ್ಯಕ್ಕೆ ಇದಲ್ಲದೆ ಬೇರೆ ಸೂತ್ರ ಏನಿದೆ? Man is a fallen angel- ಮಾನವನು ಭ್ರಷ್ಟನಾದ ದೇವತೆ, ಎಂದು ಐರ್ಲೆಂಡಿನ ಎ. ಇ. ಕವಿ ಹೇಳಿದ್ದಾನೆ. ಹಾಗೆಯೇ ಗಾಂಧೀಜಿ Birth is a fall- ಜನ್ಮವೆಂದರೆ ಪತನ ಎಂದು ಹೇಳಿ ಅದೇ ಮಾತನ್ನೇ ಇನ್ನೊಂದು ರೀತಿಯಲ್ಲಿ ಆಡಿದಾರೆ. Good is a snail, Evil has wings- ಪುಣ್ಯವು ಮಣ್ಣಿನ ಹುಳ; ಪಾಪವು ಹಾರುವ ಹಕ್ಕಿ ಎಂದು ಒಂದು ಕಡೆ ಪುಣ್ಯಪಾಪ ಕರ್ಮಗಳ ಫಲ ಸಿಗುವ ಕಾಲ ಪ್ರಮಾಣವನ್ನು ತೋರಿಸಿದರು. ಗಾಂಧೀಜೀ ಬರೆವುದು ಪದ್ಯವಲ್ಲ, ಗದ್ಯ. ಗದ್ಯದಲ್ಲಿ ಸಂಗ್ರಹ ಗುಣ ಬರುವುದು ಎಷ್ಟು ಕಷ್ಟವೆಂಬದು ಗದ್ಯ ಬರೆಯುವವರಿಗೇ ಗೊತ್ತು. ಗದ್ಯದಲ್ಲಿ ಆ ಗುಣ ಇದ್ದರೂ ಛಂದಸ್ಸಿನ ನೆರವಿಲ್ಲದೆ ಅದು ನೆನಪಿನಲ್ಲಿ ನಿಲ್ಲುವುದು ಸಾಧ್ಯವಿಲ್ಲ.

ಗಾಂಧೀಜೀ ಎಂಥ ಗದ್ದಲದ ನಡುವೆಯೂ ತಾವು ಬರೆಯಬೇಕಾದುದನ್ನು ಬರೆಯುತ್ತಾರೆ. ರೈಲಿನಲ್ಲಿ ಪ್ರವಾಸ ಮಾಡುತ್ತಿರುವಾಗಲೂ

ಬರೆಯುತ್ತಾರೆ. ಕವಿಗಳಿಗೆ ಬೇಕಾಗುವ ಯಾವ ಸಲಕರಣೆಯೂ ಬೇಡ. ಕಾಗದ ಲೇಖನಿ ಎರಡು ಇದ್ದರೆ ಸಾಕು. ಅವರ ವೇಗವೂ ಹಾಗೆಯೇ. ಅವರು ನಡೆದರೆ ಹೇಗೆ ತೇಲಿಕೊಂಡು ಹೋಗುತ್ತಾರೆಯೊ ಹಾಗೆಯೇ ಬರೆಯುವಾಗಲೂ.

ಗಾಂಧೀಜಿಯ 'ಸತ್ಯಶೋಧನೆ' ಅವರ ಶೈಲಿಗೆ ಮಾದರಿಯಾಗಲಿ, ನಮಗೆ ಆ ಗ್ರಂಥವನ್ನು ಮೂಲರೂಪದಲ್ಲಿ ಓದುವ ಭಾಗ್ಯವಿಲ್ಲ. ಗಾಂಧೀಜೀ ಬರೆದ ಮೂಲ ಗ್ರಂಥ ಗುಜರಾತಿಯಲ್ಲಿದೆ. ಇಂಗ್ಲೀಷಿನಲ್ಲಿ ಓದಿದರೂ ಮಹದೇವ ದೇಸಾಯಿಯ ಭಾಷಾಂತರವನ್ನೆ. ಕನ್ನಡದ ಭಾಷಾಂತರ ಹಿಂದಿಯಿಂದ ಮಾಡಿದ್ದು. ಗುಜರಾತಿಯ ಗ್ರಂಥ ಅಚ್ಚಾದ ೧೫ ದಿನದಲ್ಲೇ ೧೦ ಸಾವಿರ ಪ್ರತಿ ಮಾರಿಹೋದವು. ಹಿಂದುಸ್ತಾನದಲ್ಲಿ ಇಷ್ಟು ಬೇಗ ಅಷ್ಟು ಪ್ರತಿ ಮಾರಿದ ಪುಸ್ತಕ ಇದೊಂದೇ. ಅದರಲ್ಲಿ ಗಾಂಧೀಜೀ ತಮ್ಮ ಜೀವನವನ್ನೇ ವಿಮರ್ಶೆ ಮಾಡಿಕೊಂಡಿದಾರೆ. ಕರ್ಮಸಾಕ್ಷಿಯಂತೆ ತಮ್ಮ ಇಡೀ ಬಾಳನ್ನು ಹೊರಗೆ ನಿಂತು ನೋಡಿ ಅದರ ದಿಣ್ಣೆ ತಗ್ಗುಗಳನ್ನು ತೋರಿಸಿದಾರೆ. ಸತ್ಯ ಅಹಿಂಸೆಗಳು ತಮ್ಮ ಗಜಕಡ್ಡಿ. ತಮ್ಮ ಬಾಳಿನಲ್ಲಿ ಈ ತತ್ವ ಎಲ್ಲಿ ಮೂಡಿಬಂದವು, ಎಲ್ಲಿ ತಮ್ಮ ದುರ್ಬಲತೆ ಅದನ್ನು ಮೂಡಗೊಡಲಿಲ್ಲ ಎಂಬುದನ್ನು ಪ್ರಾಮಾಣಿಕತನದಿಂದ ತಿಳಿಸಿದಾರೆ. ನಿಜವಾದ ಆತ್ಮಕಥೆಗೆ ಇರಬೇಕಾದ ನಿಸ್ಸಂಕೋಚವು ಅದರಲ್ಲಿ ಪುಟಪುಟಕ್ಕೂ ಕಾಣುತ್ತದೆ. ಗಾಂಧೀಜಿಯ ಬಾಳಿನಲ್ಲಿ ಮುಚ್ಚುಮರೆಗೆ ಎಡೆಯೇ ಇಲ್ಲ. ಈ ಸ್ವಭಾವ ಅವರ ಸಾಹಿತ್ಯದಲ್ಲೂ ಒಡೆದು ಕಾಣುತ್ತವೆ. ಆತ್ಮಕಥೆಯಲ್ಲಾಗಲಿ ಬೇರೆ ಬರೆಹದಲ್ಲಾಗಲಿ ಸಂಕೋಚವಿಲ್ಲ, ಅಂಜಿಕೆಯಿಲ್ಲ. ನಮ್ಮ ಸಾಹಿತ್ಯದ ಹೊಳೆ ಈಗ ಬೇರೆ ದಾರಿಯಲ್ಲಿ ಹರಿಯತೊಡಗಿದೆ. ಗಾಂಧೀಜಿಯ ಸಾಹಿತ್ಯದ ನಿರ್ಭೀತಿಸತ್ಯ ಅದರ ತಲವನ್ನು ಬದಲು ಮಾಡಿದೆ.

ಗುಜರಾತಿ ಸಾಹಿತ್ಯಕ್ಕಂತೂ ಅವರ ಬರೆಹ ಹೊಸದೊಂದು ಯುಗವನ್ನೇ ದಾನಮಾಡಿದೆ. ಗಾಂಧೀಜೀ ಗುಜರಾತಿಯ ಗದ್ಯಕ್ಕೆ ತಂದೆಯಿದ್ದ ಹಾಗೆ. ಗದ್ಯದಲ್ಲಿ ಅವರ ಹಾಗೆ ಗಾಂಭೀರ್ಯ ತುಂಬಿದವರು ಯಾರೂ ಇಲ್ಲ.

ಗುಜರಾತೀ ನುಡಿಯಲ್ಲಿ ಮೊದಲು ಒಂದು ದಾರಿ, ಒಂದು ಕಟ್ಟು ಇರ ಲಿಲ್ಲ. ಮನಸಿಗೆ ಬಂದಹಾಗೆ ಬರೆಯುತ್ತಿದ್ದರು. ಪದಗಳ ಉಚ್ಚಾರದಲ್ಲೂ ಒಂದು ಕ್ರಮವಿರಲಿಲ್ಲ. ಶಕಾರ ಸಕಾರಗಳ ಭೇದವೇ ಕಂಡುಬರುತ್ತಿರ ಲಿಲ್ಲ. ಹ್ರಸ್ವ ದೀರ್ಘಗಳ ಮಾತು ಹಾಗಿರಲಿ–ಪದ್ಯದಲ್ಲಿ ಗಣಕ್ಕೂ ಕಟ್ಟು ಇರಲಿಲ್ಲ. ಗಣಕ್ಕೆ ನಾಲ್ಕೇಸು ಐದೇನು ಮನಸಿಗೆ ಬಂದಷ್ಟು ಮಾತ್ರ. ಒಣ ಪಾಂಡಿತ್ಯ ಬೆಳೆದು ಶಬ್ದಾಡಂಬರವೇ ಶೈಲಿ ಆಗಿತ್ತು. ಗುಜರಾತೀ ನುಡಿಗೆ ಏಕರೂಪ ಇರಲಿಲ್ಲ. ಅಹಮದಾಬಾದಿನವರ ಗುಜರಾತೀ ಸೂರತ್ತಿನವರಿಗೆ ತಿಳಿಯುತ್ತಿರಲಿಲ್ಲ. ಕಾಠಿಯವಾಡದ ಜನರಿಗೆ ಇವೆರಡೂ ತಿಳಿಯುವ ಹಾಗೆ ಇಲ್ಲ. ಸಾಲದ್ದಕ್ಕೆ ಪಾರ್ಸೀ ಜನರ ಕೈಗೆ ಸಿಕ್ಕ ಗುಜ ರಾತೀ–ಅವರೂ ಮಾತಾಡುವದು ಗುಜರಾತಿ, ಅವರ ಓದುಬರೆಹವೂ ಅದೇ–ಹೈದರಾಬಾದಿನ ತೆಲಗು ಕನ್ನಡಗಳಂತೆ ಅಡಿಬಿಡಂಗಿಯಾಗಿತ್ತು. ಶಬ್ದಗಳ ಸರಿಯಾದ ರೂಪ ಮರೆತುಹೋಗಿ ಶಬ್ದಸಾಂಕರ್ಯ ಬೆಳೆದಿತ್ತು. ಇದನ್ನೇ ಶೋಧಿಸಿ ಪರಿಷ್ಕರಿಸಿ ಗುಜರಾತೀ ನಿಘಂಟು ಒಂದನ್ನು ಸಿದ್ಧ ಮಾಡಿಸಿದರು. ಶಬ್ದರೂಪಗಳನ್ನೂ ಅವುಗಳ ಸರಿಯಾದ ಅಕ್ಷರಕ್ರಮ ವನ್ನೂ ನಿರ್ಣಯಿಸಿಸರು. ಅವರ ಗುಜರಾತೀ ವಿದ್ಯಾಪೀಠ ಈ ಕೆಲಸ ವನ್ನು ನಿರ್ವಹಿಸಿತು. ಆ ನಿಘಂಟು ಅಚ್ಚಾಗಿದೆಯೋ ಇಲ್ಲವೋ–ಅಂತು ೬೦ ಸಾವಿರ ಪದಗಳು ಅದರಲ್ಲಿ ಬಂದಿವೆ ಎಂದು ಅದನ್ನು ನೋಡಿದವರು ಬರೆದಿದಾರೆ.

ಸಾಹಿತ್ಯವೆಂದರೆ ಏನೆಂಬುದೇ ಜನ ಮರೆತಿದ್ದರು. ರಸದಿಂದ ಕೂಡಿದ್ದೇ ಸಾಹಿತ್ಯ. ಗಂಭೀರವಲ್ಲದುದೇ ರಸ. ಹೀಗೊಂದು ಸಂಪ್ರದಾ ಯವೇ ಬಿತ್ತು. ಇಂಥ ಸೂತ್ರವನ್ನು ನಂಬದ ಸಾಹಿತ್ಯದಲ್ಲಿ ಸಂಯಮ ನಿಗ್ರಹಕ್ಕೆ ತಾವು ಎಲ್ಲಿಯದು? ಈ ಗದ್ದಲದಲ್ಲೇ ಶಾಸ್ತ್ರ ವಾಙ್ಮಯದಿಂದ ದೂರ ಹಾರಿಹೋಯಿತು. ಕಾವ್ಯ–ಸಾಹಿತ್ಯ ಬರೀ ವಿನೋದವಾಯಿತು. ಗಂಭೀರವಿಷಯಗಳ ಬಗ್ಗೆ ಬರೆವವರೇ ಇರಲಿಲ್ಲ. ಇದರಿಂದ ಪದ ಸಂಪತ್ತಿ ಬೆಳೆಯಲಿಲ್ಲ. ಸೂಕ್ಷ್ಮವಾದ ಅರ್ಥಭೇದಗಳನ್ನು ತಿಳಿಸುವ ಶಬ್ದ ಹುಟ್ಟಿಬರಲಿಲ್ಲ. ಗಾಂಧೀಜೀ ಲೇಖನ ಕಾರ್ಯಕ್ಕೆ ಕೈಹಾಕಿದ ಮೇಲೆ

ಗುಜರಾತೀ ಸಾಹಿತ್ಯದಲ್ಲಿ ದೊಡ್ಡ ಸುಂಟರಗಾಳಿ ಎದ್ದಿತು. ಶಬ್ದಾಡಂಬರದ ಪಾಂಡಿತ್ಯ, ಅಲಂಕಾರದ ಕಾವ್ಯ ಮಾಯವಾದವು. ಭಾಷೆಗೆ ಸರಳತೆಯ ಉಡಿಗೆ ತೊಡಿಸಿದರು; ಅದರ ಜೊತೆಯಲ್ಲೇ ಗಾಂಭೀರ್ಯದ ರುಮಾಲನ್ನೂ ಇಟ್ಟರು. ಎಲ್ಲರಿಗೂ ತಿಳಿಯುವ ಹಾಗೆ ಬರೆಯುವ ಹಂಬಲದಲ್ಲಿ ಭಾಷೆಯನ್ನು ಗ್ರಾಮ್ಯದ ಹೊಲಸಿಗೆ ಎಳೆಯಲಿಲ್ಲ. ರೂಢಿಯ ನುಡಿಗೆ ಒಂದು ಸಂಸ್ಕಾರ ಕೊಟ್ಟು ಅದಕ್ಕೆ ಒಂದು ಮಟ್ಟವನ್ನು ಕಟ್ಟಿಸಿದರು. ಅವರು ಬರೆದ ವಿಷಯಗಳಾದರೂ ನಾನಾ ಬಗೆಯವು. ಧರ್ಮ, ರಾಜಕಾರಣ, ಅರ್ಥಶಾಸ್ತ್ರ, ವಿಮರ್ಶೆ, ಅಹಿಂಸೆ, ಸತ್ಯ, ಬ್ರಹ್ಮಚರ್ಯ, ದೇವರು, ವರ್ಣಾಶ್ರಮ—ಲೆಕ್ಕವಿಲ್ಲದಷ್ಟು ವಿಷಯ. ಗುಜರಾತಿ ವೀರರಸಕ್ಕೆ ಯೋಗ್ಯವಲ್ಲ ಎಂದು ಯಾರೋ ಪಂಡಿತರು ಹೇಳಿದ್ದಿರಬೇಕು. ಆ ನಂಬಿಗೆ ಗುಜರಾತೀ ಜನರಲ್ಲಿ ಬೇರೂರಿತ್ತು. ಅದು ಗಾಂಧೀಜೀ ಬಂದ ಮೇಲೆ ಎಲ್ಲಿ ಮುಳುಗಿ ಹೋಯಿತೋ. ಅವರ ಬರೆಹದಲ್ಲಿ ಕಾಣುವ ವೀರರಸ ನಿಗ್ರಹದಿಂದ ಕೂಡಿದ್ದು. ಅದರಲ್ಲಿ ರಣಭೇರಿಗಳ ಭೋಂಕಾರವಿಲ್ಲ. ಉಚ್ಚಸಂಸ್ಕೃತಿಯ ಸಂಕಲ್ಪ ಕಾಣಬರುತ್ತದೆ. ೧೯೨೨ರಲ್ಲಿ ಗಾಂಧೀಜಿಗೆ ಶಿಕ್ಷೆಯಾದಾಗ ನ್ಯಾಯಾಲಯದಲ್ಲಿ ಅವರು ನಡೆದುಕೊಂಡ ರೀತಿ, ಅವರು ಆಡಿದ ಮಾತು ವೀರರಸದ ಉದಾತ್ತ ದೃಶ್ಯದಂತಿದೆ. ಯಾವ ಧೀರೋದಾತ್ತ ನಾಯಕನು ಅಂಥ ಸಂದರ್ಭದಲ್ಲಿ ಅದಕ್ಕಿಂತ ಚೆನ್ನಾಗಿ ನಡೆದುಕೊಂಡಾನು ? ಇಂಥ ಸಂದರ್ಭ ನಮ್ಮ ಇತಿಹಾಸದಲ್ಲಿ ಒಂದೇ ಒಂದು ಕಡೆ ಬರುತ್ತದೆ. ಅಲೆಗ್ಝಾಂಡರ್ ಪಂಜಾಬಿನ ದೊರೆ ಪೌರವ (Porus)ನನ್ನು ಗೆದ್ದಾಗ ಸೋತ ದೊರೆ ಸೆರೆಸಿಗುತ್ತಾನೆ. ಅವನನ್ನು ಅಲೆಗ್ಝಾಂಡರನ ಬಳಿಗೆ ಕರೆತರುತ್ತಾರೆ. ಆಗ ಗೆದ್ದ ದೊರೆ ಕೇಳಿದನಂತೆ: 'ಅಯ್ಯಾ, ನಿನ್ನೊಡನೆ ಹೇಗೆ ಮಾತಾಡಲಿ' ಎಂದು. ಸೋತು ಸಾವಿಗೆ ಸಿದ್ಧನಾಗಿದ್ದ ಪೌರವ ಹೇಳಿದನಂತೆ—'ದೊರೆಯೊಡನೆ ಮಾತಾಡುವ ಹಾಗೆ.' ಆ ಧೈರ್ಯ, ಆ ಶಾಂತಿಗೆ ಮೆಚ್ಚಿ ಅಲೆಗ್ಝಾಂಡರ್ ಅವನ ರಾಜ್ಯ ಅವನಿಗೆ ಕೊಟ್ಟು ಬಹಳ ಮರ್ಯಾದೆ ಮಾಡಿದನಂತೆ. ಅಲೆಗ್ಝಾಂಡರ್ ವೀರಗುಣಪಕ್ಷಪಾತಿ. ಆ ಸಂದರ್ಭದ ಎಲ್ಲ ವಿವರಗಳೂ ಇಲ್ಲಿ ಹೊಂದವು. ಆದರೆ ಅದೇ ಜೀವ

ಇಲ್ಲಿ ಮತ್ತೆ ಅಂಥವೇ ಮಾತು ಆಡುತ್ತಿದೆ. ಗಾಂಧೀಜೀ ಇನ್ನೂ ಒಂದು ಹೆಜ್ಜೆ ಮುಂದೆ. 'ಹರಿಯ ಧ್ಯಾನ ಬಿಡು, ಇಲ್ಲದಿರಲು ಕೊಂದುಹಾಕುತ್ತೇನೆ' ಎಂದು ತಂದೆಯೇ ಗರ್ಜಿಸಿದಾಗ 'ಬಿಡಲಾರೆ, ಪ್ರಾಣ ಹೋದರೂ ಸರಿ' ಎಂದು ಹೇಳಿದ ಪ್ರಹ್ಲಾದನಂತೆ. 'ರಾಜದ್ರೋಹವು ನನ್ನ ಧರ್ಮ. ಈಗ ನನ್ನನ್ನು ಬಿಟ್ಟರೆ ಮತ್ತೆ ರಾಜದ್ರೋಹ ಹರಡುತ್ತೇನೆ' ಎಂದು ಗಾಂಧೀಜಿ ಹೇಳಿದರು.

ಗುಜರಾತೀ ಸಾಹಿತ್ಯದಲ್ಲಿ ಈ ವೀರರಸ ತುಂಬಿ ಬರದಿದ್ದರೆ ಬಾರ್ಡೋಲಿಯ ಸತ್ಯಾಗ್ರಹದಂಥ ಮಹಾ ಸಾಹಸ ನಡೆಯುತ್ತಿರಲಿಲ್ಲ. 'ನವಜೀವನ' ಜನರಲ್ಲಿ ನವಜೀವನವನ್ನೇ ಹರಿಯಿಸಿತು. ಹೇಡಿಗಳೂ ದುರ್ಬಲರೂ ಆದ ಪಾಮರ ಜನ ಕಡುಗಲಿಗಳಂತೆ ಆ ಚಳುವಳಿ ನಡೆಸಿದರು. ಹಿಂದುಸ್ತಾನದ ಇತಿಹಾಸದಲ್ಲಿ ಅದೊಂದು ಚಿರಸ್ಮರಣೀಯ ಪ್ರಸಂಗವಾಯಿತು.

ವೀರರಸಕ್ಕೆ ಹೊಸದೊಂದು ಬಣ್ಣ ಕೊಟ್ಟಂತೆ ಭಕ್ತಿರಸಕ್ಕೂ ಒಂದು ಪುಟಕೊಟ್ಟಿದಾರೆ. ಅವರ ಬರೆಹದಲ್ಲಿ ಆ ಭಕ್ತಿಯ ವಿನಯ ಎಲ್ಲೆಲ್ಲೂ ಒಡೆದುಕಾಣುತ್ತದೆ. ನಮಗೆ ಬರುವ ದುಃಖ–ಸುಖ ಎಲ್ಲವೂ ದೇವರ ಚಿತ್ತ. ಇದು ದುಃಖ, ಇದು ಸುಖ ಎಂದು ತಿಳಿದರೆ ನಮ್ಮ ಭಕ್ತಿ ಕುಂಟುತ್ತದೆ. ನಮಗೆ ಮೋಕ್ಷ ಬೇಕು ಎಂದು ಬಯಸುವದು ಕೂಡ ಒಂದು ರಾಗ. ಅದು ಹರಿಯ ಚಿತ್ತ. ನಮ್ಮ ಕೆಲಸ ಅನಾಸಕ್ತರಾಗಿ ಬಾಳು ನಡೆಸುವುದು ಎಂಬ ಪ್ರಪತ್ತಿಯ ಭಾವ ಗಾಂಧೀಜಿಗೆ ಇರುವ ಹಾಗೆ ಇದೆ. ದೇವರನ್ನು ಕಾಡಿಬೇಡುವ ಭಕ್ತಿ ಅವರ ಪಾಲಿಗೆ ಒರಟುತನ. 'ನಡುನೀರೊಳಗೆ ಕೈಯ ಬಿಡುವರೇ' ಎಂಬ ಮೊರೆ ಇಷ್ಟು ಹೊತ್ತಿನವರೆಗೂ ಹಿಡಿದು ನಡೆಸಿದ ಕೈಯಲ್ಲಿಲ್ಲದ ಆನಂದ ಆಚೆಯ ದಡದಲ್ಲಿ ಏನೋ ಇದೆ ಎಂಬ ಭಾವನೆಯಿಂದ ಬಂದದ್ದು. ಆ ಕೈಗೆ ನಡುನೀರೊಳಗೆ ಮುಳುಗಿಸುವುದೇ ಚೆಂದ ಕಂಡರೆ ನಮಗೂ ಅದೇ ಚೆಂದ. 'ನಿಮ್ಮ ಆರೋಗ್ಯ ಕೆಡುತ್ತಿದೆ. ನೀವು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಬೇಕು. ದೇಶಕ್ಕೆ ನಿಮ್ಮಿಂದ ಆಗಬೇಕಾದ ಉಪಕಾರ ಬಹಳ ಇದೆ' ಎಂದು ಯಾರಾದರೂ ಹೇಳಿದರೆ 'ಈ ದೇಹವನ್ನು ಹೇಗೆ ಉಪಯೋಗಿಸಿಕೊಳ್ಳಬೇಕೋ,

ಯಾವಾಗ ಅದರ ಕೆಲಸ ಮುಗಿಸಬೇಕೋ ಅವನಿಗೆ ಗೊತ್ತಿದೆ' ಎನ್ನು ತ್ತಾರೆ ಗಾಂಧೀಜೀ.

ಗಾಂಧೀಜಿಯ ನಿಗ್ರಹ ಅವರು ಗಂಡು ಹೆಣ್ಣಿನ ಸಂಬಂಧದ ಬಗ್ಗೆ ಬರೆವಾಗ ಕಂಡಹಾಗೆ ಉಳಿದ ಕಡೆ ಗೊತ್ತಾಗುವುದಿಲ್ಲ. ಗಾಂಧೀಜೀ ಮೂವತ್ತು ವರುಷಕ್ಕೆ ಮೀರಿ ಅಖಂಡವಾಗಿ ಬ್ರಹ್ಮಚರ್ಯ ಪಾಲಿಸಿ ದಾರೆ. ಅವರಿಗೆ 'ಮದುವೆ ಒಂದು ಪಾತಿತ್ಯ'. ಹೀಗಿದ್ದರೂ-ಅಥವಾ ಹೀಗಿದೆ ಎಂತಲೇ-ಅವರು ದಾಂಪತ್ಯ, ಗಂಡು ಹೆಣ್ಣಿನ ಕಾಮವಾಸನೆ ಮೊದಲಾದುದರ ಬಗ್ಗೆ ಬೇಕಾದಷ್ಟು ಬರೆದಿದಾರೆ. ಆದರೆ ಅವರು ಬರೆ ದುದು ಕಾಮಶಾಸ್ತ್ರವಲ್ಲ, ಸಂಯಮಶಾಸ್ತ್ರ. ಕಾಮರಾಜ್ಯವು 'ಬಣ್ಣದ ಮಾವಿನಕಾಯಿ, ತೋಟ ಶೃಂಗಾರ' ಎಂಬದು ಅವರ ಸಂಜಿಗೆ. ಮನು ಷ್ಯನ ಗುರಿ ಕಾಮಸಾಧನೆಯಲ್ಲ, ಇಂದ್ರಿಯನಿಗ್ರಹ. ಈ ದೃಷ್ಟಿಯಿಂದ ಅವರು ಬರೆದ ಲೇಖಗಳು ಎರಡು ಪುಸ್ತಕಗಳಷ್ಟು ಆಗಿವೆ. ಅದರಲ್ಲಿ ಒಂದೇ ಒಂದಾದರೂ ಹೊಲಸು ಪದವಿಲ್ಲ; ಓದುವಾಗ ಮನಸಿಗೆ ಎಲ್ಲೂ ಮೈಲಿಗೆ ಹತ್ತುವದಿಲ್ಲ. ಈ ವಿಷಯದ ಬಗ್ಗೆ ಇಷ್ಟು ಧಾರಾಳವಾಗಿ, ಛಿಡೆಯಿಲ್ಲದೆ ಬರೆದವರು ಕಡಮೆ. ಒಬ್ಬರಿಬ್ಬರು ಬರೆದಿದ್ದರೂ ಆ ಬರೆಹ ದಲ್ಲಿ ಕಾಮದ ನಾತ ಬಹಳವಾಗಿ ಓದುವುದೇ ಕಷ್ಟವಾಗುತ್ತದೆ.

ಭಾಷೆಯಲ್ಲಿ ಈ ನಿಗ್ರಹ, ಈ ತೂಕ ಬರಲು ಭಾವದ ನೈರ್ಮಲ್ಯವೇ ಮುಖ್ಯ ಕಾರಣ. ಅಂತರಂಗ ಚೆನ್ನಾಗಿದ್ದಾಗ ನಡೆವಳಿ ಚೆನ್ನಾಗಿಲ್ಲದೆ ಏನು? ಆದರೂ ಗಾಂಧೀಜೀ ಇದಕ್ಕಾಗಿ ತುಂಬಾ ಪ್ರಯತ್ನಪಟ್ಟಿದ್ದಾರೆ. ತಾವು ಸತ್ಯೋಪಾಸಕರು. ತಮ್ಮ ನುಡಿಯಲ್ಲಿ ಎಲ್ಲಿ ಅಸತ್ಯ ಹೊಕ್ಕೀತೋ, ತಮ್ಮ ಭಾವದಲ್ಲಿ ಎಲ್ಲಿ ಹಿಂಸೆ ನುಣಚಿಕೊಂಡೀತೋ ಎಂಬ ಎಚ್ಚರ ಅವ ರಿಗೆ ಸದಾ ಇದೆ. ಅವರಿಗೆ ಸಾಹಿತ್ಯವೂ ಒಂದು ಸಾಧನೆ. ತಮ್ಮ ಅನು ಭವವನ್ನು ಸಾಣೆ ಹಿಡಿದುಕೊಂಡಿದಾರೆ. ಅಂತಲೇ ಆ ಭಾಷೆಯಲ್ಲಿ ಕುದಿ ಸುವ ಕಾವೇರಿಸುವ ಗುಣವಿಲ್ಲ. ಮನಸ್ಸನ್ನು ಕರಗಿಸಿ ಕಡೆದು ಮೇಲ್ಮ ಟ್ಟಕ್ಕೆ ಒಯ್ಯುವ ಗುಣ ಇದೆ. ಅದರಲ್ಲಿ ಬೆಂಕಿಯಿಲ್ಲ, ಬೆಳಕಿದೆ.

ಅವರೇ ಹೀಗೆ ಬರೆದಿದಾರೆ ಆ ಎಚ್ಚರದ ಬಗ್ಗೆ. 'ನಾನು ಪತ್ರಿಕಾ ವ್ಯವಸಾಯವನ್ನು ವಿಲಾಸಕ್ಕಾಗಿ ಮೊದಲುಮಾಡಲಿಲ್ಲ. ನನ್ನ ಜೀವನ

ಸಂದೇಶವನ್ನು ತಿಳಿಸಲು ಅದು ಒಂದು ಸಾಧನೆ. ಅಹಿಂಸೆ-ಸತ್ಯಗಳ ಹೂವಾದ ಸತ್ಯಾಗ್ರಹ ಧರ್ಮವನ್ನು ಸಂಪೂರ್ಣ ನಿಗ್ರಹದಿಂದ ಮಾಡಿಯೂ ಆಡಿಯೂ ಕಲಿಸುವುದೇ ನನ್ನ ಉದ್ದೇಶ. ಅಹಿಂಸೆಗಿಂತ ಮಿಗಿಲಾದ ಸರ್ವದುಃಖನಿವಾರಿಣಿ ಮತ್ತೊಂದಿಲ್ಲ ಎಂದು ತೋರಿಸಲು ನಾನು ಆತುರನಾಗಿದ್ದೇನೆ. ನನ್ನ ಧರ್ಮ ಅದು. ಅಂತೆಯೇ ನಾನು ಬರೆಯುವಾಗ ಕ್ರೋಧ ಮತ್ಸರಗಳಿಗೆ ಎಡೆಕೊಡಲಾಗದು. ಸ್ವಾರ್ಥವಾಗಿಯೂ ಬರೆಯಲಾಗದು. ಕೇವಲ ಉದ್ರೇಕ ಹುಟ್ಟಿಸಲೆಂದು ಬರೆಯಲು ಸಲ್ಲದು. ವಾರವಾರವೂ ವಿಷಯಗಳನ್ನಾರಿಸುವಾಗ, ಶಬ್ದಗಳನ್ನು ಉಪಯೋಗ ಮಾಡುವಾಗ ಎಷ್ಟು ತೂಕ ಮಾಡಬೇಕಾಗುತ್ತದೆಯೋ; ಓದುಗರಿಗೆ ಹೇಗೆ ತಿಳಿಯಬೇಕು. ನನಗೆ ಅದೊಂದು ಸಾಧನೆ. ನನ್ನ ದೌರ್ಬಲ್ಯ ಅದರಲ್ಲಿ ತಿಳಿಯುತ್ತದೆ. ನನ್ನ ಮನಸ್ಸನ್ನು ನಾನೇ ನೋಡಿಕೊಳ್ಳಲು ಅದು ನೆರವಾಗುತ್ತದೆ. ಜಂಬದಿಂದ ಒಂದು ಮಾತು ವ್ಯಂಗ್ಯವಾಗಿ ಬರುತ್ತದೆ; ಸಿಟ್ಟಿನಿಂದ ಒಂದು ಪದ ಒರಟಾಗಿ ಬರುತ್ತದೆ. ಅನೇಕ ಸಲ ಹೀಗೆ ಆಗುತ್ತದೆ. ಇಂಥ ಕಳೆಯನ್ನೆಲ್ಲ ಪೈರಿನಿಂದ ತೆಗೆಯುವುದು ನನಗೆ ದೊಡ್ಡ ವಿಷಪರೀಕ್ಷೆಯೇ ಆಗುತ್ತದೆ. ಯಂಗ್ ಇಂಡಿಯಾದ ಬರಹ ತಕ್ಕಮಟ್ಟಿಗೆ ಗಂಭೀರವಾದ ವೇಷ ತೊಟ್ಟಿರುವುದನ್ನು ನೋಡಿ, ಫ್ರಾನ್ಸ್ ದೇಶದ ರೋಮೇರೋಲಾ ಅಂದಂತೆ ಓದುಗರೂ 'ಪರವಾ ಇಲ್ಲ ಈ ಮುದುಕ' ಅಂದಾರು. ಆದರೆ ಆ ಗಾಂಭೀರ್ಯ-ಆ ಸೌಜನ್ಯ ಕಷ್ಟಪಡದೆ ಬಂದಿಲ್ಲ. ಎಚ್ಚರದಿಂದಲೂ ಪ್ರಾರ್ಥನಾಬಲದಿಂದಲೂ ಬೆಳೆಸಿಕೊಂಡ ಗುಣ ಅದು.'

ಆದುದರಿಂದ ಅಲಂಕಾರವಿಲ್ಲದಿದ್ದರೂ ಆ ಸಾಹಿತ್ಯ ಅಂದವಾಗಿದೆ. ವ್ಯಕ್ತಿಪರಿಚಯದಲ್ಲಿ ಅವರದು ಎತ್ತಿದ ಕೈ. ಅವರ ಸೂಕ್ಷ್ಮ ನಿರೀಕ್ಷಣೆ ಅಲ್ಲಿ ಚೆನ್ನಾಗಿ ಕಂಡುಬರುತ್ತದೆ. ಸ್ವಾಮಿ ಶ್ರದ್ಧಾನಂದ, ಕವಿ ರಾಯಚಂದ್, ಮೋತಿಲಾಲ ನೆಹರು, ಮಗನಲಾಲ ಗಾಂಧಿ, ಛೋಟೇಲಾಲ ಜೈನ, ಚಿತ್ತರಂಜನ ದಾಸರ ಬಗ್ಗೆ ಅವರು ಬರೆದ ವ್ಯಕ್ತಿಚಿತ್ರಗಳಲ್ಲಿ ಆ ಕೌಶಲ್ಯ ಕಂಡುಬರುತ್ತದೆ. ಪ್ರಕೃತಿ ವರ್ಣನೆಯಲ್ಲೂ ಗಾಂಧೀಜೀ ಏನು ಕಡಮೆ ಇಲ್ಲ. ಸಿಂಧೂ ನದಿಯ ವರ್ಣನೆ, ಪದ್ಮಾ ನದಿಯಲ್ಲಿ ದೋಣಿಯ ವರ್ಣನೆ ಮುಂತಾದವು ಬಹಳ ಸೊಗಸಾಗಿವೆ. ತಿರುವಾಂಕೂರು ಸಂಸ್ಥಾನದ ಪ್ರವಾಸವನ್ನು ಅವರು ವರ್ಣಿಸಿದ ಹಾಗೆ ವರ್ಣಿಸಬಲ್ಲವರು ವಿರಳ.

ಗಾಂಧೀಜೀ ಲೇಖನ ವ್ಯವಸಾಯಕ್ಕೆ ಮೊದಲಿಟ್ಟು ಬಹಳ ದಿನ ವಾಯಿತು. ದಕ್ಷಿಣ ಆಫ್ರಿಕಾದಲ್ಲೇ ಬರೆಯಲು ಮೊದಲುಮಾಡಿದರು. ತಮ್ಮ ಸತ್ಯಾಗ್ರಹದ ರೀತಿನೀತಿಗಳನ್ನು ಜನರಿಗೆ ತಿಳಿಸಲು Indian Opinion—ಇಂಡಿಯನ್ ಒಪಿನಿಯನ್ ಎಂಬ ಪತ್ರಿಕೆ ಪ್ರಾರಂಭಿಸಿದರು. ಅದು ಮೂರು ಭಾಷೆಗಳಲ್ಲಿ ಪ್ರಕಟವಾಗುತ್ತಿತ್ತು; ಇಂಗ್ಲೀಷು, ಗುಜರಾತೀ, ತಮಿಳು. ಮೊದಲಿನ ಎರಡೂ ನುಡಿಗಳಲ್ಲಿ ಅವರೇ ಬರೆಯುತ್ತಿದ್ದರು. ಗುಜರಾತಿಯಲ್ಲೇ ಹೆಚ್ಚು. ಸಾಹಿತ್ಯ ಸರ್ವಭೋಗ್ಯವಾಗಬೇಕು, ಬರೀ ಪಂಡಿತರ ಸೊತ್ತಾಗಬಾರದೆಂಬ ಅವರ ಉದ್ದೇಶ್ಯವೂ ಅದಕ್ಕೆ ಒಂದು ಕಾರಣ. ಈ ಅಭಿಪ್ರಾಯವನ್ನು ಅವರು ಆಡಿಯೂ ತೋರಿಸಿದಾರೆ. ರವೀಂದ್ರನಾಥರೊಮ್ಮೆ ಗುಜರಾತಿ ಸಾಹಿತ್ಯಪರಿಷತ್ತಿಗೆ ಅತಿಥಿಗಳಾಗಿ ದಯಮಾಡಿದ್ದರು. ಆ ಸಮಾರಂಭದಲ್ಲಿ ಕವೀಂದ್ರನನ್ನು ಸ್ವಾಗತಿಸುವುದು ಗಾಂಧೀಜಿಯ ಪಾಲಿಗೆ ಬಂದಿತ್ತು. ಆ ಸಂದರ್ಭದಲ್ಲಿ ಗಾಂಧೀಜಿ ತಮ್ಮ ಮನಸ್ಸನ್ನು ಬಿಚ್ಚಿ ಹೇಳಿದರು. ಸುಮ್ಮನೆ ಪಾಂಡಿತ್ಯಪ್ರದರ್ಶನೆಗಾಗಿ ಬರೆದುದು ಸಾಹಿತ್ಯವಲ್ಲ. 'ಬಾವಿಯಿಂದ ಕಪಿಲೆ ಹೊಡೆದು ನೀರೆಳೆಯುವವನು ಆ ಕೆಲಸ ಮಾಡುವಾಗ, ಗಾಡಿ ಹೊಡೆಯುವವನು ಎತ್ತು ನಡೆಸುವಾಗ ಹಾಡಿಕೊಳ್ಳಲು ಅವರಿಗೆ ಒಂದು ಹಾಡನ್ನು ಕಟ್ಟಿ ಕೊಟ್ಟವನೇ ನಿಜವಾದ ಕವಿ. ಹೊಲದಲ್ಲಿ ಉಳುವಾಗ, ಕಳೆ ಕೀಳುವಾಗ ಹಾಡಿಕೊಳ್ಳಲು ರೈತನಿಗೆ ಒಂದು ಹಾಡು ದಾನಮಾಡಿದರೆ ಅದು ಸಾಹಿತ್ಯದಾನ.'

ಸಾಹಿತ್ಯ ಒಂದು ಆಟವಾಗಬಾರದು. ಅದು ಜನಜೀವನದ ಚಿಲುಮೆಗಳನ್ನು ಬತ್ತಿಸಬಾರದು. ಅರಮನೆಗಳಲ್ಲಿ ಕೂತು ಕಾಮವಿಕಾರದ ಕನಸಿನಲ್ಲಿ ಮುಳುಗಿ ತೇಲುವ ರಸಿಕರ ಕೈಯ ಬಟ್ಟಲು, ಪಕ್ಕದ ಹೆಣ್ಣು ಆಗಬಾರದು. ಪಂಡಿತರ ಬಿರುದುಬಾವಲಿಗಳಾಗಬಾರದು. ಸಾಹಿತ್ಯ ಸರ್ವಭೋಗ್ಯವಾಗಬೇಕು. ಸಾಹಿತ್ಯ ಹಣವಂತರಿಗೆ ಮಾತ್ರ ಸಿಗುವ ಕೇಸರಿ ಕರ್ಪೂರ ಬೆರೆಸಿದ ದೇವರ ತೀರ್ಥವಾಗಬಾರದು. 'ಜಗತ್ತಿನ ಇಡೀ ಚರಾಚರ ಜೀವಕೋಟಿಗೇ ತಂಪುಕೊಡುವ ಮಳೆನೀರಿನಂತೆ' ಆಗಬೇಕು. ಅದೇ ಸಾಹಿತ್ಯದ ಪರಮ ಸತ್ಯ; ಆಗಲೇ ಅದರ ಸಾರ್ಥಕತೆ. ಅದು ಗಾಂಧೀಜಿಯ ಗುರಿ.

---

# ನಗೆಗಾರ ಗಾಂಧಿ

ಗಾಂಧೀಜಿಯ ಸಾಹಿತ್ಯಕ್ಕೆ ಆ ಭಾವ, ಆ ಶೈಲಿ ಪ್ರಾಣದ ಹಾಗೆ. ಆದರೆ ಆ ಬರೆಹಕ್ಕೆ ಮಿಂಚಿನಂಥ ದುರ್ವಾರ ಶಕ್ತಿ ಬರಲು ಅವರ ಹಾಸ್ಯವೇ ಕಾರಣ. ಹೂವಿಗೆ ಕಂಪು ಇದ್ದ ಹಾಗೆ ನಗೆ ಅವರಿಗೆ. ನಗೆ ಇಲ್ಲದ ಗಾಂಧಿ ಕಂಪಿಲ್ಲದ ಹೂವಿನಂತೆ. ಅವರೇ ಆ ಮಾತು ಒಪ್ಪಿಕೊಂಡಿದಾರೆ. ಯಾರೋ ರಶಿಕಶಿಖಾಮಣಿ ಕೇಳಿದನಂತೆ ಅವರನ್ನು 'ನಿಮಗೆ ನಗು ಸೇರುತ್ತದೆಯೆ?' ಎಂತ. ನಗುನಗುತ್ತಲೇ ಅವರು ಉತ್ತರ ಹೇಳಿದರು— 'ನನಗೆ ನಕ್ಕು ನಗಿಸುವುದು ಸೇರದಿದ್ದರೆ ಬಹಳ ದಿನದ ಕೆಳಗೆಯೆ ನಾನು ಊರಮುಂದಿನ ಹೊಳೆಯೊಳಗೆ ಹಾರಿಕೊಳ್ಳುತ್ತಿದ್ದೆ.' ಹಾಸ್ಯಕ್ಕೆ ಗಾಂಧೀಜೀ ತಮ್ಮ ಬಾಳಿನಲ್ಲಿ ಅಷ್ಟು ಸ್ಥಾನಕೊಟ್ಟಿದಾರೆ. ನಗೆಯಿಲ್ಲದ ಬಾಳು ಅವರಿಗೆ ಉಪ್ಪಿನಕಾಯಿ ಇಲ್ಲದ ಊಟ. ಆದರ ಹಾಗೆ ಇದು ಬಾಳಿಗೆ ಒಂದು ಅಗತ್ಯರುಚಿ.

ಏನು ಕಾರಣವೋ ನಮ್ಮಲ್ಲಿ ನಿರ್ಮಲ ಹಾಸ್ಯ ಬೆಳೆದು ಬಂದಿಲ್ಲ. ನಮ್ಮ ನುಡಿಯಲ್ಲಿ—ಏಕೆ? ನಮಗಿಂತ ನೂರುಪಾಲು ಮೇಲೆ ಏರಿಹೋದ ಸಂಸ್ಕೃತ ಸಾಹಿತ್ಯದಲ್ಲೇ—ನಯವಾದ ನಗೆಗೆ ಸರಿಯಾದ ಬೆಲೆ ಸಿಗಲಿಲ್ಲ. ನವರಸಗಳಲ್ಲಿ ಹಾಸ್ಯಕ್ಕೂ ಒಂದು ಮೂಲೆ ಕೊಟ್ಟಿದ್ದರೂ ಅದರ ಸ್ವರೂಪವನ್ನು ಅವರು ಚೆನ್ನಾಗಿ ಗುರುತಿಸಿದಂತೆ ಇಲ್ಲ. ಶೃಂಗಾರವೇ ರಸ ಎಂದು

ತಿಳಿದವರ ಕೈಯಲ್ಲಿ ಹಾಸ್ಯ ಆ ಪ್ರಧಾನರಸಕ್ಕೆ ತೊತ್ತಾಗಿ ತನ್ನ ವ್ಯಕ್ತಿತ್ವ ವನ್ನೇ ಕಳೆದುಕೊಂಡಿತು. ವಿನೋದವು ಬರೀ ನಕಲಿಯಾಯಿತು. ಸಂಸ್ಕೃತ ಸಾಹಿತ್ಯದಲ್ಲೇ ವಿನೋದ ಗ್ರಂಥಗಳಿಲ್ಲದಿದ್ದರೆ ಕನ್ನಡದಲ್ಲಿ ಎಲ್ಲಿಂದ ಬರ ಬೇಕು? ಸಾಹಿತಿಗಳು ಬಹಳ ಔದಾರ್ಯದಿಂದ ನಾಟಕದಲ್ಲಿ ವಿನೋದಕ್ಕೆ ಕೊಂಚ ಅವಕಾಶ ಕೊಟ್ಟಿದಾರೆ. ನಾಟಕದ ನಾಯಕನ ವಿಪ್ರಲಂಭ ಶೃಂಗಾರಕ್ಕೆ ಸಹಾಯವಾಗಿ, ಬೆಂಕಿಗೆ ಗಾಳಿಯಂತೆ–ವಿದೂಷಕನ ಪಾತ್ರ ವೊಂದು ಬರುತ್ತದೆ. ಡೊಳ್ಳುಹೊಟ್ಟೆ, ಅಜಗರದ ನಿದ್ದೆ, ಜೊತೆಗೆ ಸದಾ ಕಡುಬಿನ ಚಿಂತೆ–ಇಷ್ಟಾದರೆ ಸಾಕು ವಿದೂಷಕ ಮಹಾಶಯನ ಸೃಷ್ಟಿ ಯಾಗಿಹೋಯಿತು. ಕೃಷ್ಣಲೀಲೆಯ ನಾಟಕದಲ್ಲಿ ಬರುವ ಕುಂಭನ ಕುಚೋದ್ಯ ಇವನ ಪಾಂಡಿತ್ಯದ ಪರಮಾವಧಿ. ಇನ್ನೂ ಮುಂದೆ ಸರಿದರೆ ವಿಕಟ ಕವಿ ತೆನಾಲಿ ರಾಮಕೃಷ್ಣನ–ಹಿಂದೆ ಕಾಣದ, ಮುಂದೆ ಕಾಣ ಬಾರದ–ರಸಿಕತೆ. ಇವನು ಮಾಡಿದ ಯಾವುದೋ ತಪ್ಪಿಗೆ ದೊರೆ ತನಗೆ ಮೋರೆ ತೋರಿಸಬೇಡ ಎಂದನಂತೆ. ಮಾರನೆಯದಿನ ಬೆಳಿಗ್ಗೆ ವಿಕಟ ಕವಿ ದೊರೆಯು ಮಲಗುವ ಮನೆಯ ಕಿಟಕಿಗೆ ಎದುರಾಗಿ ನಗ್ನ ಪೃಷ್ಠ ತೋರಿ ನುತ್ತ ನಿಂತಿದ್ದನಂತೆ. ಆ ದಿನ ನಮ್ಮ ವಿನೋದಕಲೆ ಶಿಖರಕ್ಕೇರಿತು.

ಪ್ರಹಸನವೆಂಬ ಒಂದುಬಗೆಯ ನಾಟಕವನ್ನು ಹಾಸ್ಯಕ್ಕಾಗಿಯೇ ಪ್ರಾಚೀನರು 'ದತ್ತಿ' ಬಿಟ್ಟಿದಾರೆ. ಅದನ್ನು ಓದಿ ಆನಂದಿಸಬೇಕಾದರೆ ನಾವು ಮತ್ತೆ ಪ್ರಾಚೀನರಾಗಿಯೇ ಹುಟ್ಟಬೇಕು. ಅವು 'ರಹಸ್ಯವಾಗಿ ಕೊಟಡಿಯೊಳಗೆ ಮಾತ್ರ ಓದಿಕೊಳ್ಳಬಹುದಾದವು' ಎಂದು ಕೆಲವರು ಹೇಳುತ್ತಾರೆ. ಆ ಅಸಹ್ಯವಾದ ನಗೆ ಅದಕ್ಕೂ ಯೋಗ್ಯವಲ್ಲ ಎನಿಸುತ್ತದೆ. ಅದರಲ್ಲಿ ಮರ್ಯಾದೆಯೂ ಇಲ್ಲ, ಮಾಧುರ್ಯವೂ ಇಲ್ಲ. ಕಾಳಿದಾಸನಂಥ ಒಬ್ಬರಿಬ್ಬರು ಕವಿಗಳು ಹಾಸ್ಯದ ಮಟ್ಟವನ್ನು ಮೇಲೆತ್ತಲು ಪ್ರಯತ್ನ ಮಾಡಿದರಾಗಲಿ, ಸಮಾಜವು ಅದಕ್ಕೆ ಮನ್ನಣೆ ಕೊಡಲಿಲ್ಲ. ಕೊನೆಗೆ ಹಾಸ್ಯವೆಂದರೆ ಭೀಭತ್ಸವಾಗಿ ಕಾಮನ ಹಬ್ಬದ ವಿಕಾರ ಚೇಷ್ಟೆಗಳೂ ಅಸಹ್ಯವಾದ ಹಾಡುಗಳೂ ನಮ್ಮ ಜನರಪಾಲಿಗೆ ವಿನೋದ ಸಾಮಗ್ರಿ ಯಾದವು.

ಸಾಹಿತ್ಯದಲ್ಲಿ ಹಾಸ್ಯಕ್ಕೆ ಸರಿಯಾದ ಮಣೆ ಸಿಗದಿದ್ದರೂ ಜನಜೀವನ ದಲ್ಲಿ ಅದು ತನ್ನ 'ಪಟ್ಟಾ' ಗಳಿಸಿಕೊಂಡಿತು. ಬೀಗರ ಹಾಡು ಉರುಟಣೆ ಮೊದಲಾದ ಸನ್ನಿವೇಶಗಳಲ್ಲಿಯೂ ಸ್ವಲ್ಪ ಹೊದ್ದು ಆದ ಆಳಿಯ ಮನೆಗೆ ಬಂದ ಸಂದರ್ಭದಲ್ಲೂ ವಿನೋದ ಸಾಂಪ್ರದಾಯಿಕವಾಗಿ ಹೋದರೂ ದಿನದಿನದ ಬಾಳಿನಲ್ಲಿ ವಿನೋದ ಅಲ್ಲಲ್ಲಿ ಹುಟ್ಟಿಕೊಳ್ಳುತ್ತಲೇ ಇತ್ತು. ನಗ ಲಾರದ ದೇಶ--ಜನ ನೆಲೆಯಾಗಿ ಬಾಳುವುದು ಅಸಾಧ್ಯ. ಜನಪದ ಸಾಹಿತ್ಯ ದಲ್ಲಿ ಆ ವಿನೋದದ ಸೆಲೆ ಇದೆ. ಈಚೆಗೆ ಆ ಶಿಲ್ಪ ಬೆಳೆಯುತ್ತಿದೆ. ಆಧುನಿಕ ಸಾಹಿತ್ಯದಲ್ಲಿ ತಿಳಿಯಾದ ವಿನೋದಕ್ಕೆ ಒಂದು ಸ್ಥಾನ ಸಿಕ್ಕಿದೆ. ವಿನೋದ ಪ್ರಿಯರಲ್ಲದವರು ಯಾರೂ ಸಿಗಲಾರದ ರಸಿಕರ ಊರೊಂದನ್ನು ಶ್ರೀ ಗೊರೂರು ರಾಮಸ್ವಾಮಿ ಐಯಂಗಾರ್‍ಯರು ಕನ್ನಡ ಜನರಿಗೆ ಗುರುತು ಮಾಡಿಕೊಟ್ಟಿದಾರೆ. ಬಹುಶಃ ಮಾಸ್ತಿಯವರ ರಂಗಪ್ಪನ ಕತೆಗಳಲ್ಲಿ ಅದು ಮೊದಲಾಯಿತೋ ಏನೋ.

ಹಾಸ್ಯಕ್ಕೆ ಮೂಲ ಪ್ರಕೃತಿ ಪರರ ತಪ್ಪನ್ನು ಬಯಲಿಗೆಳೆಯುವುದು. ಅದರಲ್ಲೂ ತಪ್ಪೇ ಇಲ್ಲವೆಂದು ಎಲ್ಲರೂ ತಿಳಿದ ಕಡೆ ತಪ್ಪೊಂದನ್ನು ಆಕ ಸ್ಮಾತ್ತಾಗಿ ಬಯಲಿಗಿಟ್ಟರೆ ಹಾಸ್ಯಕ್ಕೆ ಶಕ್ತಿ ಹೆಚ್ಚು. ವಿಷ್ಣು ಹಾಲುಗಡ ಲಲ್ಲಿ ಮಲಗಿದಾನೆ. ಆವನಿಗೆ ಹಾಲಿಗೆ ಕಡಮೆಯೇ? ಹಾಗಾದರೆ ಗೊಲ್ಲರ ಮನೆ ಹಾಲಿಗೇಕೆ ಆಸೆ? ಹೀಗೊಬ್ಬ ಕವಿ ಪ್ರಶ್ನೆ ಹಾಕಿ ನಮ್ಮನ್ನು ಸಿಟ್ಟಿ ಗೆಬ್ಬಿಸಿ—ನಿಜ, ಪರರ ಸೊತ್ತು ಎಲ್ಲರಿಗೂ ರುಚಿ ಎಂದು ಉತ್ತರ ಹೇಳಿ ನಮ್ಮನ್ನು ನಗೆಯಲ್ಲಿ ಮುಳುಗಿಸುತ್ತಾನೆ. ಜಗತ್ತಿನಲ್ಲಿ ಅಂದವಲ್ಲದುದು ಸೊಂಪಿಲ್ಲದುದು ಎಷ್ಟೋ ಇದೆ. ಇಂಥ ಸೊಟ್ಟುಡೊಂಕನ್ನು ಬ್ರಹ್ಮ ಏಕೆ ನಿರ್ಮಿಸಿದನೋ ಯಾರು ಬಲ್ಲರು? ಕಾಳಿದಾಸ ಕವಿ ಅದಕ್ಕೆ ಒಂದೇ ಮಾತಿನಲ್ಲಿ ಉತ್ತರ ಕೊಟ್ಟು ನಮ್ಮ ಮನಸಿನ ಭಾರವನ್ನು ಹಗುರು ಮಾಡಿದ. ಯಾವಾಗಲೂ ವೇದ—ವಾದಗಳಲ್ಲಿ ಮುಳುಗಿರುವ ನಮ್ಮ ವೈದಿಕಶಿರೋಮಣಿಗಳಿಗೆ ರಸಿಕತೆ ಕಡಮೆಯಲ್ಲವೆ. ಬ್ರಹ್ಮ ಆ ವೇದ ಗಳ ಗುಂಪಿಗೇ ತಳಹದಿ; 'ವೇದಾಭ್ಯಾಸ ಜಡ'. ಅಂಥವನ ಕೈಯಲ್ಲಿ ಅಂದವಾದುದು ಹುಟ್ಟಬೇಕಾದರೆ ಕೈತಪ್ಪಿಯೇ. ಇಂಥ ಶಿಲ್ಪವನ್ನೇ

ಸರ್ವಜ್ಞಮೂರ್ತಿ 'ಸಕ್ಕನಗಿಸುವಾ ನುಡಿ ಲೇಸು' ಎಂದುದು. ಸಕ್ಕ ನಗಿಸುವ ನುಡಿಗೆ ಕಸಿಕರೇ ಬೇಕು. ಅವರು ಆಡಿದ ಮಾತು 'ಶಶಿಯುದಿಸಿ ಬಂದಂತೆ.'

ಇನ್ನೊಬ್ಬರು ತಪ್ಪು ಮಾಡಿದಾಗ ಸಿಟ್ಟುಗೊಳ್ಳದೆ ನಗುವುದೂ ಒಂದು ಒಳ್ಳೆಯ ಸಂಸ್ಕಾರ. ಆದರಿಂದ ಬಾಳಿನ ಅನುಭವದಲ್ಲಿ ಕಹಿ ಕಡಮೆಯಾಗುತ್ತದೆ. ಆದರೆ ಯಾವಾಗಲೂ ಪರರ ತಪ್ಪನ್ನೇ ನೋಡಿ ನಗುವುದು ಕೊನೆಗೆ ಅಪಗುಣವೇ ಆದೀತು. ಆ ನಗೆ 'ಕಿವಿಯಲಿ ಕೂರಸಿ ಬಡಿದಂತೆ,' ಅಂಥ ಮನುಷ್ಯ ನಗೆಗಾರನಲ್ಲ, 'ಕುನ್ನಿ.' ನಿಜವಾದ ರಸಿಕ ತೆಗೆ ನಿರ್ಮಲವಾದ ಹಾಸ್ಯಕ್ಕೆ ತನ್ನ ತಪ್ಪುಗಳನ್ನು ಕೂಡ ನೋಡಿ ಕೊಂಡು ನಗುವ ಗುಣ ಬೇಕು. ಅದಕ್ಕೆ ಸೂಕ್ಷ್ಮವಾದ ಸತ್ಯದೃಷ್ಟಿ, ಹದವಾದ ಅನಾಸಕ್ತಿ ಬೇಕು. Laugh and grow fat ಎಂದು ಇಂಗ್ಲೀಷಿ ನಲ್ಲಿ ಹೇಳುತ್ತಾರೆ. ಸಕ್ಕು ಸಕ್ಕು ಹೊಟ್ಟೆ ಬೆಳೆಸು ಎಂದು. ನನ್ನ ತಪ್ಪು ಬೆನ್ನಿಗಿಟ್ಟು ಅನ್ಯರ ತಪ್ಪು ಎಣಿಸುವವನಿಗೆ ಬೆಳೆಯುವುದು ಹೊಟ್ಟೆಯಲ್ಲ, ಗರ್ವ. ಹಾಸ್ಯವು ನಯವಾಗಿ, ಹಗುರವಾಗಿ, ಶುಚಿಯಾಗಿ, ಸಭ್ಯವಾಗಿ ಇರಬೇಕಾದರೆ ನಮ್ಮ ಕಣ್ಣೆದುರಿಗೇ ಕನ್ನಡಿ ಹಿಡಿದುಕೊಳ್ಳುವ ಯೋಗ್ಯತೆ ಬೇಕು. ಅಂಥಲ್ಲಿ 'ಗಾಯಕ್ಕೆ ಮದ್ದನ್ನು ಕತ್ತಿಗೇ ಸವರಿ ಹೊಡೆವ ಹಾಗೆ ಬೈಯುತ್ತಲೇ ನಗಿಸುವ ಹಾಸ್ಯಕುಶಲತೆ' ತಲೆದೋರುತ್ತದೆ.

ಇಷ್ಟೆಲ್ಲ ಪುರಾಣ ಹೇಳಿದುದು ಗಾಂಧೀಜೀ ದೊಡ್ಡ ನಗೆಗಾರರು ಎಂಬುದನ್ನು ವಿವರಿಸಲಿಕ್ಕೆ. ಅವರ ಹಾಸ್ಯ ಬಹಳ ಉತ್ತಮತರದ್ದು. ಒಂದು ಸಲ ಗಾಂಧೀಜೀ ಬಂಗಾಲದಲ್ಲಿ ಪ್ರಯಾಣ ಮಾಡುತ್ತಿದ್ದರು. ಅವರ ಜೊತೆಯಲ್ಲಿ ಒಬ್ಬ ಹೆಸರಾದ ಬಂಗಾಳೀ ವಕೀಲರೂ ಇದ್ದರು. ಗಾಂಧೀಜೀ ರೈಲಿನಲ್ಲಿದ್ದುದರಿಂದ ಸ್ಟೇಷನುಗಳಲ್ಲೆಲ್ಲ ತುಂಬಾ ಗದ್ದಲ. ಆ ವಕೀಲರು ಬೇರೆ ಪೆಟ್ಟಿಗೆಯಲ್ಲಿ ಕೂತಿದ್ದವರು ರೈಲು ನಿಂತಾಗೆಲ್ಲ ಬಂದು ಗಾಂಧೀಜಿಯನ್ನು ನೋಡಿಕೊಂಡು ಹೋಗುತ್ತಿದ್ದರು. ಒಂದು ಕಡೆ ಗಲಾಟೆ ಬಹಳವಾಗಿದ್ದುದರಿಂದ ಆ ವಕೀಲರಿಗೆ ರೈಲು ಕದಲುವ ತನಕ ಗಾಡಿಯನ್ನು ಹತ್ತಲಾಗಲಿಲ್ಲ. ಬಾಗಿಲನ್ನು ಹಿಡಿದು ಕೊನೆಯ

ಗಳಿಗೆಯಲ್ಲಿ ಹತ್ತಲು ಹೋಗಿ ಕೈಜಾರಿ ತಲೆ ಕೆಳಗಾಗಿ ಬಿದ್ದು ಬಿಟ್ಟರು. ಅದೇ ರೈಲಿನಲ್ಲಿ ಅವರ ಮಗನೂ ಬರುತ್ತಿದ್ದ. ಅವನು ಒಡನೆಯೇ ಸರಪಣಿ ಎಳೆದು ಗಾಡಿ ನಿಲ್ಲಿಸಿದ. ವಕೀಲರಿಗೆ ಏನೂ ಪೆಟ್ಟಾಗಿರಲಿಲ್ಲ. ಅವರು ಗಾಂಧೀಜಿಯಿದ್ದ ಡಬ್ಬಿಗೆ ಬಂದು ನಮಸ್ಕಾರ ಮಾಡಿ 'ನೀವು ಗಾಡಿಯಲ್ಲಿದ್ದೀರಿ ಎಂತ ನಾನು ಬದುಕಿದೆ' ಎಂದರು ಬಹಳ ಭಕ್ತಿಯಿಂದ. ಗಾಂಧೀಜೀ ನಗುತ್ತ 'ಹೌದು; ನಾನು ಇದ್ದುದಕ್ಕೆ ನೀವು ಹೇಳುವ ಹಾಗೆ ಆದದ್ದು. ಅದು ಯಾಕೆ ಹೇಳುವುದಿಲ್ಲ?' ಎಂದರು. ಆ ವಕೀಲರಿಗೆ ಈ ವಿನಯ ರುಚಿಸದಿದ್ದರೂ ಆ ಹಾಸ್ಯ ಅರ್ಥವಾಗಿಯೇ ಇರಬೇಕು. ಅದರಲ್ಲಿ ತಾರತಮ್ಯ ವಿವೇಕವಿದೆ. ಮುಗಿಲಿಗೆ ಹಾರುವ ಭ್ರಾಂತಿಯನ್ನು ಹಿಡಿದು ನೆಲದ ಮೇಲೆ ನಿಲ್ಲಿಸುವ ಕುಶಲತೆಯಿದೆ.

ಪಾಶ್ಚಾತ್ಯ ದೇಶದಲ್ಲಿ ವಿನೋದವಾಡುವುದೂ ಹಾಸ್ಯ ಸವಿಯುವುದೂ ಒಂದು ಕಲೆಯಾಗಿದೆ. ಅದಕ್ಕಾಗಿ ಕೆಲವು ಪತ್ರಿಕೆಗಳು ಮೀಸಲಾಗಿವೆ. ವಿಕಟ ಚಿತ್ರಗಳದೊಂದು ಹೊಸ ಶಿಲ್ಪವೇ ಹುಟ್ಟಿದೆ. ನಮ್ಮಲ್ಲೂ 'ವಿಕಟ' ಪತ್ರಿಕೆಗಳು ಇವೆಯಲ್ಲ ಎನ್ನಬಹುದು. ಹಾಗೆ ಅಂದವರಿಗೆ ಹಾಸ್ಯ ಎಂದರೆ ಏನು ಎಂಬುದೇ ಗೊತ್ತಿಲ್ಲವೆಂದು ಮರುಗಬೇಕಾದೀತು. ನಮ್ಮ ಜನಕ್ಕೆ ಆ ಕಲೆ ಇನ್ನೂ ಬರಬೇಕಾಗಿದೆ. ಒಬ್ಬ ಸದ್ಗೃಹಸ್ಥ ಗಾಂಧೀಜಿಗೆ ಕಾಗದ ಬರೆದ: 'ನೀವು ಮದ್ಯಪಾನ ನಿರೋಧಕ್ಕೆ ಪ್ರಯತ್ನ ಮಾಡಿದ ಹಾಗೆ ಜೂಜು, ಸಿನಿಮಾ ಮುಂತಾದವನ್ನೂ ನಿಲ್ಲಿಸಿರಿ.' ಕಾಂಗ್ರೆಸ್ ಸರಕಾರವೆಂದರೆ ಕೃತಯುಗವನ್ನು ನೆಲಕ್ಕೆ ಇಳಿಸುವ ಇಂದ್ರಜಾಲ ಎಂದು ತಿಳಿದಿರಬೇಕು ಆತ. ಗಾಂಧೀಜೀ ಆ ಮಾತನ್ನು ವಿವರಿಸಿ ವಿನೋದವಾಗಿ 'ಮದ್ಯಪಾನದ ಹಾಗೆ ಇವನ್ನು ಪಾಪವೆಂದು ಜನ ತಿಳಿದಿಲ್ಲ. ನಾನೇನಾದರೂ ಆ ರೀತಿ ಗಲಾಟೆಮಾಡಿದರೆ ನನ್ನ ಮಹಾತ್ಮಾಗಿರಿ ಹೋದೀತು ಲಾಭವೇನೂ ಆಗಲಾರದು' ಎಂದು ಬರೆದರು. ಆ ರಸಿಕ ಮತ್ತೆ ಬರೆದ ಮಾರುದ್ದ ಕಾಗದ. 'ನೀವು ಎಲ್ಲಾ ಬಿಟ್ಟವರು. ನಿಮಗೆ ಈ ಮಹಾತ್ಮಾಗಿರಿ ಆಸೆ ಇರಬಾರದು.' ಆ ಪಂಡಿತನ ಯೋಗ್ಯತೆಗೆ ಮೆಚ್ಚಿ ಗಾಂಧೀಜೀ ಒಂದು ಲೇಖವನ್ನೇ ಬರೆದು 'ವಿನೋದ ಇಷ್ಟು ಕೂಡ ಅರ್ಥವಾಗ

ದವರುಂಟೆ?' ಎಂದರು. ಇಷ್ಟಾದರೂ ಆ ಪ್ರಾಣಿಗೆ ಅರ್ಥವಾಯಿತೋ ಇಲ್ಲವೋ.

ಈ ಮಹಾತ್ಮಾಗಿರಿ ಅವರ ಹಾಸ್ಯಕ್ಕೆ ಅನೇಕಸಲ ವಸ್ತುವಾಗಿದೆ. ಗಾಂಧೀಜೀ ಕಾಶಿಗೆ ೧೯೦೨ರಲ್ಲಿ ಹೋಗಿದ್ದರು. ಆಗ ಅವರಿನ್ನೂ ಮಹಾತ್ಮರಾಗಿರಲಿಲ್ಲ. ಆ ಅನುಭವಗಳನ್ನು 'ಸತ್ಯಶೋಧನೆ'ಯಲ್ಲಿ ವರ್ಣಿಸಿದಾರೆ. 'ಆದಾದಮೇಲೆ ವಿಶ್ವನಾಥನ ಬಳಿಗೆ ಒಂದೆರಡು ಸಲ' ಹೋಗಿದ್ದರು. ಅವರಿಗೆ 'ಅಷ್ಟುಹೊತ್ತಿಗೆ ಮಹಾತ್ಮಾ ಬಿರುದು ಬಂದಿತ್ತು.' ಆದುದರಿಂದ ಅವರಿಗೆ ದೇವರ ದರ್ಶನವೂ ಆಗಲಿಲ್ಲವಂತೆ. 'ನಾನೇ ದರ್ಶನಪಾತ್ರನಾದಮೇಲೆ ನನಗೆ ಆ ದರ್ಶನಭಾಗ್ಯ ಹೇಗೆ ಸಿಗಬೇಕು?' ಜನ ಇವರನ್ನು ಏಕಾಂತವಾಗಿ ಬಿಟ್ಟರೆ ಅಲ್ಲವೆ ದರ್ಶನ! ನಕ್ಷತ್ರಿಕನಿಗಾದರೂ ಒಂದು ಗಡುವು ಇತ್ತು. ಹಣ ಕೊಟ್ಟಮೇಲೆ ಹೊರಟುಹೋದ. ಇವರು ಅವನನ್ನೂ ಮೀರಿಸಿದವರು. ಕಿಚ್ಚಲಿಗೆ ಉಣ್ಣೆ ಹತ್ತಿದಹಾಗೆ. ಈ ಅನುಭವಕ್ಕೆ ಬೇಸತ್ತು 'ಮಹಾತ್ಮರ ಕಷ್ಟ ಮಹಾತ್ಮರಿಗೇ ಗೊತ್ತು' ಎಂದು ನಕ್ಕು ಅದನ್ನು ಪರಿಹರಿಸಿಕೊಳ್ಳುತ್ತಾರೆ ಗಾಂಧೀಜೀ.

ಗಾಂಧೀಜಿಯ ಸಾಹಿತ್ಯದಲ್ಲಿ ಹೆಜ್ಜೆ ಹೆಜ್ಜೆಗೂ ಈ ಗಂಭೀರ ಹಾಸ್ಯ ಮಿಂಚುಗುತ್ತದೆ. 'ಸತ್ಯಶೋಧನೆ'ಯಲ್ಲಿ ವಿನೋದಪೂರ್ಣವಾದ ಸನ್ನಿವೇಶ ತುಂಬಿ ಬರುತ್ತವೆ. ಉಳಿದ ಬರೆವಣಿಗೆಯಲ್ಲಿ ವರ್ಣನೆ ಇಲ್ಲ, ಕಥನ ಕಡಮೆ. ಅಲ್ಲಿ ಕಾಣುವ ಹಾಸ್ಯ ಮಾತುಗಾರಿಕೆಯದು. ಸರಸ ಸಲ್ಲಾಪದಲ್ಲಿ ಕೊನರುವ ನಿರ್ಮಲ ವಿನೋದ. 'ಹಿಂದ್ ಸ್ವರಾಜ್ಯ'ವನ್ನು ವಿಮರ್ಶಿಸಿ, ಚರ್ಚಿಸಿ ಒಂದು ವಿಶೇಷ ಸಂಚಿಕೆ ಪ್ರಕಟಿಸಲು ಒಂದು ಪತ್ರಿಕೆಯವರು ಏರ್ಪಾಡು ಮಾಡಿದರು. 'ಹಿಂದ್ ಸ್ವರಾಜ್ಯ' ಗಾಂಧೀ ಧರ್ಮದ ತಳಹದಿ, ಮೂಲ ಗ್ರಂಥ. ಆ ಸಂಚಿಕೆಗೆ ಒಂದು ಸಂದೇಶವನ್ನು ಕಳಿಸಿರೆಂದು ಗಾಂಧೀಜಿಯನ್ನು ಬೇಡಿದರು. ಹತ್ತೇ ಸಾಲಿನ ಒಂದು ಸಂದೇಶವನ್ನು ಕಳಿಸಿ, ಅದರಲ್ಲಿ ಕೊನೆಗೆ ಹೀಗೆ ಬರೆದರು. 'ದಕ್ಷಿಣ ಆಫ್ರಿಕಾದಲ್ಲ ಮೊಳೆಯುತ್ತಿದ್ದ ಕ್ಲೈಬ್ಯವನ್ನೂ ವಿನಾಶವನ್ನೂ ಇದು ನಿಲ್ಲಿಸಿತು. ನನ್ನ ಒಲವಿನ ಗೆಳೆಯ—ಈಗ ಆತ ತೀರಿಕೊಂಡಿದಾನೆ—ಇದು ಒಬ್ಬ ಹುಚ್ಚನ ಅಪಲಾಪ

ಎಂದಿದ್ದ. ಓದುಗರು ಇವೆರಡೂ ಅಭಿಪ್ರಾಯಗಳನ್ನೂ ತಿಳಿದು ತೂಕ ಮಾಡಿಕೊಳ್ಳಲಿ.' ಹೀಗೆ ಎರಡೂಕಡೆಯ ವಾದವನ್ನೂ ಪುರಸ್ಕರಿಸಲು ಹಾಸ್ಯವೃತ್ತಿ ಇಲ್ಲದೆ ಸಾಧ್ಯವಿಲ್ಲ.

'ಆತ್ಮಕಥೆ' ಓದದೆ ಗಾಂಧೀಜಿಯ ಹಾಸ್ಯದ ಬಲ ತಿಳಿಯುವದಿಲ್ಲ. ಅವರ ಮದುವೆಯ ಪ್ರಸಂಗದಲ್ಲಿ ಅದು ಮುಗುಳುನಗೆಯಾದರೆ, ಅವರ ಆಂಗ್ಲವೇಷಾಭ್ಯಾಸದ ಸಂದರ್ಭದಲ್ಲಿ ಬಾಯಿ ತುಂಬ ಬರುತ್ತದೆ. ಆ ಫಿಡೇಲ್ ಕಲಿಯುವುದೇನು, ಆ ನೃತ್ಯಾಭ್ಯಾಸವೇನು? ಮಾತುಗಾರಿಕೆ ಶಾಸ್ತ್ರೋಕ್ತವಾಗಿ ಕಲಿತು ಒಂದು ಸಲ ಬಹಳ ಸ್ವಾರಸ್ಯವಾಗಿ ಮಾತಾಡ ಬೇಕೆಂದು ಸಂಕಲ್ಪದಿಂದ ಒಂದು ಸಭೆಗೆ ಹೋದರು. ಇಷ್ಟೆಲ್ಲ ಪೂರ್ವ ಸಿದ್ಧತೆಯ ಬೆಟ್ಟ ಈದದ್ದು ಇಲಿಯುಮರಿಯನ್ನು. ಗಣಪತಿಪೂಜೆ ಮಾಡಿದ್ದೆ ತಡ ಮಂಗಳಾರತಿಗೇ ಹಾರಿದರು. ಎರಡನೆಯ ವಾಕ್ಯವೇ ಬಾಯಿಂದ ಹೊರಡಲಿಲ್ಲವಂತೆ. ಆಚಾರ್ಯರು ದೇವರ ಪೆಟ್ಟಿಗೆ ಬಿಚ್ಚುತ್ತಿರುವಾಗ ರಾಯರು ಊಟಕ್ಕೆಬ್ಬಿಸಿದರಂತೆ. ಆಚಾರ್ಯರು ಬಿಚ್ಚುತ್ತಿದ್ದ ದಾರ ಹಾಗೇ ಸುತ್ತಿ ಪೆಟ್ಟಿಗೆ ಕಟ್ಟಿಟ್ಟು ಓಂ ಶಾಂತಿಶ್ಶಾಂತಿಃ ಎಂದು ಮೇಲಕ್ಕೆದ್ದರು. ಗಾಂಧೀಜಿಯ ಉಪನ್ಯಾಸವೂ ಹಾಗೆಯೇ ಆಯಿತು.

ನಮ್ಮವರಲ್ಲಿ ಮದುವೆ ತೀರ ಎಳೆತನದಲ್ಲಿ ಮಾಡುವ ರೂಢಿ ಈಗ ಕಡಮೆಯಾಗುತ್ತಿದೆ. ಆದರೆ ಗಾಂಧೀಜಿಗೆ ೭ನೆಯ ವಯಸ್ಸಿನಲ್ಲಿ ಮೂರ ನೆಯ ಬಾರಿ 'ನಿಶ್ಚಯ.' ಅವರಿಗೆ ಮದುವೆ—ಎಂದರೆ ಶೋಭನ ಗುಜರಾತಿ ನಲ್ಲಿ—ಆದದ್ದು ೧೩ನೆಯ ವಯಸ್ಸಿಗೆ. 'ಉಡಿಗೆತೊಡಿಗೆ, ಮೇಳತಾಳ, ಮೆರವಣಿಗೆ, ಹಬ್ಬ—ವಿನೋದ, ಒಂದು ಹೊಸ ಹುಡುಗಿ ಆಟವಾಡಲಿಕ್ಕೆ' ಇಷ್ಟೇ ಅವರ ವಿಚಾರ. ಇಂಥ ಎಳಕರಿಗೆ ದಾಂಪತ್ಯದ ಶರೀರಸಂಬಂಧ ಹೇಗೆ ತಿಳಿಯಬೇಕು? ಅದಕ್ಕೆ ಇವರ ಅತ್ತಿಗೆ ಗುರು. 'ಆಕೆ ಪ್ರಥಮ ರಾತ್ರ ವ್ಯವಹಾರವನ್ನು ಬೋಧಿಸಿದರು.' ತಮ್ಮ ಹೆಂಡತಿಗೆ ಯಾರು ಹೇಳಿಕೊಟ್ಟರೆಂಬ ಪ್ರಶ್ನೆ ಈ ಮುದುಕನ ಮನಸ್ಸಿಗೆ ಹೊಳೆಯದೆ ಹೋಗಿಲ್ಲ. 'ನೀನು ಯಾರ ಹತ್ತಿರ ಕಲಿತೆ ಎಂದು ಆಕೆಯನ್ನು ಕೇಳಿದ ನೆನಪಿಲ್ಲ' ಎಂದು ಹೇಳಿ ಒಂದು ಕಿರುನಗೆಯನ್ನು ಹಾಯಿಸುತ್ತಾರೆ. ಆ

ನಗೆ ಕೆಳಗಿನ ಮಟ್ಟಕ್ಕೆ ಇಳಿಯುವ ಸಂಭವವಿದೆ. ಅದನ್ನು ಒಡನೆಯೆ ಕತ್ತರಿಸಿ 'ಈಗಲೂ ಕೇಳಬಹುದಾಗಲಿ ನನಗೆ ಆ ಇಚ್ಛೆ ಇಲ್ಲ' ಎಂದು ನಮ್ಮ ದುಡುಕಿಗೆ ತಕ್ಕ ಶಾಸ್ತಿ ಮಾಡುತ್ತಾರೆ.

ಗಾಂಧೀಜಿಯ ಜೀವನಯಾತ್ರೆಯಲ್ಲಿ ಅನೇಕ ವಿಲಕ್ಷಣ ಪ್ರಸಂಗ ಬಂದಿವೆ. ಅವನ್ನು ಹೇಳುವಾಗ ಅವರ ವಿನೋದ ಮಿಂಚಿನಂತೆ ಓಡುತ್ತದೆ. ತಮ್ಮ ಬಾಳುವೆಯ ಮಟ್ಟವನ್ನು ಏರಿಸುವ ಹಂಬಲವನ್ನು ವಿವರವಾಗಿ ವರ್ಣಿಸಿ ಕೋಟು ಷರಾಯಿ ತೊಟ್ಟು 'ಗೃಹಪಾವನ ಮಾಡಿದೆ' ಎಂದಿದಾರೆ. ಹೆಂಡತಿಗೆ ಪಾರ್ಸೀ ವೇಷ ತೊಡಿಸಿದರು. ಮನೆಯಲ್ಲಿ ಕಿರಸ್ತಾನರ ಅಡಿಗೆ ಊಟದ ಪದ್ಧತಿ ಬಂತು. ಕಡೆಗೆ ಅರ್ಧದಿಗಂಬರ ಸನ್ಯಾಸಿ!

ಅವರ ಅಡಿಗೆಯ ಬ್ರಾಹ್ಮಣ ರವಿಶಂಕರ ಸ್ನಾನಮಾಡಿದರೆ 'ಲಿಂಗದ ಮೇಲೆ ನೀರು ಸುರಿದಹಾಗೆ ಮೈಮೇಲೆ ಸುರಿದುಕೊಂಡ' ಅಭಿಷೇಕ. ಅಡಿಗೆಯವನಿಗೂ ಯಜಮಾನನಿಗೂ ಬಹಳ ಗೆಳೆತನವಾಯಿತು. 'ಆದರೆ ಒಂದು ಸಂಕಟ: ಮಾಸಿದ ಬಟ್ಟೆ ಬಿಡೆನೆಂದು, ಅನ್ನ ಪರಿಶುಭ್ರವಾಗಿಡೆನೆಂದು' ಅವನು ಒಂದು ಪ್ರತಿಜ್ಞೆಯನ್ನೇ ಹಿಡಿದಿದ್ದ. ಅಷ್ಟೇ ಅಲ್ಲ. 'ಆ ಪ್ರತಿಜ್ಞೆಯನ್ನು ಬಹಳ ಎಚ್ಚರದಿಂದ ಪಾಲಿಸುತ್ತಿದ್ದ.' ಈ ಇಬ್ಬರ ಜೋಡಿಯಲ್ಲಿ ಅವನನ್ನು ಕುಚೋದ್ಯ ಮಾಡಿ ತಮ್ಮನ್ನು ಹಾಗೇ ಬಿಟ್ಟರೆ ಸರಿಯೆ? ತಮ್ಮ ವಕೀಲಿ 'ನೋಡಲು ನಾಣ್ಯದ ಕುದುರೆ, ಒಳಗೆ ಬುದ್ಧಿಯೋ ಸೊನ್ನೆ. ಅಥವಾ ತೋಟ ಶೃಂಗಾರ ಒಳಗೆ ಗೋಣೀಸೊಪ್ಪು.' ಮೊದಮೊದಲು ವಾದಿಸಬೇಕೆಂದರೆ ಅವರ ಅವಸ್ಥೆ 'ಅತ್ತೆಯಮನೆಗೆ ಬಂದ ಹೊಸ ಸೊಸೆಗಿಂತ ಕಷ್ಟವಾಗಿ' ಇತ್ತು. ನ್ಯಾಯಾಲಯದ ಬಗ್ಗೆ ಅವರು ಆಡಿದ ಮಾತೂ ಸ್ವಾರಸ್ಯವಾಗಿದೆ. ಬೊಂಬಾಯಿ ಹೈಕೋರ್ಟಿನಲ್ಲಿ 'ನಿದ್ದೆ ಮಾಡುವುದು ಒಂದು ಭೂಷಣ' ವಂತೆ. ನ್ಯಾಯದೇವತೆ ಸದಾ ಕಣ್ಣುಮುಚ್ಚಿಕೊಂಡು ನ್ಯಾಯಾನ್ಯಾಯದ ತೂಕ ಮಾಡುತ್ತಾ ಇರುತ್ತಾಳೆ. ಅಭಿಮಾನಕ್ಕೆ ಒಳಗಾಗಿ ನ್ಯಾಯ ಕೆಟ್ಟೀತು ಎಂದು ಹಾಗೆ. ಆದರೆ ನೇಟಾಲು ಸುಪ್ರೀಮ್ ಕೋರ್ಟು 'ಮುಖ ನೋಡಿ ಮಣೆ ಹಾಕಿತು.'

ಇವರಿಗೆ unwelcome visitor—ಶಿವಪೂಜೆಯ ನಡುವೆ ಬಂದ ಕರಡಿ ಎಂಬ ಬಿರುದು ಆಫ್ರಿಕದ ಬಿಳಿಯರು ಕೊಟ್ಟುದು; ಅಗ್ರಿಮೆಂಟ್ ಎಂಬುದು ಗಿರ್ಮಿಟ್ ಆಗಿ, ಆಫ್ರಿಕದ ಹಿಂದೂಜನ ಗಿರ್ಮಿಟಿಯಾಗಳಾದುದು. ಕಾಶೀಕ್ಷೇತ್ರದಲ್ಲಿ ಪಂಡಾ ಜನರೊಡನೆ ವಾದಮಾಡಿ ಕಡೆಗೂ ಅವರಿಗೆ ಒಂದೇ ಕಾಸನ್ನು ಕೊಟ್ಟುದು; ಏಂತಸ್ಯಯುಕ್ತಾಗಿ ಇವರು ಅಗಸನಾದುದು, ಕೆಲಸಿಗನಾದುದು; ಒಳ್ಳೇ ಅಗಸ ಎಂದು ಗೋಖಲೆ ಇವರಿಗೆ ಬಿರುದುಕೊಟ್ಟುದು—ಮೊದಲಾದ ಪ್ರಸಂಗ ಓದಿ, ಆನಂದಿಸದವರಿಲ್ಲ. ಕಾಠೆಯವಾಡದ ಚಿಕ್ಕ ಪುಟ್ಟ ಸಂಸ್ಥಾನಗಳ ಶಿರಸ್ತೇದಾರ, 'ನಾಮುದಾರ್' ವೇಷಭೂಷಣಗಳಿಂದ ಹೆಂಗಸರಂತೆ ಅಲಂಕಾರ ಮಾಡಿಕೊಳ್ಳುವ ರಾಜ ಮಹಾರಾಜರು, ತಾವು ಮೊಟ್ಟಮೊದಲು ಇಸ್ತ್ರೀ ಮಾಡಿದ ಪ್ರಥಮ ಪ್ರಯತ್ನದ ಕಾಲರು, ಬಾಯಾರಿ ಬಿಸಿಲಲ್ಲಿ ಜೀವಬಿಡುತ್ತಿದ್ದಾಗ ಸೀರಿಸ ಚಿಲುಮೆ ಸಿಕ್ಕರೆ 'ನೀವು ಕುಡಿಯಿರಿ' 'ನೀವು ಕುಡಿಯಿರಿ' ಎಂದು ಮೊಗಲಾಯಿ ಮರ್ಯಾದೆ ಮಾಡುತ್ತ ನಿಂತ ಬಿಳಿಯ-ಕರಿಯ ಸಿಪಾಯಿಗಳ ಗುಂಪು, ಇವನ್ನು ಲೆಕ್ಕವಿಡಲು ಸಾಧ್ಯವೇ?

ತಾವು ಮೊದಲನೆಯ ಸಾರಿ ನೋಡಿದ ಕಾಂಗ್ರೆಸ್ಸಿನ ವರ್ಣನೆಯಲ್ಲಿ ಗಾಂಧೀಜಿಯ ಹಾಸ್ಯ ಬಹು ಕುಶಲವಾಗಿ ಮಿನುಗಿದೆ. 'ಕಾಂಗ್ರೆಸ್ಸು ವರುಷಕ್ಕೆ ಮೂರು ದಿನದ ಹಬ್ಬ! ಹಬ್ಬ ಮುಗಿದ ಕೂಡಲೇ ಅದು ನಿದ್ದೆಹೋಗುತ್ತದೆ.' ಸ್ವಯಂಸೇವಕ ದಳಕ್ಕೆ ಮನಸ್ಸಿನಲ್ಲಿ ಸೇವೆ ಮಾಡುವ ಇಚ್ಛೆ ಮಾತ್ರ ಬಹಳವಂತೆ. ಐನವಸಿಗೆ ಹೇಳಿದರೆ ಬಾಲಕ್ಕೆ ಹೇಳಿದಂತೆ ಇವರ ಕೆಲಸ. ಇವರ ನಡುವೆ 'ಎರಡೂ ಕೆಟ್ಟ ಅಭಾಗ್ಯರು ಪ್ರತಿನಿಧಿಗಳು.' ಇನ್ನು ವ್ಯವಸ್ಥೆಯ ಮಾತು ಹೇಳುವಹಾಗೆಯೇ ಇಲ್ಲ. ಒಬ್ಬೊಬ್ಬರಿಗೊಂದು ಅಡಿಗೆಯಮನೆ. ಅವರ ದೃಷ್ಟಿ ಇವರಿಗೆ ದೋಷ, ಇವರ ದೃಷ್ಟಿ ಅವರಿಗೆ ಪಾಪ. ಅವುಗಳ 'ತುಂಬ ಉಸಿರು ಬಿಡದ ಹಾಗೆ ಹೊಗೆ' ಪಾಕಶಾಲೆಯೂ ಅದೇ, ಪಾನಶಾಲೆಯೂ ಅದೇ, ಭೋಜನಶಾಲೆಯೂ ಅದೇ. ಅದು ಅಡಿಗೆಮನೆಯಲ್ಲ, ಪೆಟ್ಟಿಗೆ. ಎಲ್ಲ ದಿಕ್ಕಿನಲ್ಲೂ ಭದ್ರವಾದ ಮುಚ್ಚಳವೇ!' 'ಅಲ್ಲಿಯ ವಾಸನೆಯೋ' ಹೇಳತೀರದು. 'ಅದನ್ನು

ನೆನೆದರೆ ವಾಂತಿ ಬರುತ್ತದೆಯಂತೆ. ಇಲ್ಲಿಗೆ ಮುಗಿಯಲಿಲ್ಲ ನಮ್ಮ ನಾಗರಿಕತೆ. 'ಕೆಲವರು ರಾತ್ರಿ ತಮ್ಮ ವರಾಂಡಾಗಳಲ್ಲೇ ಮಲಮೂತ್ರ ವಿಸರ್ಜನೆ ಮಾಡಿ' ಪುಣ್ಯ ಕಟ್ಟಿಕೊಂಡರು. ಯಾರು ಅದನ್ನೆಲ್ಲ ಗುಡಿಸಬೇಕು. 'ಆ ಗೌರವ' ಗಾಂಧೀಜಿಗೇ 'ದಕ್ಕಿತು.' ಇನ್ನು ಕಾಂಗ್ರೆಸ್ ಸಭೆಯಲ್ಲೋ—ವಿಷಯನಿರ್ಣಯ ಸಭೆ ಒಂದು ನಗಾರಾಖಾನೆ; ಅಧ್ಯಕ್ಷ ಭಾಷಣ ಒಂದು ಮಹಾಗ್ರಂಥ. ಮುಖಂಡರಲ್ಲಿ ಇಬ್ಬರು ಎದ್ದು ಕಾಣುತ್ತಾರೆ. 'ರಾಜವೈಭವ'ದ ಫಿರೋಜ ಷಾ ಮೆಹತಾ, ಎಲ್ಲಿದ್ದರೆ ಅಲ್ಲಿ 'ದರಬಾರು' ಕಲೆಸುವ ಲೋಕಮಾನ್ಯರು.

ವ್ಯಕ್ತಿಚಿತ್ರದಲ್ಲಿ ಹಾಸ್ಯವನ್ನು ನಯವಾಗಿ ಸಂಪಾದಿಸುವ ಕಲೆ ಗಾಂಧೀಜಿಗೆ ಸಾಧಿಸಿದೆ. ಆತ್ಮಕಥೆಯಲ್ಲಿ ಬರುವ ನಾರಾಯಣ ಹೇಮಚಂದ್ರನನ್ನು ಯಾರು ಮರೆಯಬಲ್ಲರು? ಇಂಥ ಹುಚ್ಚ ಬರಜೋಜೀ ಪಾದುಷಾ ಒಬ್ಬ ಇದಾನೆ. ಕುದುರೆಯ ಮೇಲೆ ನೋಡಲಾರದೆ ಕರುಣೆಗೊಂಡು ಟ್ರಾಮ್ ಬಂಡಿಗೆ ನಮಸ್ಕಾರ ಮಾಡಿದನಂತೆ. ಆತ 'ಹುಟ್ಟಿದ್ದು ಪಾರಸೀಕುಲವಾದರೂ ತಿನ್ನುವುದು ಶಾಕಾಹಾರ'ವಂತೆ. ವಿಮರ್ಶೆಯ ನಿರ್ಘಯ ಯಾರನ್ನೂ ಬಿಡದು; ಎಲ್ಲರೂ ಅದಕ್ಕೆ ತುತ್ತೇ. ಗೋಖಲೆ ಗಾಂಧೀಜಿಗೆ ಗುರುಸಮಾನರು. ಅವರನ್ನೂ ಈ ಹಾಸ್ಯದ ಕತ್ತಿ ಸೋಕದೆ ಹೋಗಲಿಲ್ಲ. ಗೋಖಲೆಯ ಪ್ರತಿಯೊಂದು ಮಾತಿನಲ್ಲೂ ರಾನಡೇಯವರ ಮೇಲಿನ ಗೌರವದ ಮುದ್ರೆ ಒತ್ತಿರುತ್ತಿತ್ತು. ಅದನ್ನು ಗಾಂಧೀಜೀ ಹೀಗೆ ತಿಳಿಸಿದಾರೆ: 'ರಾನಡೇಯವರು ಹೀಗೆ ಹೇಳುತ್ತಿದ್ದರು ಎಂಬ ಮಾತು ಇವರಿಗೆ ಸೂತ ಉವಾಚ ಇದ್ದಂತೆ.'

ಎಂಥ ಗಂಭೀರ ಪ್ರಸಂಗದಲ್ಲೂ ಗಾಂಧೀಜಿಗೆ ಹಾಸ್ಯದ ರುಚಿ ತಪ್ಪಿಲ್ಲ. ಸಾಧಾರಣವಾಗಿ ಬಿಂಕವಿರಬೇಕಾದಕಡೆ ಇವರಿಗೆ ವಿನೋದ. ತಮ್ಮ ಹೆಂಡತಿಗೆ ಹೇಳಬಾರದ ಕಷ್ಟವನ್ನೂ ಕೊಟ್ಟಿದಾರೆ ಗಾಂಧೀಜಿ. 'ಅದರಲ್ಲಿ ಔಚಿತ್ಯಕ್ಕಿಂತ ಅಧಿಕಾರವೇ ಬಲ'ವಾಗಿತ್ತು. ದಾಂಪತ್ಯದಲ್ಲಿ 'ಲೋಪ ನನ್ನದು, ಆದರೆ ಕಷ್ಟ ಅನುಭವಿಸುವುದು ಮಾತ್ರ ಆಕೆಯದು.' ಲೋಕದಲ್ಲಿ ಔಚಿತ್ಯಮೀರಿ ಹೆಂಡತಿಯಮೇಲೆ ಅಧಿಕಾರ ತೋರಿಸದ

ಗಂಡಂದಿರು ಎಷ್ಟು ಜನ? ಲೋಪ ತಮ್ಮದು ಆದರೂ ಕಷ್ಟ ಅವರಿಗೇ ಹೊರಿಸದವರು ಯಾರು? ಒಂದು ಬಹುವ್ಯಾಪಿಯಾದ ಸಂಪ್ರದಾಯದ ತಿರುಳನ್ನೇ ಗಾಂಧೀಜೀ ವಿಮರ್ಶಿಸಿದಾರೆ. ನಮ್ಮ ಬೆರಳನ್ನೇ ನಮ್ಮ ಕಣ್ಣಿಗೆ ಚುಚ್ಚಿದಾರೆ. ಆದರೆ ಈ ನೋವಿನಿಂದ ಕಣ್ಣಲ್ಲಿ ಬರುವುದು ರಕ್ತವಲ್ಲ, ನಗೆಯ ನೀರು. ಒಂದು ಸಲ ಹಡಗಿನ ಪಯಣ. ದೊಡ್ಡ ತುಫಾನು ಒಂದು ಬಂತು. ಹಡಗು ಮುಳುಗಿ ಹೋಗುತ್ತದೆಯೇನೊ ಎಂಬಹಾಗೆ ಅಲೆಗಳಿದ್ದವು. 'ಆಗ ಎಲ್ಲರ ನಾಲಗೆಯಮೇಲೂ ಈಶ್ವರಾಧೀನ ಎಂಬ ಒಂದೇ ಶಬ್ದ. ನಮಾಜು ಭಜನೆ ಒಂದೇ ಸವನೆ ನಡೆಯಿತು.' ಒಂದು ದಿನವೆಲ್ಲ ಹೀಗೆ ಕಳೆಯಿತು. ಆಗ ಜಾತಿ ಮತ ಭೇದಗಳು ಎಲ್ಲ ಹೋದವು. 'ತುಫಾನು ತೊಲಗಿಹೋಯಿತು. ಎಲ್ಲರ ಮೋರೆ ಅರಳಿದವು. ಅಪಾಯದ ಜೊತೆಯಲ್ಲೇ ದೇವರ ಸ್ಮರಣೆಯೂ ದೂರವಾಗಿ ಹೋಯಿತು. ಮೃತ್ಯುಭಯ ಕಳೆಯಿತು. ಒಡನೆಯೆ ಮಾಯೆ ಮತ್ತೆ ಕವಿದಿತು.'

ಬರೆಹಕ್ಕಿಂತ ಮಾತಿನಲ್ಲಿ ಗಾಂಧೀಜಿಯ ಹಾಸ್ಯರಸ ಹೆಚ್ಚು ಹೊಳೆಯುತ್ತದೆ. ಆ ಸಕ್ಕು ನಗಿಸುವ ಕಲೆಗೆ ಮಾತಾಡುವಾಗ ದೊರೆವ ಅವಕಾಶ ಬರೆವಾಗ ಕಡಮೆ. ಅಂಥ ಅವಕಾಶವನ್ನು ಗಾಂಧೀಜೀ ಪೂರಾ ಬಳಸಿಕೊಂಡು ಬಿಡುತ್ತಾರೆ. ಒಂದೇ ಗಳಿಗೆ ಅವರ ಬಳಿ ಕೂತರೆ ಸಾಕು ಅವರ ವಿನೋದದ ರುಚು ಗೊತ್ತಾಗುತ್ತದೆ. ಗಾಂಧೀಜೀ ಅಂದರೆ ಏನೋ ಹಿಮಾಲಯ ಬೆಟ್ಟವಿದ್ದಹಾಗೆ. ಅವರ ಸುತ್ತಲೂ ಎಲ್ಲಾ ಥಳಿ, ಎಲ್ಲಾ ಗಂಭೀರ, ಎಲ್ಲಾ ಮೌನ ಎಂದು ಜನ ತಿಳಿಯುತ್ತಾರೆ. ನಮ್ಮಲ್ಲಿ ಶ್ರೇಷ್ಠರಾದವರ ಸುತ್ತ ಯಾವಾಗಲೂ ಒಂದು ಮಹಾಗಾಂಭೀರ್ಯದ ಗೆರೆ ಎಳೆದಿರುತ್ತಾರೆ. ಆ ಮಹಾಜೀವಿಗಳಿಗೆ ಅದು ಗೊತ್ತೇ ಇರದಿದ್ದರೂ ಅವನ ಸುತ್ತಲಿನವರು ಮಾತ್ರ ಆ ಬಿಕ್ಕಟ್ಟು ಬಲವಾಗಿ ಇಡುತ್ತಾರೆ. ಅಲ್ಲಿ ಹೋಗಬೇಕಾದರೆ ಬದರಿಕಾಶ್ರಮದ ಪ್ರಯಾಣ ಮಾಡಿದಹಾಗೆ. ಸ್ವಲ್ಪ ತೂಕ ತಪ್ಪಿದರೆ ಪಪಾತ. ಪರ್ಣಕುಟಿಯಲ್ಲಿ ಇಂತಹ ಹುಚ್ಚು ಇಲ್ಲ. ಹಿಮಾಲಯವೇ ಇದುರಿಗೆ ಕೂತಿರುತ್ತದೆ. ಆದರೆ ನಮ್ಮಮೇಲೆ ಆ ಮಂಜಿನ ಗಡ್ಡೆ ಕವಿದು ಬೀಳುವುದಿಲ್ಲ. ಕುಣಿಕುಣಿವ ಗಂಗಾನದಿಯು

ನೀರಲ್ಲಿ ಮುಳುಗುತ್ತೇವೆ. ಗಾಂಧೀಜೀ ಒಂದು ನಗೆಮಾತಾಡಿ ನಮ್ಮ ಛಳಿ ಕಳೆಯುತ್ತಾರೆ. ನಮ್ಮನ್ನು ಗೇಲಿ ಎಬ್ಬಿಸಿ ಹಗುರಾಗಿ ಎತ್ತಿ ಆ ನಗೆಯ ಗಂಗೆಯಲ್ಲಿ ಅದ್ದುತ್ತಾರೆ. ಆಯಿತು; ಅಲ್ಲಿಂದ ಮುಂದೆ ನಾವು ಅವರ ಗೆಳೆಯರು. ಆ ವಿನೋದದಲ್ಲೇ ಗಾಂಧೀಜಿಯ ಗೆಲವೆಣ್ಣು ಕೂತಿದಾಳೆ.

ಗಾಂಧೀಜಿಗೆ ೧೯೩೭ರಲ್ಲಿ ರಕ್ತದ ವೇಗ ತುಂಬ ಹೆಚ್ಚಿ ಮೈ ಬಹಳ ಅಸ್ವಸ್ಥವಾಯಿತು. ಆಗ ಅವರಿಗೆ ಬೇಕಾಗಿದ್ದುದು ಪೂರ್ಣ ವಿಶ್ರಾಂತಿ. ಮೈ ಮನಸುಗಳೆರಡಕ್ಕೂ ಹಿತವಾಗಿ ವಿರಾಮ ಸಿಕ್ಕರೆ ಆ ಬೇನೆ ಗುಣವಾಗಬಹುದು. ಆಗ ಮೈಸೂರು–ಕರ್ನಾಟಕ ಆ ಭಾಗ್ಯ ಕಟ್ಟಿಕೊಂಡಿತು. ಕನ್ನಡ ಜನರ ಪುಣ್ಯ ಹಣ್ಣಾಗಿ ನಂದೀ ಬೆಟ್ಟದಲ್ಲಿ ಅವರು ವಿಶ್ರಾಂತಿ ತೆಗೆದುಕೊಳ್ಳುವಹಾಗೆ ಏರ್ಪಾಡಾಯಿತು. ಅವರನ್ನು ನೋಡಿಕೊಳ್ಳಲು ಮೇಲ್ವಿಚಾರಣೆಗಾಗಿ ಅಮಾತ್ಯ ರಾಜಗೋಪಾಲಾಚಾರ್ಯರೇ–ಆಗ ಅವರು ಅಮಾತ್ಯರಾಗಿರಲಿಲ್ಲ–ನಿಂತಿದ್ದರು. ಅವರ ಜೊತೆಗೆ ದೇಶಪಾಂಡೆ ಗಂಗಾಧರ ರಾಯರು. ಮಹದೇವ ದೇಸಾಯಿ ಇದ್ದರೆಂದು ಬೇರೆ ಹೇಳಬೇಕಾದುದೇ ಇಲ್ಲ. ಇವರೆಲ್ಲರಿಗೂ ಕಣ್ಣಲ್ಲಿ ಕಣ್ಣು. ಗಾಂಧೀಜೀ ವಿಶ್ರಾಂತಿ ತೆಗೆದುಕೊಳ್ಳದೆ ಏನಾದರೂ ಕೆಲಸ ಮಾಡುತ್ತ ಮೈ ಬಳಲಿಸಿಕೊಳ್ಳುತ್ತಾರೆಯಲ್ಲ ಎಂದು ಇವರಿಗೆ ವ್ಯಥೆ. ಗಾಂಧೀಜೀ ಹಟಮಾರಿ ರೋಗಿ. ಅವರು ಹೋದದ್ದೇ ದಾರಿ. ಇವರೆಲ್ಲ ಗುಂಪುಗೂಡಿ ಆಲೋಚನೆ ಮಾಡಿದರು. ಗಾಂಧೀಜಿಯನ್ನು ಸುಮ್ಮನೆ ಇರುವಂತೆ ಒಪ್ಪಿಸಲು ಏನು ಉಪಾಯ? ಕೊನೆಗೆ ಒಬ್ಬರು ಅಂಜುತ್ತ ಅಂಜುತ್ತ 'ಬಾಪು, ನೀವು ಸದಾ ಏನಾದರೂ ಕೆಲಸ ಹಚ್ಚಿಕೊಂಡು ಕೂಡುತ್ತೀರಿ. ಸೋಮವಾರ ಬಿಡುವು ಅಂತ ಹೆಸರು. ಆ ದಿನವೂ ಯಾವುದಾದರೂ ಒಂದು ಕೆಲಸ ಮಾಡುತ್ತಲೇ ಇರುತ್ತೀರಿ. ಒಂದು ದಿನವಾದರೂ ಬಿಡುವಾಗಿ ಇರಬಾರದೇ? ವಾರಕ್ಕೆ ಒಂದು ದಿನವಾದರೂ ಬಿಡುವು ಬೇಡವೇ? ಒಂದೇ ದಿನ. ಆ ಹೊತ್ತು ಓದಬಾರದು, ಬರೆಯಬಾರದು. ಸುಮ್ಮನೆ ಆಟ ಆಡಬೇಕು.'

ಈ ಉಪದೇಶ ಕೇಳಿ ಗಾಂಧೀಜೀ ನಕ್ಕರು. ಏನು ಆಟ ಆಡಬೇಕು? 'ಏನು ಇಸ್ಪೀಟು ಆಡೋಣವೇ? ಇಲ್ಲ, ಪಿಂಗ್ ಪಿಂಗಾಡೋಣವೋ?'

ಕಾಲು ಜಾರಿದಹಾಗಾಯಿತು. ಏನು ಹೇಳಬೇಕು ಈ ಪ್ರಶ್ನೆಗೆ. ಕೈಸೋಕಿದ್ದೇ ತಡ ಬೆಸ್ನ ಮಣ್ಣು ಮಾಡಿದಹಾಗಾತು ಈ ಕುಸ್ತಿ. 'ಯೋಚನೆಮಾಡಿ ಹೇಳುತ್ತೇನೆ' ಎನ್ನಬೇಕಾಯಿತು. ಅಂದದ್ದಷ್ಟೆ; ಯೋಚನೆ ಹರಿಯಲಿಲ್ಲ. ಮೌನವೇ ಉತ್ತರವಾಯಿತು.

ಅವರನ್ನು ಗೇಲಿಮಾಡುತ್ತ ಗಾಂಧೀಜಿ ಹೇಳಿದರು. 'ಏನು ಮತ್ತೆ. ನಿಮ್ಮ ಸೂಚನೆ ಗಾಳಿಗೇ ಹಾರಿಹೋಯಿತಲ್ಲ. ಅಷ್ಟೆ, ಮತ್ತೇ ನಾದೀತು? ಕೆಲಸ ಎಂದರೆ ಆಟ, ಆಟ ಎಂದರೆ ಕೆಲಸ ಆಗಬೇಕು. ಹಾಗಿರುವಾಗ ನೀವು ಏನುತಾನೆ ಹೇಳೀರಿ?'

'ಊಹೂ. ಹಾಗಲ್ಲ. ಆಟ ಎಂದರೆ ಪೂರಾ ಬಿಡುವು; ಕೆಲಸಗಿಲಸ ಏನೂ ಇಲ್ಲ.'

'ಸರಿ. ಹಾಗಾದರೆ ನಾನೇ ಹೇಳಲೆ? ಬಡಗಿ ಸಾಮಾನು ತಂದು ಕೊಡಿರಿ. ಮುರುಕು ರಾಟೆ, ಸೊಟ್ಟ ಕದಿರು ಇಲ್ಲವೆ. ಅವನ್ನೆಲ್ಲ ಸರಿ ಮಾಡುತ್ತೇನೆ.'

'ಇಲ್ಲ ಇಲ್ಲ. ಅದಾಗದು. ನಿಮಗೆ ಸದಾ ಖಾದಿಯ ಚಿಂತೆಯೇ ಹಿಡಿದಿದೆ. ರಾಟೆ ಕೊಟ್ಟರೆ ಮತ್ತೆ ಅದೇ ಧ್ಯಾನವೇ. ಇಲ್ಲ, ಏನಾದರೂ ಒಂದು ಹೊಸದು ಬೇಕು.'

'ಬಿಡುವು ಅಂದರೆ ಮೈಗಳ್ಳತನವೇ? ವಿಶ್ರಾಂತಿಯೆಂದರೆ ಕೆಲಸ ಬಿಟ್ಟು ಬೇರೆ ಕೆಲಸ ಮಾಡುವುದು; ಸೋಮಾರಿತನವಲ್ಲ. ಇದು ನೋಡಿ. ದಕ್ಷಿಣ ಆಫ್ರಿಕದಲ್ಲಿ ಮಾಡಿದ ಹಾಗೆ ಮೇಜು ಬೀರುಗಳನ್ನು ಮಾಡ ಲೇನು? ಇಲ್ಲ, ಟೋಪಿ ಹೊಲಿದು ಕೊಡಲೇ?'

'ಹೂ. ಅದು ಸರಿ. ಹಾಗಾದರೆ ನಾವು ನಿಜವಾಗಿ ಗಾಂಧೀ ಟೋಪಿಯನ್ನೇ ಮಾರಬಹುದು.'

'ಏನು ಹೊಲಿಯಲಾರೆ ಎಂತಲೇ? ಆಫ್ರಿಕಾದಲ್ಲಿ ಕಸ್ತೂರಬಾಗೆ ಜಾಕೆಟ್ಟು ಹೊಲಿದುಕೊಟ್ಟಿದ್ದೆ. ಆಕೆಯನ್ನು ಕೇಳಿ ನೋಡಿ ಬೇಕಾದರೆ. ಆಕೆಗೆ ಅದು ಸರಿಯಾಗಿತ್ತೋ ಇಲ್ಲವೊ ಅಂತೂ ತೊಡುತ್ತಿದ್ದಳು.

ಒಂದು ವೇಳೆ ತೊಡದೆ ಹೋಗಿದ್ದರೂ ನಾನು ಹೊಲಿದು ಕೊಟ್ಟಿದ್ದು ಮರೆತಾಳೆಯೇ.'

ಅವರ ಸೂಚನೆಯ ಹಾಗೆ ಇವರ ಸೂಚನೆ ಗಾಳಿಗೆ ಹಾರಲಿಲ್ಲ. ನಗೆಯಾಗಿ ಅವತರಿಸಿತು. ರೋಗಿಗೆ ನಗೆ ಪಥ್ಯವಲ್ಲವೆ!

ಫಿರೋಜಷಾ ಮೆಹತಾಗೆ ನಾಲಗೆಯ ತುದಿಯಲ್ಲೇ ಕಾನೂನು ಎಲ್ಲಾ ಇತ್ತಂತೆ. ಅದಕ್ಕೇ ಅವರಿಗೆ ವಕೀಲಿಯಲ್ಲಿ ಅಷ್ಟು ಹೆಸರು ಬಂದದ್ದು. ಗಾಂಧೀಜಿಯ ತುಟಿಯಲ್ಲಿ ನಗೆ ತುಳುಕುತ್ತಾ ಇರುತ್ತದೆ. ಸ್ವಲ್ಪ ಅವಕಾಶ ಸಿಕ್ಕರೆ ಸಾಕು ಹೊರಗೆ ಬಂದುಬಿಡುತ್ತದೆ. ಒಂದು ಸಲ ಸಂಯುಕ್ತಪ್ರಾಂತದಲ್ಲಿ ತಿರುಗಾಡುತ್ತಿದ್ದರು. ಒಂದು ಊರಿನಲ್ಲಿ ಒಂದು ವಿಚಿತ್ರ ವಸ್ತುಸಂಗ್ರಹಾಲಯ. ಅದರ ವ್ಯವಸ್ಥಾಪಕ ಬಂದು ಗಾಂಧೀಜಿಯನ್ನು ಕೇಳಿದ: ನಿಮ್ಮ ಬಲಗೈಯ ಅಚ್ಚುಗುರುತು ನಮಗೆ ಬೇಕು, ಅದನ್ನೂ ಇಲ್ಲಿ ಇಡುತ್ತೇವೆ. ಗಾಂಧೀಜಿಗೆ ಈ ವಿಲಕ್ಷಣ ಪ್ರಾರ್ಥನೆ ಕೇಳಿ ನಗು ಬಂತು. 'ಅಲ್ಲವಯ್ಯಾ, ಇಂಥವೆಲ್ಲ ಕಳ್ಳರು-ಕೆಟ್ಟ ಚಾಳಿಯ ಜನರು ಇವರಿಂದ ಪೋಲೀಸರು ತೆಗೆದುಕೊಳ್ಳುತ್ತಾರೆ. ನಿನಗೇಕೆ ಬೇಕು? ಹೋಗಲಿ ಕೈಯ ಬದಲು ನನ್ನ ಮೂಗಿನದೋ ಕಿವಿಯದೋ ಗುರುತು ತೆಗೆದುಕೊಳ್ಳಬಾರದೆ?' ಎಂದು ತೇಲಿಸಿಬಿಟ್ಟರು. ಇನ್ನೊಂದು ಸಲ ಇಂಗ್ಲೆಂಡಿನಲ್ಲಿ ಯಾರೋ ಅಮೆರಿಕದ ಹೆಂಗಸು ಭಕ್ತಿಯಿಂದ ತಮ್ಮ ದೇಶಕ್ಕೆ ಬರಬೇಕೆಂದು ಅವರನ್ನೂ ಆಹ್ವಾನಿಸಿದಳು. 'ಅಲ್ಲಿ ನೀವು ಅಂದರೆ ಎಲ್ಲರಿಗೂ ಹುಚ್ಚು' ಎಂದು ಸ್ತುತಿ ಮಾಡಿದಳು. ಗಾಂಧೀಜಿಯ ಮುಂದೆ ಈ ಆಟವೆ? 'ಸರಿಸರಿ. ನಾನು ಅಲ್ಲಿಗೆ ಬಂದವರು ನಿಮ್ಮವರು ಎಲ್ಲಾದರೂ ಒಂದು ಮೃಗಾಲಯಕ್ಕೆ ಕರೆದುಕೊಂಡು ಹೋಗಿ ಸೇರಿಸಿಬಿಟ್ಟಾರು. ನನ್ನ ಸ್ನೇಹಿತರೆಲ್ಲ ಮೊದಲೇ ಎಚ್ಚರಿಕೆ ಹೇಳಿದಾರೆ' ಎಂದು ಇದ್ದವರನ್ನೆಲ್ಲ ನಗಿಸಿಬಿಟ್ಟರು.

ಇಂಥ ಗೆಣೆಯನೇ ಒಬ್ಬ-ಇಂಗ್ಲೆಂಡಿನ ಸಭೆಯೊಂದರಲ್ಲಿ— 'ಗಾಂಧೀಜೀ, ನಿಮಗೆ ಯಾವಾಗಲಾದರೂ ಹಿಂಸೆಯ ಭಾವ ಬರುವುದಿಲ್ಲವೆ? ಎಂದಾದರೂ ಕಹಿ ಮಾತು ನೀವು ಆಡಿದೀರಾ?' ಎಂದು ಕೇಳಿದ.

ಅಂಜಿಸಂತೆ ನೇರಾಗಿ ಒಂತು ಉತ್ತರ. 'ಈ ಮಾತು ಕಸ್ತೂರಬಾಸನ್ನು ಕೇಳಿ ನೋಡಿ.' ಸಭೆಗೆ ಸಭೆಯೇ ಗೊಳ್ಳೆಂದು ನಕ್ಕರು. ಕೇಳಿದ ಪ್ರಶ್ನೆ ಕೊಂಚ ನಾಜೂಕಾದುದು. ಅದಕ್ಕೆ ಸ್ಪಷ್ಟವಾದ ಲೆಕ್ಕಾಚಾರದ ಉತ್ತರ ಕೊಟ್ಟರೆ ಸ್ವಾರಸ್ಯವಿಲ್ಲ. ಭಾರವಾಗುತ್ತದೆ. ಆ ಹೊತ್ತಿನಲ್ಲಿ ಆ ನಗೆ ನುಡಿಯೇ ಸರಿಯಾದ ಉತ್ತರ. ಆದರೆ ಇಂಥ ಉತ್ತರ ಆತ್ಮನಿಗ್ರಹದಿಂದ ಅಲ್ಲದೆ, ಸ್ಥಿತಪ್ರಜ್ಞೆಯಿಲ್ಲದೆ ಬರುವ ಸಂಭವ ಇಲ್ಲ.

ಅಪಶಬ್ದ ಭಯಂ ನಾಸ್ತಿ ಅಪ್ಪಳಾಚಾರ್ಯ ಸನ್ನಿಧೌ ಎಂದು ಪಂಡಿತರಲ್ಲಿ ಒಂದು ರೂಢಿಯ ಮಾತು. ಅಪ್ಪಳಾಚಾರ್ಯರು ಹಿರಿಯ ಪಂಡಿತರು. ಅವರೆದುರಿನಲ್ಲಿ ಅಪಶಬ್ದ ಹೊರಡುವ ಹಾಗೇ ಇಲ್ಲ. ಬುದ್ಧಿಗೆ ಆ ಮಟ್ಟ ತಾನಾಗಿಯೇ ಅಲ್ಲಿ ಬರುತ್ತದೆ. ಗಾಂಧೀಜಿಯ ಸನ್ನಿಧಿಯಲ್ಲಿ ಅಸತ್ಯ ಅಹಂಕಾರ ಭಯವಿಲ್ಲ. ಡಂಬ, ಬಡಾಯಿ, ಮೋಸ ಯಾವುದೂ ಅವರ ಇದುರಿನಲ್ಲಿ ನಡೆಯುವುದಿಲ್ಲ. ಪರ್ಣಕುಟಿಯೊಳಗೆ ಹೋಗಿ ಕೂತರೆ ನಮ್ಮ ಇದುರಿಗೇ ನಾವು ಕೂತಂತೆ ಆಗುತ್ತದೆ. ಅಲ್ಲಿ ಯಾರಿಗೆ ಮೋಸ ಮಾಡಬೇಕು? ಯಾರ ಸಲುವಾಗಿ ಡಂಬ ಬಡಾಯಿ? ಅದು ಅಂಥ ದುರ್ವಾರ ಶಕ್ತಿ.

ಯಾರೋ ದಂಪತಿಗಳು ತಮ್ಮ ಒಡವೆಗಳನ್ನೆಲ್ಲ ಗಾಂಧೀಜಿಗೆ ಒಂದು ಸಭೆಯಲ್ಲಿ ದಾನಮಾಡಿದರು. ಗಂಡನನ್ನು ಕೇಳಿದರು. ಗಾಂಧೀಜಿ 'ಇದಕ್ಕೆ ನೀನು ಒಪ್ಪಿದೀಯ.' ಆತ ಹೇಳಿದ. 'ಅವು ಆಕೆಯ ಒಡವೆ. ನನಗೇನು ಅಧಿಕಾರ ಅದರಮೇಲೆ. ಆಕೆಯ ಇಷ್ಟ.' ಗಾಂಧೀಜೀ ಹೇಳಿದರು. 'ನಿಮ್ಮ ವಯಸ್ಸಿನಲ್ಲಿ ನಾನು ಇಷ್ಟು ಬುದ್ಧಿವಂತ ಗಂಡನಾಗಿರಲಿಲ್ಲ.' ಈ ಮಾತು ಹಾಗೂ ಸರಿ, ಹೀಗೂ ಸರಿ.

ಗಾಂಧೀಜೀ ಯಾರನ್ನೂ ಬೇಡ ಎನ್ನುವುದಿಲ್ಲ. ಅದರಲ್ಲೂ ವಿರೋಧ ಪಕ್ಷಕ್ಕೆ ತೀರಾಪರ್ಶನಸುಲಭರು. ಅದೊಂದು ಅವರ ವಿಲಕ್ಷಣ ಸ್ವಭಾವ. ತಮ್ಮ ಅನುಯಾಯಿಗಳಿಗಿಂತ ತಮ್ಮ ವಿರೋಧಿಗಳಬಗ್ಗೆ ಆದರ ಹೆಚ್ಚು. ಒಮ್ಮೊಮ್ಮೆ ಅಂಥವರ ಮಾತು ಪೂರಾ ವಿಚಿತ್ರವಾಗಿ ಸಂಭಾಷಣೆ ನಡೆಯುವುದೇ ಕಷ್ಟವಾಗುತ್ತದೆ. ಅಂಥ ಸಂದರ್ಭದಲ್ಲಿ ಉಪಾಯವಾಗಿ ಗಾಂಧೀಜೀ ಮಾತು ಮುಗಿಸುತ್ತಾರೆ.

ಮಧುರೆಗೆ ಹೋಗಿದ್ದಾಗ ಒಬ್ಬ ಸನಾತನಿ ಪಂಡಿತರು ಗಾಂಧೀಜಿಗೆ ಗಂಟುಬಿದ್ದರು. ಗಾಂಧೀಜೀ ಹರಿಜನ ಚಳುವಳಿಗಾಗಿ ದೇಶವೆಲ್ಲ ಸುತ್ತುತ್ತಿದ್ದರು. ಆಗ ಹೋದಹೋದಲ್ಲೆಲ್ಲ ಅಸ್ಪೃಶ್ಯತೆ ಶಾಸ್ತ್ರಸಮ್ಮತವೋ ಅಲ್ಲವೋ ಎಂಬ ಚರ್ಚೆ ಏಳುತ್ತಿತ್ತು. ಸಾವಧಾನದಿಂದ ಎಲ್ಲೆಲ್ಲೂ ಚರ್ಚೆ ನಡೆಯುತ್ತಿತ್ತು. ಮಧುರೆಯ ಈ ಪಂಡಿತರೂ ಅದೇ ಮಾತೇ ತೆಗೆದರು.

'ಗುಡಿಗಳು ಇರುವುದು ಸ್ತ್ರೀ ಶೂದ್ರರಿಗಾಗಿ. ಅವರಿಗೇ ದೇವಾಲಯ ಪ್ರವೇಶಾಧಿಕಾರ ಇರುವುದು. ಶಾಸ್ತ್ರ ಹಾಗೆ ಹೇಳುತ್ತದೆ. ಈಗಿನ ಕಾಲದಲ್ಲಿ ಎಲ್ಲರೂ ಕರ್ಮಚಂಡಾಲರಾಗಿದಾರೆ. ಶೂದ್ರರು ಮಾತ್ರವೇ ತಮ್ಮ ಸ್ವಧರ್ಮ ಬಿಟ್ಟಿಲ್ಲ. ಹಾಗೆಯೆ ಗರತಿಯರಾದ ಹೆಂಗಸರಿಗೂ ದೇವಾಲಯ ಪ್ರವೇಶಾಧಿಕಾರ ಉಂಟು.'

ಗಾಂಧೀಜೀ ಕೇಳಿದರು: 'ಒಬ್ಬ ಬ್ರಾಹ್ಮಣ ಕರ್ಮಚಂಡಾಲನಾಗಿದ್ದು ಅವನ ಹೆಂಡತಿ ಗರತಿಯಾಗಿದ್ದರೆ ಆಕೆಗೆ ದೇವಾಲಯ ಪ್ರವೇಶ ಉಂಟೆ?'

'ಆಕೆಗಂತೂ ಸರಿಯೇ ಸರಿ. ಆಕೆಯ ಪರಿಶುದ್ಧತೆ ಗಂಡನನ್ನೂ ಕೂಡ ಶುದ್ಧಗೊಳಿಸುತ್ತದೆ.'

'ಹಾಗೆಂದರೆ–ಗಂಡನಾದವನು ಬೇಕಾದ ಅಕೃತ್ಯ ಮಾಡಲಿ ಪರಿಶುದ್ಧಳಾದ ಹೆಂಡತಿ ಇದ್ದರೆ ಸಾಕು ತಾನೂ ಶುದ್ಧನಾಗುತ್ತಾನೆ ಎಂತಲೇ?'

'ಹೌದು. ಅವನ ಹೆಂಡತಿ ಅವನನ್ನು ಕಾಪಾಡುತ್ತಾಳೆ.'

'ಅಲ್ಲ; ಸಕಲ ಪಾಪಗಳನ್ನೂ ಅವನು ಮಾಡಲಿ ಹೆಂಡತಿ ಪುಣ್ಯಶೀಲೆಯಾದರೆ ಆಯಿತೇ?'

'ಹೌದು. ಹೆಂಡತಿಯೇ ಅವನ ರಕ್ಷಣೆ. ಅವನು ಮಾಡಿದ್ದು ಪಾಪವೇ ಆದರೂ ಪರಿಹಾರವಾಗುತ್ತದೆ.'

ಗಾಂಧೀಜಿಗೆ ನಗೆ ತಡೆಯುವುದಾಗಲಿಲ್ಲ. ಆದರೂ ಮಾತು ಮುಂದರಿಸಿದರು. 'ಸರಿಸರಿ. ಒಳ್ಳೆಯ ಉಪಾಯ. ಪಾಪ ಮಾಡುವುದು ಮಾಡಿ ಅದರ ಫಲ ನಮಗೆ ಅಂಟದೆ ಇರಬೇಕಾದರೆ ಒಳ್ಳೆಯ ಹೆಂಡತಿ ಒಬ್ಬಳನ್ನು ಗಂಟು ಹಾಕಿಕೊಂಡರೆ ತೀರಿತು.'

‘ಅಷ್ಟೇ. ಅದೇ ಸರಿ.’ ಸುತ್ತಲೂ ಇದ್ದವರಿಗೆ ನಗೆ ಹೋಗಿ ಅಸಹ್ಯ ಹುಟ್ಟಿರಬೇಕು.

ಗಾಂಧೀಜಿಗೆ ಇನ್ನೂ ಆಸೆ. ಆ ಪಾಪ, ಪಂಡಿತನ ಹುಚ್ಚು ಬಿಡಿಸೋಣ ಎಂದು. ‘ಇದು ನೋಡಿ ಪಂಡಿತರೆ! ನಮ್ಮ ದೇಶದ ಹೆಂಗುಸರೆಲ್ಲ ಪುಣ್ಯಶಾಲಿಗಳೇ ಎನ್ನೋಣ. ಅವರ ಪಾಪ ನಮಗೇನು ಗೊತ್ತು. ಅಂದಮೇಲೆ ನಮ್ಮ ದೇಶದವರೆಲ್ಲ ಪರಿಶುದ್ಧರೇ ಅಲ್ಲವೆ?’

‘ಹಾಗಲ್ಲ. ಹೆಂಗುಸರು ರಾಮಾಯಣಾದಿ ಗ್ರಂಥಗಳಲ್ಲಿ ಹೇಳಿದ ಹಾಗೆ ಪರಿಶುದ್ಧರಾಗಿರಬೇಕು.’

‘ಅದನ್ನು ಹೇಗೆ ತಿಳಿದುಕೊಳ್ಳುವುದು. ಹೇಗೆ ನಿರ್ಧಾರ ಮಾಡುವುದು?’

‘ಅಗ್ನಿಪರೀಕ್ಷೆಯ ಮೂಲಕ. ಸೀತೆಯ ಹಾಗೆ ಅಗ್ನಿಪ್ರವೇಶ ಮಾಡಿ ಪಾತಿವ್ರತ್ಯ ಸ್ಥಾಪಿಸಬೇಕು.’

‘ಅದರಲ್ಲಿ ಸುಟ್ಟುಕೊಂಡವರೆಲ್ಲ ಅಪವಿತ್ರರು ಎನ್ನಬೇಕೋ?’

‘ಸಂದೇಹವೇನು? ನಿಸ್ಸಂದೇಹವಾಗಿಯೂ—’

ಈ ಚೆಲ್ಲಾಟ ಗಾಂಧೀಜಿಗೆ ಇನ್ನು ತಡೆಯಲಾಗಲಿಲ್ಲ. ಇಂಥ ಮೊಂಡನನ್ನು ಮಾಡುವುದೇನು! ಮಾತೇ ಮುಗಿಸಿದರು. ‘ಸರಿ ನಮಸ್ಕಾರ. ತಾವಿನ್ನು ಹೊರಡಬಹುದು’ ಎಂದು ಕಳಿಸಿದರು.

ಮಧ್ಯಪ್ರಾಂತದಲ್ಲಿ ಇಂಥವರೇ ಒಬ್ಬ ಸಾಧು ಇವರಿಗೆ ಅಡ್ಡ ಬಂದರು. ಗಾಂಧೀಜೀ ಒಂದು ಸಭೆಗೆ ಹೋಗಬೇಕಾಗಿತ್ತು. ಇವರು ಹೋಗುವಾಗ ಆ ಸಾಧುವಿನ ಶಿಷ್ಯರು ಬಾಗಿಲಿಗೆ ಅಡ್ಡಕಟ್ಟಿ ನಿಂತರು. ಗಾಂಧೀಜೀ ಮಾಡುವುದು ಅಧರ್ಮ. ಅದನ್ನು ನಿಲ್ಲಿಸಲು ಸತ್ಯಾಗ್ರಹ ಮಾಡಿ ಗುರುವಿಗೇ ತಿರುಮಂತ್ರ ಹೇಳಿದರೆ ಸರಿ ಎಂದು ಅವರ ಆಲೋಚನೆ. ಆ ಸಾಧುವನ್ನು ಕರೆಸಿ ಹೇಳಿದರು ಗಾಂಧೀಜೀ. ‘ಇದು ಸತ್ಯಾಗ್ರಹವಲ್ಲ. ದುರಾಗ್ರಹ. ಏನಾದರೂ ವಿಪರೀತಮಾಡಿ ಹುಯಿಲ್ಲ ಎಬ್ಬಿಸುವ ಹಂಚಿಕೆ ನಿಮ್ಮದು. ನಾನು ಪೋಲೀಸರನ್ನು ಕರೆಯಿಸಬೇಕು,

ಇಲ್ಲ, ನಿಮ್ಮ ಮೇಲೆ ಕಾರು ಹಾಯಿಸಬೇಕು. ಇದಲ್ಲವೆ ನಿಮ್ಮ ಗತ್ತು? ನಾನು ಎರಡೂ ಮಾಡುವುದಿಲ್ಲ. ನಡೆದು ಹೋಗುತ್ತೇನೆ.'

'ನಾವು ನಿಮ್ಮ ಕಾಲು ಹಿಡಿದುಕೊಂಡು ಕೂತುಬಿಡುತ್ತೇವೆ.'

'ಅದು ಸತ್ಯಾಗ್ರಹವಲ್ಲ. ಧರ್ಮದ ಕೆಲಸಕ್ಕೆ ಹೀಗೆ ಅಡ್ಡಬರ ಬಹುದೆ? ಹೀಗೆ ಮಾಡಿದರೆ ನನ್ನ ಸಂಕಲ್ಪ ನಾನು ಮುರಿದೇನೆ?'

'ಹಾಗಾದರೆ ಏನು ಮಾಡಬೇಕು?'

'ಕಾಶಿಗೆ ಹೋಗಿರಿ. ನನಗೆ ಚಲೋ ಬುದ್ಧಿ ಕೊಡುವ ಹಾಗೆ ದೇವರನ್ನು ಬೇಡಿರಿ. ನಾನು ಮಾಡಿದ ಹಾಗೆ ಉಪವಾಸ ಮಾಡಿರಿ.'

ಇನ್ನೂ ಒಂದು ತರದ ಜನ ಉಂಟು. ಅವರು ಜಿಗಳಿಯ ಹಾಗೆ. ಹತ್ತಿದರೆ ಬಿಡುವುದೇ ಇಲ್ಲ. ತಲೆಚಿಟ್ಟು ಹತ್ತಿಸಿಬಿಡುತ್ತಾರೆ. ಒಬ್ಬ ಅಮೆರಿಕಾ ಹೆಂಗುಸು ಪರ್ಣಕುಟಿಗೆ ಬಂದಿದ್ದಳು. ಗಾಂಧೀಜಿಗೆ ಆಗ ಬಿಡುವು ಇರಲಿಲ್ಲ. ಆದರೂ ಏನೋ ದೂರದಿಂದ ಬಂದಿದಾಳಲ್ಲ ಎಂದು ಭೇಟಿಗೆ ಅವಕಾಶಕೊಟ್ಟರು. ಆಕೆಗೆ ಕೊಟ್ಟಿದ್ದ ೧೦ ನಿಮಿಷ ಆಯಿತು. ಇಪ್ಪತ್ತು ಆಯಿತು. ಆಕೆ ಏಳುವಹಾಗೇ ಕಾಣಲಿಲ್ಲ. ಸುಮ್ಮನೆ ಅಲ್ಲಿ ಹಾಗೆ-ಇಲ್ಲಿ ಹಾಗೆ ಎಂದು ಹರಟುತ್ತಿದ್ದಳು. ಗಾಂಧೀಜೀ ಏನು ಮಾಡ ಬೇಕು. ನಗುತ್ತ ಹೇಳಿದರು. 'ಈ ದೇಶದಲ್ಲಿ ಬಹಳ ಮಹಾತ್ಮರಿದಾರೆ. ಆದರೆ ನಿಮ್ಮೆದುರಿಗೆ ಇರುವ ಈ ಮಹಾತ್ಮ ಅವರೆಲ್ಲರ ಹಾಗೆ ಅಲ್ಲ. ಇವರು ಎಲ್ಲಾ ಜನರ ಹಾಗೆ ಊಟ ಮಾಡುತ್ತಾರೆ. ಆಟ ಆಡುತ್ತಾರೆ. ನಿದ್ದೆ ಕೂಡ ಹೋಗುತ್ತಾರೆ. ಈಗ ನೋಡಿ; ನಿಮ್ಮೆದುರಿಗೇ ನಿದ್ದೆ ಹೋಗುತ್ತಾರೆ.' ಹಾಗೆಂದವರೇ ಮಲಗಿಬಿಟ್ಟರು. ಆ ಹೆಂಗುಸು ದಿಕ್ಕು ತೋಚದೆ ಹೊರಟುಬರಬೇಕಾಯಿತು.

ಗಾಂಧೀಜಿಯ ನಗೆಯಲ್ಲಿ ಹೊಗೆ ಇಲ್ಲದೆ ಇಲ್ಲ. ಒಂದೊಂದು ಸಲ ಬಲವಾಗಿಯೇ ಚುಚ್ಚಿಬಿಡುತ್ತಾರೆ. ಆದರೆ ಹಾಗೆ ಚುಚ್ಚಿದಾಗ ರಕ್ತ ಬರುವುದಿಲ್ಲ. ವೈದ್ಯರು ಕೊಂಚ ವಿವೇಕ-ಕೊಂಚ ಔಚಿತ್ಯ ಓಡಾಡಿದ ಹಾಗೆ ಆಗುತ್ತದೆ. ಆ ಹೊಗೆ ಗಂಟಲು ಕಟ್ಟುವ ಬೆರಣಿ ಹೊಗೆಯಲ್ಲ. ಪರಿಮಳಧೂಪದ ಹೊಗೆ. ಬೆಳಗಾಂವಿಯ ಕಾಂಗ್ರೆಸ್ಸಿನಲ್ಲಿ ಕನ್ನಡಿಗರು

ತಮ್ಮ ತಿಂಡಿಪೋತತನವನ್ನು ಪೂರಾ ಬೆಳಗಿಬಿಟ್ಟರು. ಅದೇನು ಶ್ರೀಖಂಡ; ಆ ತುಪ್ಪವೇನು? ಆ ಹಾಲುಮೊಸರೇನು? ಗಾಂಧೀಜೀ ಕನ್ನಡಿಗರು ತುಂಬಾ ದೊಡ್ಡ ಮನಸಿನವರು; ಅವರ ಆತಿಥ್ಯ ಬಹಳ ಉದಾರವಾದುದು ಎಂದರು. ನಾವು ಹೆಮ್ಮೆಯಿಂದ ನಮ್ಮ ಹೊಟ್ಟೆಯ ಮೇಲೆ ಕೈಯಿಳಿವುದ ರೊಳಗಾಗಿ ಇಂಥ ಆತಿಥ್ಯ ಬಡನಾಡಿನಲ್ಲಿ ಶುದ್ಧ ಮೂರ್ಖತನ ಎಂದು ಬಿಟ್ಟರು. ಗಾಂಧೀಜಿಗೆ ಖಾದೀಬಟ್ಟೆಯಿಂದಲೇ ಒಂದು 'ಕುಟೀರ' ಅಣಿ ಮಾಡಿದ್ದರು. ಅವರೇ ಅಧ್ಯಕ್ಷರು ತಾನೆ ಆ ಕಾಂಗ್ರೆಸ್ಸಿಗೆ. 'ಇದು ಕುಟೀರ ಅಲ್ಲ, ಖಾದೀ ಅರಮನೆ' ಎಂದು ಆ ದುಂದುಗಾರಿಕೆಯನ್ನು ಜರಿದರು.

ತಮ್ಮ ಜೊತೆಗಾರರು ತಪ್ಪು ಮಾಡಿದಾಗ ಗಾಂಧೀಜೀ ಸಿಟ್ಟು ಮಾಡಿಕೊಳ್ಳುತ್ತಾರೆ. ನಗೆಮಾತಿನಲ್ಲಿ ಬುದ್ಧಿ ಹೇಳುತ್ತಾರೆ. ಆ ಮಾತಿ ನಲ್ಲಿ ಮೊನೆ ಇದೆ. ಅಂಬಿನಂತೆ ಅದು ತಾಗುತ್ತದೆ. ಆದರೆ ಆ ಮೊನೆಗೆ ವಿಷ ಸವರುವುದಿಲ್ಲ; ಸಂಜೀವನಿ ಸವರಿರುತ್ತಾರೆ. ನಮಗೆ ಆ ಮಾತಿನಿಂದ ನೋವಾಗುವುದಿಲ್ಲ. ನಾಚಿಕೆ ಆಗುತ್ತದೆ. ಅವರನ್ನು ನೋಯಿಸಿದೆವಲ್ಲ ಎಂದು ದುಃಖವಾಗುತ್ತದೆ. ನಿಜವಾಗಿಯೂ ಸಿಟ್ಟು ಬಂದವನನ್ನು ನಾವೂ ಎರಡು ಮಾತು ಅಂದುಬಿಡಬಹುದು. ನಮಗೂ ಕಾವು ಏರೀತು. ಇಲ್ಲಿ–ಇದು ಸಿಟ್ಟೆ? ಈ ಕ್ರೋಧಾಭಿನಯಕ್ಕೆ ನಾವೇನು ಬದಲು ಹೇಳ ಬೇಕು? ಅದು ಅಸಹನೆಯ ಉರಿಗಣ್ಣಲ್ಲ; ಮಮತೆಯ ಹನಿಗಣ್ಣು.

ಅವರ ಮಾತಿಗೆ ಯಾರಾದರೂ ಇದಿರಾಡಿದಾಗ ಆ ನಗೆಯ ಲೀಲೆ ಅದ್ಭುತವಾಗಿಬಿಡುತ್ತದೆ. ಸಭೆ–ಸಮಾಲೋಚನೆಗಳಲ್ಲಿ ಹುಮ್ಮಸ್ಸಿನ ಹರೆಯದವರು ಉದ್ದುದ್ದ ಮಾತಾಡಿ ಅವರ ಮಾತನ್ನು ಅಲ್ಲಗಳೆಯುವು ದುಂಟು. ಅದಕ್ಕೆ ಗಾಂಧೀಜಿಯ ಉತ್ತರ ಮುಗುಳುನಗೆ. ಆ ಮುಗುಳು ನಗೆಯ ಅಲೆಗಳಲ್ಲಿ ವಾತಾವರಣವೇ ಬದಲಾಗಿ ಹೋಗುತ್ತದೆ. ಆ ಮಾತಿನಮಲ್ಲರನ್ನು ನೋಡಿ ಇದ್ದವರೆಲ್ಲ ನಗುವಹಾಗೆ ಆಗುತ್ತದೆ. ಗಾಂಧೀಜಿಯದೇ ಸರಿ ಎನಿಸುತ್ತದೆ. ಎಲ್ಲವೂ ಬರಿಯ ನಗೆಯಲ್ಲಿಯೆ ತೇಲಿಹೋಗುತ್ತದೆ.

ಕರಾಚಿ ಕಾಂಗ್ರೆಸ್ಸಿಗೆ ವಲ್ಲಭಭಾಯಿ ಅಧ್ಯಕ್ಷರು. ಆಗ ವರ್ಕಿಂಗ್ ಕಮಿಟಿಯನ್ನು ನೇಮಿಸಿದವರು ಗಾಂಧೀಜಿಯೇ. ಆ ಪಟ್ಟಿಯನ್ನು ಓದಿ ಕೆಲವು ಹೆಸರು ಏಕೆ ಸೇರಿಸಿತು, ಕೆಲವು ಏಕೆ ಬಿಟ್ಟಿತು ಎಂದು ನಗುತ್ತ ಕಾರಣ ತಿಳಿಸಿದರು. ಆ ನಗೆ ಅದನ್ನು ಅರಗಿಸಿಕೊಳ್ಳುವಹಾಗೆ ಮಾಡಿತು. ಇನ್ನೊಬ್ಬರಾದರೆ ಆ ಸ್ಪಷ್ಟೋಕ್ತಿಯ ಫಲ ಉಣ್ಣಬೇಕಾಗುತ್ತಿತ್ತು.

ಸಿ. ಆರ್. ರೆಡ್ಡಿ—ಈಗ ಆಂಧ್ರ ವಿಶ್ವವಿದ್ಯಾಲಯದ ಸ್ಥಾನಪತಿ—ಒಂದುಸಲ ಇಷ್ಟಾಗೋಷ್ಠಿಯಲ್ಲಿ ಅಂದರಂತೆ: 'ಗಾಂಧೀಜೀ ಹಗಲೆಲ್ಲ ಹೇಳುತ್ತಾರಲ್ಲ; ಏನು ಆ ಅಂತರ್ವಾಣಿ ಎನ್ನುವುದು ?' ಸರೋಜಿನಿದೇವಿ ಆ ಗುಂಪಿನಲ್ಲಿದ್ದರು. ಆಕೆಗೆ ಈ ಅವಹೇಳನೆ ಸಹಿಸಲಿಲ್ಲ. 'ನಿಮ್ಮ ದಪ್ಪ ಬುದ್ಧಿಗೆ ಎಟುಕಲಾರದ ಸುದ್ದಿ ಅದು; ಅದರ ಗೊಡವೆ ಏಕೆ?' ಎಂದರಂತೆ. ಇಂಥ ಕಟೂಕ್ತಿಯಲ್ಲಿ ವಿನೋದಕ್ಕಿಂತ ವಿರೋಧವೇ ಹೆಚ್ಚು. ಗಾಂಧೀಜಿಯದು ಹಾಗಲ್ಲ. ವಿರೋಧದಲ್ಲಿಯೂ ವಿನೋದವಿದೆ.

ಎರಡನೆಯ ಸಲ ದುಂಡುಮೇಜಿನ ಪರಿಷತ್ತು ಆದಾಗ ಗಾಂಧೀಜೀ ಹೋಗಬೇಕಾಗಿತ್ತು. ಗುಜರಾತಿನಲ್ಲಿ ಏನೋ ಸಣ್ಣಪುಟ್ಟ ಮಾತಿನಲ್ಲಿ ಅಧಿಕಾರಿಗಳು ಗಾಂಧೀ—ಇರ್ವಿನ್ ಒಪ್ಪಂದವನ್ನು ನಡೆಸಿರಲಿಲ್ಲ. ಅದಕ್ಕಾಗಿ ಹೊಡೆದಾಡುತ್ತ ಗಾಂಧೀಜೀ ಕೂತುಬಿಟ್ಟರು. ಆ ಕಂದಾಯದ ರಗಳೆಗೆ ಇವರೇಕೆ ತೊಡಗಬೇಕು? ಎಷ್ಟು ಜನ ನಾಡಿನಲ್ಲಿಲ್ಲ ಅದಕ್ಕೆ ಎಂದು ಎಲ್ಲರೂ ಗೊಣಗಿದರು. ಆ ವಿಷಯ ಸರಿಯಾಗುವವರೆಗೆ ನಾವು ಪರಿಷತ್ತಿಗೆ ಹೋಗುವುದೇ ಇಲ್ಲ ಎಂದು ಗಾಂಧೀಜೀ ಹಟ ಬೇರೆ ಹಿಡಿದರು. ಈ ಚಿಲ್ಲರೆ ಮಾತು ಯಾರಾದರೂ ನೋಡಿಯಾರು; ನೀವು ಪರಿಷತ್ತಿಗೆ ಹೋಗಬಾರದೆ ಎಂದು ಕೆಲವರು ಸೂಚಿಸಿದರು. ಗಾಂಧೀಜಿಗೆ ಔಚಿತ್ಯಜ್ಞಾನ ಕೊಂಚ ಮಂಕಾಗಿದೆ ಎಂಬ ಭಾವ ಸೂಚಿಸಿದವರ ಮನಸಿನಲ್ಲಿ ಇಲ್ಲದಿದ್ದರೂ ಸೂಚನೆಯಲ್ಲಿ ಇಲ್ಲದೆ ಇಲ್ಲ. ಗಾಂಧೀಜೀ ಶಾಂತವಾಗಿ ಹೇಳಿದರು: ಪುಡಿಕಾಸು ಭದ್ರವಾಗಿ ಇಟ್ಟವನಿಗೆ ರೂಪಾಯಿನ ಚಿಂತೆಯೇ ಬೇಡ.' ಕರ್ಮಕೌಶಲದ ಮೂಗುದಾರ ದೊಡ್ಡ ದೊಡ್ಡ ಕೆಲಸದಲ್ಲಿಲ್ಲ; ಸಣ್ಣ ಪುಟ್ಟ ಕೆಲಸದಲ್ಲಿ.

ವಿಠಲಭಾಯಿ ಪಟೇಲರದು ತುಂಬಾ ಹರಿತವಾದ ಬುದ್ಧಿ. ವಿಮರ್ಶೆಯಲ್ಲಿ ಅದ್ವಿತೀಯರು. ಅವರು ಶಾಸನ ಸಭೆಯಲ್ಲಿದ್ದಾಗ ಬ್ರಿಟಿಷ ಸರಕಾರಕ್ಕೆ ಯಾವಾಗಲೂ ನಡುಕವೇ. ಕಾಂಗ್ರೆಸಿನಲ್ಲಿ ಹೊಸ ನಿಯಮಾವಳಿಯನ್ನು-ಕಾಂಗ್ರೆಸ್ಸಿಗಾಗಿ ಮಾಡಿದ್ದು-ವಿಮರ್ಶಿಸಬೇಕಾಗಿಬಂತು. 'ವಿಠಲಭಾಯಿಗೆ ಕೊಟ್ಟುಬಿಡಿ. ಎಂಥದ್ದನ್ನಾದರೂ ಚೂರು ಚೂರು ಮಾಡುತ್ತಾರೆ, ಪರವಾ ಇಲ್ಲ' ಎಂದರು ಗಾಂಧೀಜೀ. ಆ ಸಭೆಯಲ್ಲಿ ವಿಠಲಭಾಯಿ ನಿಯಮಾವಳಿಯನ್ನು ಟೀಕಿಸಿದವರನ್ನೇ ಬಲಿಹಾಕಿದರು.

ಹೈದರಾಬಾದಿನಲ್ಲಿ ಆರ್ಯ ಸಮಾಜದ ಸತ್ಯಾಗ್ರಹ ನಡೆದಾಗ ಗಾಂಧೀ ಸೇವಾ ಸಂಘದ ಮುಖ್ಯ ಸದಸ್ಯರಲ್ಲಿ ಒಬ್ಬರಾದ ಅಭಯದೇವಶರ್ಮ ಗಾಂಧೀಜಿಯನ್ನು ಕೇಳಿದರು: 'ಈ ಸತ್ಯಾಗ್ರಹಕ್ಕೆ ನಾನು ನಾಯಕನಾಗಲೆ' ಎಂತ. ಗಾಂಧೀಜೀ ಹೇಳಿದರು: 'ಓಹೋ ಅಗತ್ಯವಾಗಿ.'

'ತಮ್ಮ ಆಶೀರ್ವಾದ ಬಲ ಇದೆಯಷ್ಟೆ'-ಶರ್ಮರಿಗೆ ಸಂತೋಷ.

'ಓಹೋ. ಆದರೆ ಸತ್ಯಾಗ್ರಹ ನಿಲ್ಲಿಸಲಿಕ್ಕೆ ನನ್ನ ಆಶೀರ್ವಾದ-' ನಗುತ್ತ ಗಾಂಧೀಜೀ ಹೇಳಿದರು. ಗಾಳಿಗೋಪುರ ಗಾಳಿಯಲ್ಲೇ ಕರಗಿ ಹೋಯಿತು.

ಈ ನಗೆಯಲ್ಲಿ ಆ ಪ್ರಭಾವ ಇರಲು ಅವರ ಅನಾಸಕ್ತಿಯೇ ಕಾರಣ. ನಮ್ಮ ನಗೆಯಲ್ಲಿ ಅಹಂಕಾರದ ಸುಂಕು ಇದೆ; ಕಿಡಿಗೇಡಿತನದ ಚಪಲ ಇದೆ. ಅವರಿಗೆ ಹಾಗಲ್ಲ. ತಮ್ಮನ್ನು ನೋಡಿ ತಾವೇ ನಗುತ್ತಾರೆ. ಒಂದು ದಿನ ಹೊರಗೆ ಹೋಗಬೇಕಾದರೆ ಕೈವಸ್ತ್ರ ಸಿಗಲಿಲ್ಲ. ಎಲ್ಲಿ ಹೋಯಿತು ಎಂದು ಹುಡುಕಲು ಮೊದಲಿಟ್ಟರು. ಎಲ್ಲೆಲ್ಲಿಯೂ ಹುಡುಕಿದರು. ಬಿರುಗಾಳಿ ಬೀಸಿದಹಾಗೆ ಆ ಹುಡುಗಾಟ. ಸಭೆಗೆ ಹೋಗಬೇಕಾಗಿತ್ತು; ಅವಸರ. ಇನ್ನೊಂದು ಕೈವಸ್ತ್ರ ಕೊಟ್ಟರೆ ಇದು ಕೂಡದು. ಅದೇ ಬೇಕು. ಕಡೆಗೆ ಹಾಗೆಯೇ ಹೋದರು. ರಾತ್ರಿ ಮಲಗುವಾಗ ನೋಡುತ್ತಾರೆ. ಅವರ ಮೈಮೇಲೆಯೆ ಇದೆ ಆ ಕೈವಸ್ತ್ರ. ಅವರು ಹೊದ್ದುಕೊಳ್ಳುವ ಶಾಲಿಗೆ ಯಾವಾಗಲೋ ಪಿನ್ ಹಾಕಿ ಚುಚ್ಚಿದ್ದರು. ಅದು

ಹಾಗೆಯೆ ಉಳಿದಿತ್ತು. ಅದನ್ನು ನೋಡಿ ಹೊಟ್ಟೆತುಂಬ ನಕ್ಕರು. ಎಲ್ಲರಿಗೂ ಹೇಳಿಹೇಳಿ ನಕ್ಕರು.

ಗಾಂಧೀಜಿಯ ಈ ರಸಿಕತೆ ಮೇಲಿನ ಮಟ್ಟಕ್ಕೆ ಸೇರಿದುದು. ತಾವು ಮಾಡಿದ ತಪ್ಪನ್ನು ಮರೆಮಾಚದ ಅನಾಸಕ್ತಿ, ನಿರ್ಭಯಗಳು ಆ ರಸಿಕತೆಯ ಲಕ್ಷಣ. ಅವರು ಆಡುವ ಯಾವ ಮಾತಿನಲ್ಲಿಯೂ ಕುದಿ ಇಲ್ಲ ಕಾವು ಇಲ್ಲ. ಶಾಂತವಾಗಿ ಗಂಭೀರವಾಗಿ ಸಂಭಾಷಣೆಯನ್ನು ನಿರ್ಮಲವಾಗಿ ನಡೆಸುತ್ತಾರೆ. ಚರ್ಚೆ ಮಾಡಿದರೂ ಅಷ್ಟೆ. ಅದಕ್ಕೊಂದು ಮಟ್ಟವಿದೆ. ಅದಕ್ಕೆ ಕೆಳಗೆ ಇಳಿಯುವುದಿಲ್ಲ. ಮಾತಾಡುವಾಗ ಹಾವ ಭಾವ ಪ್ರದರ್ಶನವಿಲ್ಲ. ಕೈ, ಬೆರಳು ಯಾವುದೂ ಆಡಿಸುವುದಿಲ್ಲ. ಸಭೆಗಳಲ್ಲಿ ಕೂಡ ಕೈ ಅಲ್ಲಾಡಿಸಿ ಮೋರೆ ಕಿವುಚುವ ವಾಗ್ಧೋರಣೆಯಿಲ್ಲ. ಮಾತು ಸ್ಫುಲಿಂಗಗಳಂತೆ ಸಿಡಿದು ಬರುತ್ತವೆ. ತಡೆಯಿಲ್ಲ ತೊದಲಿಲ್ಲ. ಉತ್ತರಕ್ಕಾಗಿ ಯೋಚಿಸಬೇಕಾಗಿಲ್ಲ ಮಾತಿನಲ್ಲಿ. ಶಬ್ದಗಳಿಗಾಗಿ ಹುಡುಕಬೇಕಾಗಿಲ್ಲ. ಅದೊಂದು ಅಖಂಡ ಸ್ರೋತಸ್ಸು. ಆ ನೀರಿನ ಸವಿ ತಿಳಿಯಾದ ಹಾಸ್ಯದ ರುಚಿ.

ಆ ರುಚಿಯೇ ಅವರ ಬಾಳಿಗೆ ಅಗಾಧವಾದ ವಿನಯಶಕ್ತಿಯನ್ನು ಕೊಟ್ಟಿದೆ. ಇಷ್ಟು ಕೀರ್ತಿಗೌರವಗಳನ್ನು ಗಳಿಸಿಯೂ ಗಾಂಧೀಜೀ ಸಾಮಾನ್ಯರ ಹಾಗೆ ಇದ್ದಾರೆ. ಅವರ ವಿನಯಗಾಂಭೀರ್ಯದ ಬಗ್ಗೆ ಎಷ್ಟೋ ಕತೆಗಳಿವೆ. ಸಹಜವೇ. ಚಂಪಾರಣ್ಯದಲ್ಲಿ ಗಾಂಧೀಜೀ ಒಂದು ಸಭೆಯಲ್ಲಿ ಮಾತಾಡಬೇಕಾಗಿತ್ತು. ಚಂಪಾರಣ್ಯ ಸತ್ಯಾಗ್ರಹದಿಂದ ಅಲ್ಲಿನ ಕೂಲಿ ಜನಕ್ಕೆಲ್ಲಾ ಗಾಂಧೀಜಿಯ ಮೇಲೆ ಭಕ್ತಿ. ಸಾವಿರಾರು ಜನ ಅವರ ದರ್ಶನಕ್ಕಾಗಿ ಆ ಸಭೆಗೆ ಬಂದರು. ಕೆಲವರು ಗಾಂಧೀಜೀ ಬರುತ್ತಿದ್ದ ರೈಲಿಗೇ ಹತ್ತಿದರು. ಒಬ್ಬ ಗೌಡ ಅವರು ಇದ್ದ ಡಬ್ಬಿಗೆ ಹತ್ತಿದ. ಗಾಂಧೀಜೀ ಯಾವಾಗಲೂ ಮೂರನೆ ತರಗತಿಯ ಡಬ್ಬಿಯಲ್ಲಿ ತಾನೆ ಪ್ರಯಾಣ ಮಾಡುವುದು. ಒಂದು ಹಲಗೆಯ ಮೇಲೆ ಅವರು ಮಲಗಿದ್ದರು. ಗೌಡ ಬಂದವನು ಅಷ್ಟು ಸ್ಥಳ ಅವರೊಬ್ಬರೇ ಹಿಡಿದಿರುವುದನ್ನು ನೋಡಿ, ನೀನೊಬ್ಬನೆಯೋ ಕಾಸು ಕೊಟ್ಟಿರುವುದು ಎಂದು ಏನೋ

ಆಡಿ ಅಲ್ಲಿ ಕೂತ. ಗಾಂಧೀಜೀ ಎದ್ದು ಅವನಿಗೆ ಎಡೆಮಾಡಿಕೊಟ್ಟರು. ಆ ಮೇಲೆ ಅವನನ್ನು ಕೇಳಿದರು 'ಎಲ್ಲಿ ಹೋಗುತ್ತೀ' ಎಂದು. 'ಗಾಂಧೀ ಮಹಾತ್ಮನ ದರ್ಶನಕ್ಕಾಗಿ' ಎಂದು ಆ ಗೌಡ ಗಾಂಧೀಜಿಯನ್ನು ಕೊಂಡಾಡಿದ. ಡಬ್ಬಿಯಲ್ಲಿದ್ದವರೆಲ್ಲ ಒಳಗೊಳಗೆ ನಗುತ್ತಿದ್ದರು. ಇಳಿಯುವ ನಿಲುತಾಣ ಬಂದಾಗ ಡಬ್ಬಿಯ ಬಳಿಗೆ ಮುಂದಾಳುಗಳೆಲ್ಲ ಬಂದು ಗಾಂಧೀಜಿಯನ್ನು ಇದಿರುಗೊಂಡರು. ಅವರೇ ಗಾಂಧಿ ಎಂಬುದು ಆ ಗೌಡನಿಗೆ ಆಗ ತಿಳಿಯಿತು. ಆ ಸಂದರ್ಭ ಎಂಥದು ಊಹಿಸಲಾರೆವೆ. ಅದೋ! ಗಾಂಧೀಜಿಯ ಕೈ ಅವನ ಬೆನ್ನಮೇಲೆ ಆಡುತ್ತಿದೆ. ನಗುತ್ತ ಅವನನ್ನು ಸಂತಯಿಸುತ್ತಿದಾರೆ.

ಗಾಂಧೀಜೀ ದಕ್ಷಿಣ ಆಫ್ರಿಕದಿಂದ ಬಂದ ಹೊಸದರಲ್ಲಿ ನಮ್ಮ ದೇಶದ ರಾಜಕಾರಣಿಗಳೆಂದರೆ ಮೊದಲನೆ ತರಗತಿ ಪ್ರಯಾಣದ ಶ್ರೀಮಂತರು. ಅವರ ವೇಷ ವೈಸರಾಯರಿಗಿಂತಲೂ ಜಂಬದ್ದು. ಇವರೊ ಬಡ ಕೂಲಿಯ ಹಾಗೆ. ದೊಡ್ಡ ದೊಡ್ಡ ನಿಲುತಾಣಗಳಲ್ಲಿ ಇವರನ್ನು ನೋಡಿ ಆ ದೇವತೆಗಳು ಏ, ಕೂಲಿ ಎಂದು ಕರೆದು ತಮ್ಮ ಸಾಮಾನನ್ನು ಹೊರಲು ಕೊಡುತ್ತಿದ್ದರಂತೆ. ಒಂದೆರಡು ಸಲ ಗಾಂಧೀಜಿ ಸದ್ದಿಲ್ಲದೆ ಕೂಲಿ ಕೆಲಸವನ್ನು ಮಾಡಿದುದೂ ಉಂಟೆಂದು ಹೇಳುತ್ತಾರೆ.

ಅಖಿಲಭಾರತ ಪ್ರವಾಸ ಮಾಡುವಾಗ ಒಂದು ಕಡೆ ಬೇರೆ ರೈಲಿಗಾಗಿ ರಾತ್ರಿ ಕೆಲವು ಗಂಟೆ ಕಾದಿರಬೇಕಾಗಿತ್ತು. ಸಾಮಾನೆಲ್ಲ ಪ್ಲಾಟಫಾರಂ ಮೇಲೆ ಇಳಿಸಿತ್ತು. ಪರಿವಾರದವರು ಮುಂದಿನ ಏರ್ಪಾಡಿಗಾಗಿ ಅಲ್ಲಿ ಇಲ್ಲಿ ಹೊರಟರು. ತಮ್ಮ ಕೆಲಸ ಮುಗಿಸಿ ಬಂದು ನೋಡುತ್ತಾರೆ. ಗಾಂಧೀಜಿ ಆ ಸಾಮಾನಿನ ನಡುವೆ ಅಲ್ಲಿಯೆ ಮಲಗಿಬಿಟ್ಟಿದ್ದರು. ಅದು ೧೯೩೧ರ ಕಾಲ. ಆಗ ಗಾಂಧೀಜೀ ಹಿಂದುಸ್ತಾನದ ಕಣ್ಮಣಿ!

ಈ ವಿನಯದ ಹದಕ್ಕೆ ಅವರ ಹಾಸ್ಯಪ್ರವೃತ್ತಿಯೂ ಒಂದು ಕಾರಣ. ಅನಾಸಕ್ತ ಮನಸ್ಸಿಗೆ ಹಾಸ್ಯವು ಅಂತಸ್ಸಾಕ್ಷಿ ಇದ್ದಂತೆ. ಕಷ್ಟ ಸುಖಗಳನ್ನು ಸಮವಾಗಿ ತಿಳಿಯುವುದಕ್ಕೆ ನಗೆಯಂಥ ಸುಲಭಸಾಧನ ಇಲ್ಲ. ಸತ್ಯಾಗ್ರಹ ಪ್ರಾರಂಭ ಮಾಡಿದಾರೆ; ದಂಡಿಯ ದಂಡಯಾತ್ರೆ.

ಇವರ ಶಿಬಿರದಲ್ಲಿ ಯುದ್ಧಸಿದ್ಧತೆಯಿಲ್ಲ; ಬರೀ ನಗೆಮಾತು, ಹರಟೆ ಕಾಣಬರುತ್ತಿತ್ತು. ಸರಕಾರದ ಕಚೇರಿಗಳಲ್ಲಿ ಅಧಿಕಾರಿಗಳು ತಲೆ ಕೆರೆದದ್ದೂ ಕೆರೆದದ್ದೆ.

ದಂಡಿಯ ಕೊನೆಯ ದೃಶ್ಯವೂ ಹಾಗೆಯೆ. ನಡುರಾತ್ರಿಯಲ್ಲಿ ಅಧಿಕಾರಿಗಳು ಗಾಂಧೀಜಿಯನ್ನು ಸೆರೆ ಹಿಡಿಯಲು ಬಂದರಂತೆ. ಬಂದವರು ವಾರಂಟನ್ನು ತೋರಿಸಿದರು. ಗಾಂಧೀಜೀ ಕೇಳಿದರು: ‘ಹಲ್ಲುಜ್ಜಿಕೊಂಡು ಬರಲೆ? ಅಷ್ಟು ಪುರುಸತ್ತು ಇದೆಯೆ?’

ವಾಙ್ಮಯತಪದಲ್ಲಿ ‘ಅನುದ್ವೇಗಕರಂ ವಾಕ್ಯಂ’ ಎಂದು ಸಾಧಕನಿಗೆ ಹೇಳಿದಾರೆ ಗೀತೆಯಲ್ಲಿ. ಅದರ ಜೊತೆಯಲ್ಲಿಯೆ ‘ಮನಃಪ್ರಸಾದಃ’ ಎಂದಿದೆ. ಗಾಂಧೀಜೀ ಅಹಿಂಸೆಯನ್ನು ಪಾಲಿಸುವವರು. ಗೀತೆಯನ್ನು ನಂಬಿದವರು. ನಗೆಯೇ ಮೇಲಿನ ನಿಯಮಗಳ ಅರ್ಥ ಎಂದು ವ್ಯಾಖ್ಯಾನ ಮಾಡಿಕೊಂಡಂತಿದೆ. ಅವರ ನುಡಿಯಲ್ಲಿ ಉದ್ವೇಗವಿದ್ದರೂ ಅದು ಉದ್ವೇಗಕರವಲ್ಲ. ಆ ನಗೆಯಲ್ಲಿ ದಿಟ್ಟತನವಿದ್ದರೂ ಮನಃಪ್ರಸಾದವಿದೆ.

ಗಾಂಧೀಜಿಯ ಹಾಸ್ಯಪ್ರವೃತ್ತಿ ಅವರ ವಾಙ್ಮಯತಪದ ಜೀವಾಳವೋ ಏನೋ!



## ಚಿಕ್ಕೆಗಳ ಚಂದ್ರಾಮ

ನಗೆಯ ಹಾಗೇ ಮಕ್ಕಳು. ಮಕ್ಕಳ ಆಟದ ಆನಂದ ನಿರ್ಮಲ ವಿನೋದದ ಸುಖವಿದ್ದಹಾಗೆ. ಬಾಳಿನಲ್ಲಿ ಬೇಸರ ಬಂದಾಗ ಎರಡೂ ಮದ್ದೇ. ಮೈಯನ್ನೂ ಮನಸ್ಸನ್ನೂ ಮುತ್ತಿದ ಜಡತೆಯನ್ನು ಕಳೆದು ಹೊಸ ಚೈತನ್ಯವನ್ನು ತುಂಬುತ್ತವೆ. ಮಕ್ಕಳು ದೇವರು ಇದ್ದಂತೆ ಎಂಬ ಕಲ್ಪನೆಯೊಂದು ನಮ್ಮಲ್ಲಿ ಮೊದಲಿನಿಂದಲೂ ರೂಢವಾಗಿದೆ. ಅಂತಲೇ ಮಕ್ಕಳನ್ನು ಎತ್ತಿ ಮುದ್ದಾಡದ ಕೈ ಮರಗೈ--ಮರುಳುಗೈ ಎನ್ನುತ್ತಾರೆ. ಮಕ್ಕಳಿಲ್ಲದ ಮನೆಯು ಪಕ್ಕಿಯಿಲ್ಲದ ವನವು—ಎಂದು ಸರ್ವಜ್ಞ ಹೇಳಿದ. ಇನ್ನೂ ಒಂದು ಹೆಜ್ಜೆ ಸರಿದು ಬಸಿರಾಗದವಳ ಬಾಳುವೆಯು ಬೇಸಗೆಯ ಬಿಸಿಲು ಕಾದಂತೆ ಎಂದ. ಈ ಮನೋಭಾವದ ಪರಿಣಾಮವೇ ಬಾಲ ಕೃಷ್ಣ. ಹಾಲುಗಡಲಲ್ಲಿ ದೇವರು ಆಲದೆಲೆಯ ಮೇಲೆ ಮಗುವಾಗಿ ಮಲಗಿ ನಿದ್ದೆ ಮಾಡುತ್ತಿದಾನಂತೆ. ನಮ್ಮವರು ಹೀಗೆ ತಿಳಿದರೆ ಯೇಸುಕ್ರಿಸ್ತನು ದೇವರ ರಾಜ್ಯ ಮಕ್ಕಳದೇ ಎಂದಿದಾನೆ. ಗಾಂಧೀಜೀ ಕೂಡ ಮಕ್ಕಳ ಮೋರೆಯಲ್ಲಿ ಸತ್ಯದ ಹೊಳಪನ್ನು ನೋಡಿರಬೇಕು ಎನಿಸುತ್ತದೆ.

ಗಾಂಧೀಜಿಗೆ ಮಕ್ಕಳನ್ನು ಕಂಡರೆ ಬಹಳ ಪ್ರೀತಿ. ನಗೆ, ಗೆಳೆಯರು, ಹೊಸಗಾಳಿ, ಸತ್ಯ, ಮಕ್ಕಳು ಅಂದರೆ ತುಂಬಾ ಪ್ರೀತಿ. ಮಕ್ಕಳೊಡನೆ ತಾವೂ ಮಗುವಾಗಿ ಆಟ ಆಡಿಕೊಳ್ಳುತ್ತಾರೆ. ಅವರ ಜೀವನದ ಅನೇಕ

ಆನಂದಗಳಲ್ಲಿ ಮಕ್ಕಳೊಡನೆ ವಿನೋದವಾಡುವುದೂ ಒಂದು. ಎಷ್ಟೇ ಕೆಲಸವಿರಲಿ ಮಕ್ಕಳನ್ನು ನೋಡಿದರೆ ಬಾಪು ಮಾತನಾಡಿಸದೆ–ಬಹಳ ಅವಸರವಿದ್ದಪಕ್ಷದಲ್ಲಿ ಮುಗುಳುನಗೆಯನ್ನಾದರೂ ಸೂಸದೆ–ಮುಂದು ವರಿಯುವುದು ಬಹುಶಃ ಇಲ್ಲವೇ ಇಲ್ಲ. ಒಮ್ಮೆ ಸೇವಾಗ್ರಾಮಕ್ಕೆ ಯಾರೋ ದಕ್ಷಿಣ ಆಫ್ರಿಕದವರು ಬಂದಿದ್ದರು. ಅವರು ಗುರುತಿನವರು. ಗಂಡ ಹೆಂಡತಿ ಮಕ್ಕಳು. ಅವರು ಪರ್ಣಕುಟಿಯೊಳಗೆ ಬಂದಾಗ ಬಾಪು ನಗುತ್ತ ಸಂತೋಷದಿಂದ ಸ್ವಾಗತಮಾಡಿ, ಮೊದಲು ಅವರ ಕಿರಿಯ ಮಗುವನ್ನು ಹತ್ತಿರ ಸೆಳೆದು ಕೆನ್ನೆ ಹಿಂಡಿ ಅದನ್ನು ನಗಿಸಿ ಅನಂತರ ತಂದೆ ತಾಯನ್ನು ಮಾತಾಡಿಸಿದರು.

ಮಕ್ಕಳಿಗೆ ಬಾಪೂನ್ನ ಕಂಡರೆ ಬಹಳ ಆಸೆ, ಅಕ್ಕರೆ. ಆಶ್ರಮದಲ್ಲಿ ರುವ ಹುಡುಗರು ಅವರೊಡನೆ ದಿನವೂ ತಿರುಗಾಡಲಿಕ್ಕೆ ಹೋಗುತ್ತಾರೆ. ಆಗ ಆ ಹುಡುಗರು–ಈ ಮುದುಕ ಕೂಡಿ ಆಟ ಆಡುತ್ತಿರುವುದನ್ನು ಕಂಡರೆ ರವೀಂದ್ರನ Cycle of the Spring ನಾಟಕ ನೆನಪಾಗುತ್ತದೆ. ಬಾಳು ಒಂದು ದೊಡ್ಡ ಚಕ್ರನಾಟ್ಯ. ಒಂದು ತುದಿಗೆ ಬಾಲ್ಯ ಇನ್ನೊಂದು ತುದಿಗೆ ಮುಪ್ಪು ಎನಿಸುತ್ತದೆ.

ಆಶ್ರಮದ ಮಕ್ಕಳಿಗೆ ದಿನವೂ ಸಂಜೆಗೆ ಯಾರು ಬಾಪೂ ಕೈ ಹಿಡಿಯಬೇಕು, ಯಾರು ಅವರ ತೊಡೆಯ ಮೇಲೆ ಕೂಡಬೇಕು ಎಂಬ ಉತ್ಸಾಹದ ಹೋರಾಟ. ಒಬ್ಬ ಮಗು ಹೀಗೆ ಆದರಬಗ್ಗೆ ಬರೆದಿದಾನೆ. 'ನಾವು ದಿನಾ ಸಂಜೆಗೆ ಹೀಗೆ ಜಗಳ ಆಡುತ್ತಿದ್ದೆವು. ನಮ್ಮಿಬ್ಬರನ್ನೂ ತೊಡೆಯಮೇಲೆ ಕೂಡಿಸಿಕೊಂಡು ನಮ್ಮ ಜಗಳ ಹರಿಸುತ್ತಿದ್ದರು ಬಾಪು.'

ಅವರ ಜೊತೆ ಎಂದರೆ ಹುಡುಗರಿಗೆ ಸ್ವರ್ಗ. 'ಬಾಪೂಗೆ ನಾವೆಲ್ಲ ಆರೋಗ್ಯವಾಗಿರಬೇಕು ಎಂದು ಆಸೆ. ಅಂತ ನಾವೆಲ್ಲ ಅಂಗಸಾಧನೆ ಮಾಡುತ್ತಿದ್ದೆವು. ಇದಕ್ಕಾಗಿ ಬೆಳಗುಮುಂಜಾನೆ ಏಳುತ್ತಿದ್ದೆವು. ಬಾಪೂಗೆ ಈಸಲಿಕ್ಕೆ ಚೆನ್ನಾಗಿ ಬರುತ್ತದೆ. ನಮಗೆಲ್ಲ ಈಸು ಬರಬೇಕೆಂದು ಅವರ ಮನಸ್ಸು. ಒಂದೊಂದು ಸಲ ನಮ್ಮೆಲ್ಲರ ಜೊತೆಗೆ ತಾವೂ ಸಾಬರಮತಿ ನದಿಯೊಳಗೆ ಇಳಿಯುತ್ತಿದ್ದರು.

'ಬಾಪು ಆಶ್ರಮಬಿಟ್ಟು ಆಗಾಗ ಪ್ರವಾಸ ಹೋಗುತ್ತಿದ್ದರು. ಎಲ್ಲಿ ಹೋದರೂ ನಮ್ಮನ್ನು ಮರೆಯುತ್ತಿರಲಿಲ್ಲ. ಪ್ರತಿವಾರವೂ ನಮಗೆ ಕಾಗದ ಬರೆದು–ನನ್ನ ಮುದ್ದಿನ ಹಕ್ಕಿಗಳೆ–ಎಂದು ಕರೆಯುತ್ತಿದ್ದರು. ನಮ್ಮ ಅಕ್ಷರ ಡೊಂಕಾದರೆ ಸಿಟ್ಟಾಗುತ್ತಿದ್ದರು.

'ಬಾಪು ನಮಗೆ ವಿದ್ಯೆ ಕಲಿಸಿದ ರೀತಿ ಎಲ್ಲ ಮಕ್ಕಳೂ ಕಲಿವ ರೀತಿಯಲ್ಲ. ನಮ್ಮ ಪುಸ್ತಕ ಪಾಠಕ್ಕಿಂತ ನೂಲುವದೇ ಬಹಳ. ಆದರೆ ನೂಲುವಾಗಲೇ ಎಷ್ಟೋ ಕಲಿಯುತ್ತಿದ್ದೆವು.'

ಬಾಪೂಜಿಗೆ ವಿದೇಶೀ ವಸ್ತುಗಳ ಮೇಲೆ ಎಷ್ಟು ಪ್ರೀತಿ ಎಂಬುದನ್ನು ಎಲ್ಲರೂ ಬಲ್ಲರು. ಈ ಹುಡುಗನ ತಂದೆಯ ಗೆಳೆಯ ಒಂದುಸಲ ಕೆಲವು ಆಟದ ಸಾಮಾನನ್ನು ಕೊಟ್ಟರು ಇವನಿಗೆ. 'ಬಾಪೂಜಿಗೆ ಇದು ಗೊತ್ತಾಯಿತು. ಆ ಸಾಮಾನನ್ನು ತೆಗೆದಿಟ್ಟುಬಿಟ್ಟರು. ಅವುಗಳೊಡನೆ ಆಡಗೊಡಲಿಲ್ಲ. ನನಗೆನೋ ತುಂಬಾ ವ್ಯಥೆಯಾಯಿತು. ಆದರೆ ಮುಂದೆ ಅವರು ಹಾಗೇಕೆ ಮಾಡಿದರೆಂಬುದು ತಿಳಿಯಿತು.'

ಬಾಪೂ ಪುಣೆಯಲ್ಲಿ ಉಪವಾಸವನ್ನು ಕೈಕೊಂಡಾಗ ಈ ಹುಡುಗನೂ ಅಲ್ಲಿಯೇ ಇದ್ದ. ಇವನಿಗೆ ಆಗ ಮಲೇರಿಯಾ ಬಂತು. ಬಾಪು ಅದನ್ನು ಗಮನಿಸಿದರು. ಅವನ ತಂದೆಯನ್ನು ಕರೆದು ಅವನ ತಾಯಿಯನ್ನು ತಾರುಕೊಟ್ಟು ಕರೆಸುವಂತೆ ಹೇಳಿದರು. 'ಸ್ವತಃ ತಾವೇ ಅಷ್ಟು ಅಸ್ವಸ್ಥರಿದ್ದಾಗಲೂ ಬಾಪೂಗೆ ಎಲ್ಲರಬಗ್ಗೆಯೂ ಎಷ್ಟು ಯೋಚನೆ, ಎಷ್ಟು ಕಾಳಜಿ!' ಮೇಲೆ ಹೇಳಿದ ಮಾತುಬರೆದ ಆಶ್ರಮ ಬಾಲಕ ಯಾರೆಂದು ಆ ಲೇಖದಲ್ಲಿ ತಿಳಿಸಿಲ್ಲ. ಬಹುಶಃ ಮಹದೇಭಾಯಿಯ ಮಗ ನಾರಾಯಣ ದೇಸಾಯಿ ಇರಬೇಕೆಂದು ಅನಿಸುತ್ತದೆ.

ಗಾಂಧೀಜೀ ದುಂಡುಮೇಜಿನ ಪರಿಷತ್ತಿಗೆ ಹೋಗುವಾಗ ಹಡಗಿನಲ್ಲಿ ಕೂತು ಯಾವುದೋ ಒಂದು ಮಗುವಿನೊಡನೆ ಆಡುತ್ತಿದ್ದ ಚಿತ್ರ ಒಂದು ಆಗ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಮಗುವೂ ನಗುತ್ತಾ ಇದೆ. ಇವರಂತೂ ತಮ್ಮ ಹಲ್ಲಿಲ್ಲದ ಬಚ್ಚಬಾಯಿಂದ ನಗೆಯ ತೆರೆಯನ್ನೇ ಹಬ್ಬಿಸಿದಾರೆ. ಆ ನಗೆಯಲ್ಲಿ ಅಮರತೇಜದ ಹೊಳಪು ಇದೆ. ಮಕ್ಕಳು ಇದುರಿಗೆ

ಇದ್ದರೆ ಸಾಕು ಬಾಪು ಕೊಂಚಮಟ್ಟಿಗೆ ಜಗತ್ತನ್ನೇ ಮರೆಯುತ್ತಾರೆ. ತಿರುಗಾಡಿ ಬರಲು ಹೊರಟರೆ ಯಾರಾದರೂ ಮಕ್ಕಳು ಜೊತೆಗೆ ಇದ್ದರೆ ಉಳಿದವರಿಗೆ ಆ ದಿನ ಮಾತು ಕತೆಯ ಭಾಗ್ಯ ಕಡಮೆಯೇ.

ಒಮ್ಮೆ ಹುಡುಗರ ಗುಂಪು ಬಂದು ಗಾಂಧೀಜಿಯನ್ನು ಮುತ್ತಿತು. ಹಾಗೆ ಹೇಳದೆ ಕೇಳದೆ ಮೊದಲೇ ಏರ್ಪಾಟು ಮಾಡಿಕೊಳ್ಳದೆ ಯಾರಾದರೂ ದೊಡ್ಡವರು ಬಂದಿದ್ದರೆ ಅವರ ಫಜೀತಿ ಆಗಿಬಿಡುತ್ತಿತ್ತು. ಗೊತ್ತಾದ ಹೊತ್ತಿಗೆ ಎರಡೇ ಮಿನೀಟಾದರೂ ಮೊದಲು ಭೇಟಿಗೆ ಸಾಧ್ಯವಿಲ್ಲ. ಆದರೆ ಮಕ್ಕಳ ಮುಂದೆ ಗಾಂಧೀಜೀ ಕರಗಿ ಹೋಗುತ್ತಾರೆ. ಅವರ ನಿಷ್ಠುರನಿಯಮಗಳೆಲ್ಲ ಮನೆಯವರನ್ನು ಕಂಡ ನಾಯಂತೆ ಬಾಲ ಮುದುರಿಕೊಳ್ಳುತ್ತವೆ.

ಆ ಗುಂಪಿನಲ್ಲಿ ಹದಿಮೂರು ಜನ ಹುಡುಗರು ಇದ್ದರು. ಕೋಣೆಯಲ್ಲಿ ಬೇರೆ ಜನವೂ ಇದ್ದುದರಿಂದ ಅವರೆಲ್ಲರಿಗೆ ಒಟ್ಟಿಗೆ ಒಂದು ಸಾಲಾಗಿ ಕೂಡುವುದಕ್ಕಾಗಲಿ ನಿಲ್ಲುವುದಕ್ಕಾಗಲಿ ಸಾಧ್ಯವಾಗಲಿಲ್ಲ. ಅದನ್ನು ನೋಡಿ ಅವರಿಗೆ ಸ್ವಲ್ಪ ಕವಾಯತು ಕಲಿಸುವ ಇಚ್ಛೆ ಆಯಿತು ಬಾಪೂಗೆ. ಸರಿ. ಮೊದಲನೆಯ ಪಾಠ ಪ್ರಾರಂಭವಾಯಿತು.

'ಹೀಗೆ ಬನ್ನಿ. ನಿಮಗೆ ಎಣಿಸುವುದು ಬರುತ್ತದೆಯೆ? ಎಲ್ಲಿ—ಎಡಗಡೆಯಿಂದ ಬಲಗಡೆಗೆ ಎಣಿಸಿರಿ. ನೀವು ಎಷ್ಟು ಜನ ಇದ್ದೀರೋ ನೋಡೋಣ' ಎಂದರು.

'ಒಂದು—ಎರಡು—ಮೂರು—ನಾಲ್ಕು—ನಾಲ್ಕು—ನಾಲ್ಕು —' ಆ ಹುಡುಗರಿಗೆ ಇಂಥ ವಿನೋದ ಎಂದೂ ಆಡಿ ಗೊತ್ತಿರಲಿಲ್ಲ. ಏನೋ ವಿಚಿತ್ರವೆನಿಸಿತು. ನಾಲ್ಕನೆಯವನು ಹೇಳಿದ್ದನ್ನೇ ಮುಂದಿನವನೂ ಹೇಳಿದ. ಹಾಗೆಯೆ ಸಾಗಿತು. ಏಳನೆಯವನೂ ಅದೇ ಹಾಡೇ. ಹಾಗೂ ಹೀಗೂ ಕಷ್ಟಪಟ್ಟು ಹದಿಮೂರು ಎಣಿಸುವ ಹಾಗೆ ಮಾಡಿ ಆಯಿತು. ಈ ಕವಾಯತು ಮೂರು ನಾಲ್ಕು ಸಲ ಮಾಡಿಸಿದ ಮೇಲೆ ಕೊನೆಯ ಸಲ ಸರಿಯಾಗಿ ಹೇಳಿದರು.

ಮುಂದೆ ಸಾಗಿತು ಆಟ. 'ಈಗ ಹೇಳಿರಿ. ನಿಮಗೆ ಸರಿ ಬೆಸ ಗೊತ್ತಿದೆಯೆ?'

ಅವರಲ್ಲಿ ಒಬ್ಬಿಬ್ಬರು ಹುಡುಗರು ಹೂಂ ಎಂದರು. ಉಳಿದವರಿಗೆ ಸರಿ ಬೆಸ ಎಂದರೆ ಏನು ಎಂಬುದೇ ಅರ್ಥವಾಗಲಿಲ್ಲ. ಸರಿ. ಅವರಿಗೆ ಸರಿ ಬೆಸಗಳ ಚಿದಂಬರ ರಹಸ್ಯವನ್ನು ತಿಳಿಸಿಕೊಟ್ಟದ್ದಾಯಿತು. ಇನ್ನು ಸಾಲುಗಳು ಆಗಬೇಕಲ್ಲ. 'ಒಳ್ಳೆಯದು. ಈಗ ಬೆಸಗಳೆಲ್ಲ ಅಲ್ಲಿಯೆ ನಿಲ್ಲಿರಿ. ಸರಿಗಳೆಲ್ಲ ಒಂದೊಂದು ಹೆಜ್ಜೆ ಮುಂದೆ ಬನ್ನಿ.' ಹುಡುಗರಿಗೆ ಈ ಕವಾಯತೇನು ಗೊತ್ತು? ಪೆಚ್ಚು ಪೆಚ್ಚಾಗಿ ಹಿಂದೆ ಮುಂದೆ ಸರಿದಾಡಿದರು. ಇದ್ದವರಿಗೆಲ್ಲ ನಗು ಬಂತು. ಅಂತೂ ಇಂತೂ ಎರಡು ಸಾಲು—ಏಳರದು ಒಂದು. ಆರರದು ಒಂದು—ಸಿದ್ಧ ಮಾಡಿಸಿ ಆಯಿತು.

ಅಲ್ಲಿಂದ ಗಾಂಧೀಜೀ ಹುಡುಗರ ಪರೀಕ್ಷೆಗೆ ಮೊದಲು ಮಾಡಿದರು.

'ನಿಮ್ಮಲ್ಲಿ ಯಾರು ಯಾರು ಬತ್ತಿ ಸೇದುತ್ತೀರೋ ಕೈಯೆತ್ತಿರಿ. ನೋಡೋಣ.'

ಕೂಡಲೆ ಆರು ಕೈ ಮೇಲೆ ಹೋದವು. ಜೊತೆಯ ಹಿರಿಯರೆಲ್ಲ ಏಕೋ ಕೈಯೆತ್ತಿದರಲ್ಲ ಎಂದು ಸಹಾನುಭೂತಿಯಿಂದ ಮೂರು ಮಾವಿನಕಾಯಿ ಉದ್ದದ ಪುಟ್ಟ ಮಗುವೂ ಒಂದು ಕೈ ಎತ್ತಿತು. ಅವನ ಪಕ್ಕದಲ್ಲಿ ನಿಂತಿದ್ದ ಹಿರಿಯ ಹುಡುಗನಿಗೆ ಈ ಅಸತ್ಯ ಸಹನೆಯಾಗಲಿಲ್ಲ. 'ಲೋ ನೀ ಯಾಕೆ ಕೈಯೆತ್ತುತೀಯೋ? ನೀಯೇನು ಬತ್ತಿ ಸೇದುತೀಯಾ ಕೈ ಎತ್ತಲಿಕ್ಕೆ?' ಎಂದು ಅವನ ಕೈ ಕೆಳಗೆ ಇಳಿಸಿದ.

'ಬತ್ತಿ ಸೇದುವುದರಿಂದ ಆಗುವ ನಷ್ಟದ ಬಗ್ಗೆ ಒಂದು ಚಿಕ್ಕ ಪಾಠವಾಯಿತು. ವಿಷಯ ಬದಲಿಸಿ,

'ಅದಿರಲಿ. ನಿಮ್ಮ ಮೇಷ್ಟ್ರು ಸುದ್ದಿ ಹೇಳಿರಿ ನೋಡೋಣ. ನಿಮ್ಮ ಮೇಷ್ಟ್ರು ಒಳ್ಳೆಯವರೋ ಹೇಗೆ?'

'ಹೂಂ, ಹೂಂ.' ಎಲ್ಲರೂ ಒಟ್ಟಿಗೆ ಕೂಗಿದರು.

'ಪಾಠ ಚೆನ್ನಾಗಿ ಹೇಳುತ್ತಾರೆಯೋ?'

ಮತ್ತೆ ಹೂಂ, ಹೂಂಗಳ ಗದ್ದಲ.

'ನಿಮ್ಮನ್ನು ಒದೆಯುವದಿಲ್ಲವೇ?'

'ಇಲ್ಲ.'

'ಯಾವಾಗಲಾದರೂ ಒಂದು ಸಲ?'

'ಯಾವಾಗಲೂ ಇಲ್ಲ.'

'ಅದು ಹೇಗಯ್ಯ? ಒಂದು ಕೊಂಚವಾದರೂ ತಪ್ಪು ಇಲ್ಲದೆ ಪೂರಾ ಒಳ್ಳೆಯವರೇ ಆಗಿರುವವರನ್ನು ಯಾರನ್ನಾದರೂ ನೋಡಿದೀರಾ ನೀವು?'

ಒಂದೆರಡು ನಿಮಿಷ ಸದ್ದೇ ಇಲ್ಲ.

ಅವರಲ್ಲಿ ಮುಂದಾಳಾದವ ಮುಗುಳುನಗೆ ನಕ್ಕ. 'ಹೂಂ. ನೋಡಿದೇವೆ.' ಅಂದು ಕಣ್ಣುಮಿಟುಕಿಸಿದ. ತಮ್ಮ ಬಗ್ಗೆ ಆ ಹುಡುಗ ಹಾಗೆ ಅಂದದ್ದು ಕೇಳಿ ಬಾಪೂ ಬೆರಗಾದರು.

'ಅಲ್ಲಪಾ ಅಲ್ಲ. ಉಂಟೆ? ನಾನು ಅಷ್ಟು ಒಳ್ಳೆಯವನೆ ಆಗಿದ್ದರೆ ಸರಕಾರದವರು ನನ್ನನ್ನು ಮೇಲೆ ಮೇಲೆ ಜೈಲಿಗೆ ಕಳಿಸುತ್ತಿದ್ದರೆ?'

ಹುಡುಗರಿಗೆ ಇದು ಅರ್ಥವಾಗಲಿಲ್ಲ. ದಂಗುಬಡಿದು ನಿಂತರು.

'ಇಲ್ಲಿ ನೋಡಿ. ಮನುಷ್ಯರಲ್ಲಿ ಯಾರೂ ಅಷ್ಟು ಒಳ್ಳೆಯವರು ಇಲ್ಲ. ತಪ್ಪೇ ಇಲ್ಲದವನು ದೇವರು ಒಬ್ಬನೇ. ನಾವೆಲ್ಲರೂ ಆ ದೇವರ ಹಾಗೆ ಆಗುವ ಪ್ರಯತ್ನ ಮಾಡಬೇಕು. ದಿಟವೇ ಆ ದಾರಿ. ಎಂಥ ತಪ್ಪೇ ಮಾಡಲಿ ಯಾವಾಗಲೂ ದಿಟವಾಡಿರಿ. ದಿಟ ಹೇಳಿದವರಿಗೆ ಎಂದಿಗೂ ದುಃಖವಿಲ್ಲ.'

ಬಹಳ ಹೊತ್ತಾಗಿತ್ತು. ಭೇಟಿಗಾಗಿ ಜನ ಹೊರಗೆ ಕಾದಿದ್ದರು. ಅವರು ಒಳಗೆ ಬರಹತ್ತಿದರು. ಬಾಲಕರ ಸ್ವರ್ಗದಿಂದ ಬಾಪು ವ್ಯವಹಾರದ ಭೂಮಿಗೆ ಇಳಿಯಬೇಕಾಯಿತು.

ಮಕ್ಕಳು ನಕ್ಷತ್ರಗಳು ಇದ್ದಂತೆ. ಭೂಮಿಯ ಮೇಲೆ ನಿಂತು ನೋಡಿದರೆ ಅವು ಮಿರುಮಿರುಗುವ ಕಿರುತಾರಗೆಯಾಗಿ ಕಾಣುತ್ತವೆ. ಮೇಲೆ ಏರಿ ನೋಡಬಲ್ಲೆವಾದರೆ ಅವು ಕಿರಿದೂ ಗುಂಡೂ ಕಾಣಲಿಕ್ಕಿಲ್ಲ. ಅಖಂಡಜ್ಯೋತಿಯಾಗಿ ಕಂಡಾವು. ನಮ್ಮ ಕಣ್ಣು ಆತ್ಮದ ದೃಷ್ಟಿಯಿಂದ

ಬೆಳಗಿದರೆ ಮಕ್ಕಳ ಪರಿಶುದ್ಧಾತ್ಮದ ಪ್ರಕಾಶ ಕಂಡೀತು. ಇಲ್ಲದೆ ಇದ್ದರೆ ಒರೀ ಮಣ್ಣಿನ ಮುದ್ದೆಯಾದ ವೈ್ಯ ಕಂಡೀತು. ಮಗುವಿನ ಬಾಯಲ್ಲಿ ವಿರಾಟ್‌ಪ್ರಪಂಚವನ್ನೇ ನೋಡಿದ ಭಾಗ್ಯ ಯಶೋದಾತಾಯಿಯ ದಾದರೆ ಶಿಶುಲೋಕದ ಅನಿರ್ವಚನೀಯ ಶಾಂತಿಯನ್ನು ಆಧ್ಯಾತ್ಮ ದೃಷ್ಟಿ ಯಿಂದ ಅರಿತುಕೊಳ್ಳುವ ದಿವ್ಯಕಲೆ ಗಾಂಧೀಜಿಯದು. ಅಂತಲೇ ಗಾಂಧೀ ಜಿಯ ನಗೆಯಲ್ಲಿ ಮಕ್ಕಳ ನಗುವಿನ ನಿರ್ಮಲ ಕಾಂತಿಯಿದೆ.

ಗಾಂಧೀಜಿಗೂ ಹಸುಮಕ್ಕಳಿಗೂ ಇರುವ ಈ ಗಂಟು ಹಿಡಿತಕ್ಕೆ ಸಿಗದ ಮಂತ್ರ. ಹಿಂದುಸ್ಥಾನದ ಹುಡುಗರಿಗೆ ಗಾಂಧೀಜಿಯ ಪರಿಚಯ ಇರುವದು ಸಹಜ. ಕೆಲವರಿಗೆ ಗುರುತೂ ಇರಬಹುದು. ಆದರೆ ಪ್ರಪಂಚದ ಮೂಲೆ ಮೂಲೆಯಲ್ಲೂ ಮಕ್ಕಳ ನಡುವೆ ಗಾಂಧೀಜಿಯ ಮಾತು ಬರುತ್ತದೆ. ನಿಜಾಮ ಸಂಸ್ಥಾನದ ದೋರಣಕಲ್ಲಿನ ಬಿಷಪ್ ಅಜ ರಯ್ಯನವರು–ಬಿಷಪ್ ಎಂದರೆ ಕ್ರಿಸ್ತಮತದಲ್ಲಿ ಒಂದು ಪ್ರಾಂತದ ಧರ್ಮಾಧಿಕಾರಿ–ಅಮೇರಿಕಾ ದೇಶಕ್ಕೆ ಹೋಗಿದ್ದಾಗ ಅವರಿಗೆ ಆ ಅನುಭವ ವಾಯಿತು. ದಕ್ಷಿಣ ಪ್ರಾಂತಗಳಲ್ಲಿ ಸಂಚಾರ ಮಾಡುತ್ತ ಇವರು ಒಂದು ಸಲ ನಿಗ್ರೋಜನರ ಪ್ರಾಥಮಿಕ ಶಾಲೆಯೊಂದಕ್ಕೆ ಹೋದರು. ಆ ಶಾಲೆಯ ಮುಖ್ಯೋಪಾಧ್ಯಾಯರು ಇವರನ್ನು ಹಿಂದುಸ್ಥಾನದ ವಿಷಯವಾಗಿ ನಾಲ್ಕು ಮಾತು ಹೇಳುವಂತೆ ಕೇಳಿದರು. ಐದು ನಿಮಿಷದಲ್ಲಿ ಇವರು ಏನೋ ಚೂರು ಚಾರು ಹೇಳಿದರು. ಅದು ಮುಗಿದ ಮೇಲೆ ತಮಗೆ ಬೇಕಾದ ಪ್ರಶ್ನೆ ಕೇಳುವಂತೆ ಹುಡುಗರಿಗೆ ಉಪಾಧ್ಯಾಯರು ಹೇಳಿದರು. ಶಾಲೆಯ ಮೇಲಿನ ತರಗತಿಯ ಹುಡುಗಿ ಒಬ್ಬಳು ಕೂಡಲೆ ಜಿಗಿದುನಿಂತು 'ನಮಗೆ ಗಾಂಧೀ ಸುದ್ದಿ ಹೇಳಿರಿ ಸ್ವಲ್ಪ' ಎಂದು ಕೇಳಿದಳು. ಭಾರ ತಕ್ಕೆ ಅಮೇರಿಕಾ ಇದ್ದಷ್ಟು ದೂರ ಯಾವುದಿದೆ? ಆದರಲ್ಲಿ ನೀಗ್ರೋ ಜನ ರಂಥ ಹಿಂದುಳಿದ ಜನರ ಪ್ರಾಥಮಿಕ ಶಾಲೆ. ಅಲ್ಲಿ ಈ ಪ್ರಶ್ನೆ! ಅದರಲ್ಲಿ ಅಷ್ಟು ಉತ್ಸಾಹ!

ಗಾಂಧೀಜೀ ಶಿಶುಪ್ರಪಂಚದಲ್ಲಿ ತಮ್ಮದೇ ಆದ ಒಂದು ಸ್ಥಾನ ವನ್ನು ಮಾಡಿಕೊಂಡಿದಾರೆ. ಎಷ್ಟೋ ಜನ ತಮ್ಮ ಮಕ್ಕಳ ಮೂಲಕ

ಖಾದೀ ತೊಟ್ಟವರುಂಟು; ಗಾಂಧೀ ಶಿಷ್ಯರಾದುದುಂಟು. ಮಕ್ಕಳ ಪಾಲಿಗೆ ಗಾಂಧೀಜೀ ಕಿಂದರಿಜೋಗಿ. ಅವರ ನುಡಿ, ಅವರ ಪ್ರಭಾವ ಅಂತಹ ಸಮ್ಮೋಹಕ ಮಂತ್ರ. ಬೃಂದಾವನವಾಸಿಯಾಗಿದ್ದ ಹುಚ್ಚು ಬೈಜೂನ ಅಲೌಕಿಕ ಗಾಯನವಿದ್ದಂತೆ.

ಹಿಂದುಸ್ಥಾನದಲ್ಲಿಯೇ ಅಲ್ಲ ಪ್ರಪಂಚದ ಮೂಲೆಯಲ್ಲಿಯೂ ಕೂಡ ಗಾಂಧೀಜಿಯನ್ನು ಅರಿಯದ ಮಕ್ಕಳು ಅಪರೂಪ-ಎಂಬುದು ಅನೇಕರಿಗೆ ಅನುಭವವಾಗಿದೆ. ಮಕ್ಕಳ ಶಿಕ್ಷಣದಲ್ಲಿ ನುರಿತು ಹೆಸರಾದ ಡಾಕ್ಟರ್ ಮಾಂಟಿಸೋರಿ ಬರೆದಿದಾರೆ. 'ಗಾಂಧೀಜಿಯನ್ನು ಅರಿಯದವರು ಯಾರು ? ಯುರೋಪಿನ ಮೂಲೆ ಮೂಲೆಗಳಲ್ಲಿ ಸಣ್ಣ ಪುಟ್ಟ ಮಕ್ಕಳಿಗೂ ಗೊತ್ತಿದೆ. ಗಾಂಧೀಜಿಯ ಚಿತ್ರವನ್ನು ತೋರಿಸಿದರೆ ಪ್ರತಿಯೊಬ್ಬರೂ ತಮ್ಮ ತಾಯಿನುಡಿಯಲ್ಲಿ ಓ ಗಾಂಧಿ, ಓ ಗಾಂಧಿ ಎಂದು ಉತ್ಸಾಹ ದಿಂದ ಗುರುತಿಸುತ್ತಾರೆ. ಗಾಂಧೀಜೀ ಯುರೋಪಿಗೆ ಹೋಗಿದ್ದರಲ್ಲ. ಆಗ ಅಲ್ಲಿನ ಕೆಲವು ಮುಖ್ಯ ಸಂಸ್ಥೆಗಳನ್ನು ನೋಡಿದರು. ಕೆಲವನ್ನು ನೋಡಲು ವೇಳೆ ಸಿಗಲಿಲ್ಲ. ಆದರೆ ಡಾಕ್ಟರ್ ಮಾಂಟಿಸೋರಿಯ ಶಿಶು ವಿಹಾರಗಳನ್ನು ಮಾತ್ರ ಮರೆಯದೆ ನೋಡಿಬಂದರು. ಗಾಂಧೀಜೀ ರೋಮ್ ನಗರಕ್ಕೆ ಹೋಗಲು ಮುಸುಲೋನಿ ಅಲ್ಲ ಕಾರಣ; ಮಾಂಟಿ ಸೋರಿಯ ಶಿಶುವಿಹಾರ.

ಗಾಂಧೀಜೀ ನಂದೀಬೆಟ್ಟದಲ್ಲಿ ಇದ್ದಾಗ ಬೆಂಗಳೂರಿನ ಬಾಲಿಕಾ ಪಾಠಶಾಲೆಯೊಂದರ ಹುಡುಗಿಯರು ಅವರನ್ನು ನೋಡಿಹೋಗಲು ಬಂದಿದ್ದರು. ಬಾಪುಗೆ ಅವರು ಇದ್ದಷ್ಟು ಹೊತ್ತು ಸ್ವರ್ಗವೇ ಕೈಗೆ ಸಿಕ್ಕಹಾಗೆ ಆಯಿತು. ಅವರೊಡನೆ ಸೇರಿ ತಾವೂ ಆಟವಾಡಿದರು. ಆ ಹುಡುಗಿಯರು ಹಿಂದಿರುಗಿ ಬೆಂಗಳೂರಿಗೆ ಹೋದಮೇಲೆ ಬಾಪೂಗೆ ಒಂದು ಕಾಗದ ಬರೆದರು. ಬಾಪೂಗೆ ಆಗ ಕಾಯಿಲೆ. ದಿನವೂ ತಮ್ಮ ಸಾಮೂಹಿಕ ಪ್ರಾರ್ಥನೆಯಲ್ಲಿ ಬಾಪೂಗೆ ಬೇಗ ಗುಣವಾಗಲಿ ಎಂದು ದೇವರನ್ನು ಬೇಡಿ ಕೊಳ್ಳುತ್ತಿರುವುದಾಗಿ ಬರೆದರು. ಬಾಪೂ ಅವರಿಗೆ ಮಾರೋಲೆ ಬರೆದಾಗ ಆ ಮಕ್ಕಳನ್ನು ಪ್ರೀತಿಯ ಗಿಳಿಯಮರಿಗಳು ಎಂದರು. 'ಪ್ರೀತಿಯ

ಗಿಳಿಯು ಮರಿಗಳೆ! ನಿಮ್ಮ ಕಾಗದ ನನಗೆ ಬಲಕೊಡುವ ಔಷಧ-ಟಾನಿಕ್-ಇದ್ದಹಾಗೆ ಇದೆ.'

ಆ ಗಿಳಿಯುಮರಿಗಳು ಮತ್ತೊಂದು ಸಲ ನಂದೀಬೆಟ್ಟಕ್ಕೆ ಹಾರಿ ಬಂದವು. ಅವರೊಡನೆ ವಿನೋದವಾಡುತ್ತ ಬಾಪು ಕೇಳಿದರು. 'ಖಾದೀ ಅಂದರೆ ಏನು ಗೊತ್ತಿದೆಯೋ ನಿಮಗೆ? ಅದು ಚಲೋ ಪಕ್ಷಿಯಿರ ಬಹುದೆ? ಅಥವಾ ಒಂದು ಆಟದ ಸಾಮಾನೋ?

ಈ ಪ್ರಶ್ನೆ ಕೇಳಿ ಮುದುಕನ ವಿನೋದಕ್ಕೆ ಗಿಳಿಯುಮರಿಗಳು ನಕ್ಕವು. ಒಬ್ಬಳು ನಗುತ್ತ 'ಖಾದೀ ಎಂದರೆ ಬಟ್ಟೆ' ಎಂದಳು.

ಬಾಪೂ ಕೇಳಿದರು 'ಎಂಥ ಬಟ್ಟೆ ಅದು?'

ವಿನೋದ ಹೋಗಿ ಪರೀಕ್ಷೆ ಆಯಿತು. ಇದಕ್ಕೇನು ಹೇಳಬೇಕು? ಅವರಿಗೆ ಗೊತ್ತಾಗಲಿಲ್ಲ, ಕೊನೆಗೆ ಒಬ್ಬಳು 'ಒರಟು ಬಟ್ಟೆ' ಎಂದಳು. ಈಗ ಬಾಪೂನ ಸರತಿ ನಗುವುದು. ಪ್ರಶ್ನೆಗಳನ್ನು ಹಾಕಿ ಹಾಗೂ ಹೀಗೂ ಖಾದೀ ಅಂದರೆ ಕೈನೂಲಿನ ಬಟ್ಟೆ ಎಂದು ಹುಡುಗಿಯರಿಗೆ ತಿಳಿಸಿದುದು ಆಯಿತು. ಇನ್ನು ಅದರ ಉಪಯೋಗ-

'ಸರಿ. ಆ ಬಟ್ಟೆ ಯಾಕೆ ಉಡಬೇಕು ಗೊತ್ತೆ? ಹೇಳಿ ನೋಡೋಣ.'

'ತಡತ ಬರುತ್ತೆ ಅಂತ.' ಒಬ್ಬ ಹುಡುಗಿ ಹೇಳಿದಳು.

'ಅಲ್ಲ. ಅದು ಸರಿಯಾದ ಕಾರಣ ಅಲ್ಲ. ಅದಕ್ಕಿಂತ ಒಳ್ಳೆಯ ಕಾರಣ ಹೇಳಬೇಕು.'

'ಆ ಬಟ್ಟೆ ಒಗೆದರೆ ಬೆಳ್ಳಗೆ ಆಗುತ್ತೆ.' ಇನ್ನೊಬ್ಬ ಹುಡುಗಿಯ ಉತ್ತರ.

'ಅದೂ ಸರಿಯಲ್ಲ. ಚೆನ್ನಾಗಿ ಯೋಚನೆಮಾಡಿಕೊಂಡು ಉತ್ತರ ಹೇಳಿರಿ. ನಿಮ್ಮಲ್ಲಿ ಎಲ್ಲರಿಗಿಂತ ಯಾರು ಹೆಚ್ಚು ಬುದ್ಧಿವಂತರೋ ಅವರು ಹೇಳಿ ನೋಡೋಣ.' ತಿರುಗಿ ಅವರನ್ನು ಸರಿಯಾದ ಉತ್ತರಕ್ಕೆ ಕರೆ ದೊಯ್ಯಬೇಕಾಯಿತು.

'ಈ ಖಾದೀ ನೂಲು ಯಾರು ತೆಗೆಯುತ್ತಾರೆ ಗೊತ್ತೇ? ನಿಮ್ಮ ತಂದೆ ತಾಯಿಯಹಾಗೆ ತಮ್ಮ ಮಕ್ಕಳ ಓದು ಬರೆಹಕ್ಕಾಗಿ ತಿಂಗಳಿಗೆ

೪೦-೫೦ ರೂಪಾಯಿ ವೆಚ್ಚ ಮಾಡುವ ಭಾರೀ ಜನರಲ್ಲ. ಬಡವರು. ನಮ್ಮ ದೇಶದ ಜನರು ತೀರಾ—. ಎಲ್ಲಿ? ಆ ವಾಕ್ಯ ಮುಗಿಸಿರಿ.'

ತಲೆಗೊಂದು ಉತ್ತರ. ಒಂದು ಹುಡುಗಿ ಸರಿಯಾದ ಉತ್ತರ ಹೇಳಿ ವಾಕ್ಯ ಮುಗಿಸಿದಳು.

'ತಿಳಿಯಿತೇ? ನಮ್ಮ ದೇಶದ ಜನ ಬಡವರು. ಅವರಿಗೆ ನಿಮಗೆ ಇದ್ದ ಹಾಗೆ ಓದು ಬರೆಹ ಇಲ್ಲ. ನೀವು ಹಳ್ಳಿಗಳಿಗೆ ಯಾವಾಗಲಾದರೂ ಹೋಗಿದೀರಾ? ಆ ಜನರಿಗೆ ಹೊಟ್ಟೆಯ ತುಂಬಾ ಹಿಟ್ಟಿಲ್ಲ. ಹಾಲಿಲ್ಲ, ತುಪ್ಪ ಇಲ್ಲ. ಅಂಥ ಜನರೇ ನೂಲುವುದು. ಆದರಿಂದ ಒಂದು ದುಗ್ಗಾಣಿ ಬಂದರೆ ಅವರಿಗೆ ಅದೇ ಭಾಗ್ಯ. ಆ ಖಾದೀ ಬಟ್ಟೆ ನೀವು ಕೊಂಡರೆ ಅವರಿಗೆ ಆ ದುಗ್ಗಾಣಿ ಸಿಗುತ್ತದೆ. ಆ ದುಗ್ಗಾಣಿಗೆ ಉಪ್ಪೋ ಮೆಣಸಿನಕಾಯೋ ಹಾಲೋ ಹಣ್ಣೋ ಕೊಳ್ಳುತ್ತಾರೆ. ಗೊತ್ತಾಯಿತೇ ಖಾದೀ ಬಟ್ಟೆ ಯಾಕೆ ಉಡಬೇಕು ಎನ್ನುವುದು?'

ಹುಡುಗಿಯರಿಗೆಲ್ಲ ಹರುಷವಾಯಿತು. ಅವರಲ್ಲಿ ಅಳ್ಳೆದೆಯ ಸರಕಾರಿ ನೌಕರರ ಮಕ್ಕಳು ಎಷ್ಟು ಜನವೋ? ಈ ಮಕ್ಕಳ ಕಾಟ ಮನೆಯಲ್ಲಿ ಅವರಿಗೆಲ್ಲ ಪ್ರಾಣಸಂಕಟವಾಗಿರಬೇಕು.

ಹಿಂದುಸ್ಥಾನದಂಥ ದೊಡ್ಡ ದೇಶದ ಯೋಗಕ್ಷೇಮವನ್ನು ಹೊತ್ತ ಗಾಂಧೀಜೀ ಹೀಗೆ ಹುಡುಗರೊಡನೆ ಆಡಿಕೊಳ್ಳುವುದು ಕೆಲವರಿಗೆ ಸರಿಬೀಳುವುದಿಲ್ಲ. ಇದೆಲ್ಲ ವ್ಯರ್ಥ ಕಾಲಹರಣ ಎನ್ನುತ್ತಾರೆ. ಅಮಾತ್ಯ ರಾಜಗೋಪಾಲಾಚಾರ್ಯರು ಮಂತ್ರಿಯಾಗಿದ್ದಾಗ ದಿನಾಲೂ ಮುಂಜಾನೆ ತಮ್ಮ ಬಟ್ಟೆ ತಾವು ಒಗೆದುಕೊಳ್ಳುತ್ತಿದ್ದುದನ್ನು ಕಂಡು ಮದರಾಸು ಕಾಲೇಜಿನ ಹುಡುಗರು ಗಾಂಧೀಜಿಗೆ ದೂರು ಬರೆದಿದ್ದರು. ಇವರು ಬಟ್ಟೆ ಒಗೆವ ಅರ್ಧಗಂಟೆಯ ಕಾಲ ರಾಜಕಾರಣಕ್ಕೇ ಏಕೆ ಉಪಯೋಗಿಸಬಾರದು? ಇವರ ಮೇಲೆ ನಾಡಿನ ನೊತ್ತು. ಸುಮಾರು ಅದೇ ತರದ ಪ್ರಶ್ನೆಯನ್ನು ಗಾಂಧೀಜಿಯ ಬಗ್ಗೆ ಅನೇಕರು ಕೇಳುತ್ತಾರೆ. ಅಮಾತ್ಯ ಶ್ರೇಷ್ಠರೇ ಹೀಗೆ ಕೇಳಿದರು. ದೇಶಸೇವೆಯ ಕೆಲಸ ಗುಡ್ಡದಷ್ಟು ಕಾದು ಬಿದ್ದಿರುವಾಗ ಹುಡುಗರು ಹೆಂಗಸರು ಗುರುತಿಸವರು ಎಂದು ಕೂತರೆ

ಹೇಗೆ? ಅದಕ್ಕೆಲ್ಲ ಗಾಂಧೀಜಿಯದು ಒಂದೇ ಉತ್ತರ. ಕರಿಯ ನಾಯಿ ಬೆಳ್ಳಗೆ ಮಾಡಲು ಬಂದೀತೇ? ಸ್ವಲ್ಪ ಮನಸ್ಸು ಮಿದುವಿದ್ದಾಗ ಸರ್ವಜ್ಞನಂತೆ ಬಾಪೂಜೀ ಹೀಗೂ ಅಂದಾರು:

ಊರೆಲ್ಲ ನಂಟರು ಕೇರಿ ಎಲ್ಲವು ಬಳಗ
ಧಾರುಣಿಯು ಎಲ್ಲ ಕುಲದೈವವಾಗಿನ್ನು
ಯಾರನ್ನು ಬಿಡಲಿ ಸರ್ವಜ್ಞ?— ॥

ಗಾಂಧೀಜಿಯ ಹಿಡಿತವೇ ಅದು. ಅವರ ಬಾಳಿನಲ್ಲಿ ದೇಶಕ್ಕಿಂತ ರಾಷ್ಟ್ರಕ್ಕಿಂತ ಮಾನವ ಜೀವನ ದೊಡ್ಡದು. ಇದಕ್ಕೆ ಇದ್ದಷ್ಟು ಬೆಲೆ ಅದಕ್ಕೆ ಇಲ್ಲ. ಅಥವಾ ಮೊದಲಿನದಕ್ಕೆ ಬೆಲೆಯೇ ಇಲ್ಲವೆಂದರೂ ಸರಿಯೆ. ಅವರ ಚಳುವಳಿಗೆ ದೇಶವಲ್ಲ ಕೇಂದ್ರ—ಮಾನವ ಜೀವನ. ಸ್ವರಾಜ್ಯಕ್ಕಿಂತ ಸತ್ಯ ಹೆಚ್ಚು ಎಂದು ಅವರು ಹೇಳಿದುದರಲ್ಲಿ ಇದೇ ಅರ್ಥ. ಹೇಗಾದರೂ ಮಾಡಿ ಸ್ವರಾಜ್ಯ ಗಳಿಸಿದರಾಯಿತು ಎಂಬುದು ಅವರಿಗೆ ಒಪ್ಪಿಗೆಯಿಲ್ಲ. ಶಠರಿಗೆ ಶಾಠ್ಯವೇ ಔಷಧ ಎಂದು ಲೋಕಮಾನ್ಯ ಟಿಳಕರು ತೋರಿಸಿಕೊಟ್ಟಾಗ ಗಾಂಧೀಜಿ ಶಾಂತವಾಗಿ ಉತ್ತರ ಕೊಟ್ಟರು: ಶಾಠ್ಯಂ ಪ್ರತ್ಯಾಪಿ ಸತ್ಯಂ. ಮುಸುಲೋನಿ ಹಿಟ್ಲರರಿಗೆ ರಾಷ್ಟ್ರವು ಒಂದು ಕೌದಿ. ತಮ್ಮ ನಾಡಿನ ಜನ ಅದರ ಎಳೆಗಳು ಮಾತ್ರವಾದಾರು. ಆ ಎಳೆಗಳಿಗೆ ಬೇರೆ ವ್ಯಕ್ತಿತ್ವವಿಲ್ಲ. ಗಾಂಧೀಜಿಗೆ ಹಾಗಲ್ಲ. ಭಾರತ ಸಂತಾನ ಕೋಟಿಯಲ್ಲಿ ಪ್ರತಿಯೊಬ್ಬರೂ ಅವರಿಗೆ ವಿಶಿಷ್ಟವ್ಯಕ್ತಿ, ಚಿತ್ ಸ್ವರೂಪ. ತನ್ನಷ್ಟೇ ಪವಿತ್ರವಾದ ಸ್ವತಂತ್ರ ಪುರುಷತತ್ವ. ಈ ನೋಟವೇ ಅವರಿಗೆ ಮಹಾಮಹೋಪಾಧ್ಯಾಯರಾದ ಪಂಡಿತರೊಡನೆಯೂ ಅಜ್ಞಾನಾಂಧರಾದ ಗಾವಿಲರೊಡನೆಯೂ ಸರಸವಾಗಿ ಸ್ನೇಹಪೂರ್ಣವಾಗಿ ನಡೆದುಕೊಳ್ಳುವ ಶಕ್ತಿಯನ್ನು ಕೊಟ್ಟಿದೆ. ಅವರಿಗೆ ಗಂಡಾಗಲಿ ಹೆಣ್ಣಾಗಲಿ ಯಾರೂ ಅಪವಿತ್ರರಲ್ಲ, ಅನಾಮಧೇಯರಲ್ಲ. ಜೀವಿ ಜೀವಿಯೂ ಅಖಂಡ ಸತ್ಯದ ಅಂಶ. ಆ ಅನಂತಜ್ಯೋತಿಯ ಹಣತೆ. ಬೆಳಕು ಇಲ್ಲಿ ಉರಿಯದೆ ದೇಶದಲ್ಲಿ ಹೇಗೆ ಹರಡೀತು?

ಏಸುಕ್ರಿಸ್ತನದು ಒಂದು ಚಿತ್ರವಿದೆ. ಕಂಕುಳಲ್ಲಿ ಕುರಿಯಮರಿ ಒಂದನ್ನು ಎತ್ತಿಕೊಂಡು ಏಸು ಅದನ್ನು ಮುದ್ದಿಸುತ್ತಿದಾನೆ. ಆ ಕಣ್ಣಿನಲ್ಲಿ

ಅಪಾರವಾದ ಪ್ರೀತಿ ತುಂಬಿ ಹರಿಯುತ್ತಿದೆ. ಆತನ ಹಿಂದೆ ಮುಂದೆ ಸುತ್ತಲೂ ಕುರಿಮರಿಗಳು ಸುತ್ತಿಕೊಂಡಿವೆ. ಬುದ್ಧದೇವನದೂ ಇಂಥ ಚಿತ್ರ ನೋಡಿದ ನೆನಪಿದೆ. ಬಾಪು ಶಿಶುಲೋಕದ ಅನಿರ್ವಚನೀಯ ಶಾಂತಿ ಯಲ್ಲಿ ಮುಳುಗಿ ಮಗುವೊಂದನ್ನು ಮಡಿಲಲ್ಲಿ ಕೂಡಿಸಿಕೊಂಡು ನಗು ತ್ತಿದ್ದರು. ಸುತ್ತಲೂ ಮಕ್ಕಳು. ಬಾಪೂಜಿಯ ಮೋರೆ ಆಗ ತಾನೇ ಅರ ಳಿದ ಗುಲಾಬಿಯ ಹೂವಿನಂತೆ ತುಂಬಾ ಅಂದವಾಗಿತ್ತು. ಆ ನಗೆಯಲ್ಲಿ ಒಂದು ಅಲೌಕಿಕ ತೇಜವಿತ್ತು. ಆ ನೋಟವನ್ನು ನೋಡಿದಾಗ ಏಸು ಕ್ರಿಸ್ತನ ಚಿತ್ರ ನೆನಪಿಗೆ ಬಂತು. ಹನಿಗಣ್ಣು ಒರಸಿಕೊಳ್ಳಬೇಕಾಯಿತು.

ಗಾಂಧೀಜೀ ದಂಡಿ ಮಹಾಯಾತ್ರೆ ಮಾಡಿ ಲವಣಸತ್ಯಾಗ್ರಹ ಮಾಡಿದಾಗ ಯರವಡಾ ಸೆರಮನೆಯ ರುಚಿ ನೋಡಬೇಕಾಯಿತು. ಅಲ್ಲಿಂದ ಆಶ್ರಮಕ್ಕೆ ಕಾಗದ ಬರೆದಾಗ ಆಶ್ರಮದ ಹುಡುಗರಿಗಾಗಿ ಒಂದು ಕಾಗದ ಬರೆದರು.

'ಮುದ್ದು ಹಕ್ಕಿಗಳೇ,

ರೆಕ್ಕೆ ಇಲ್ಲದ ಹಕ್ಕಿ ಹಾರುತ್ತವೆಯೆ? ಇಲ್ಲ. ಆದರೆ ನಾನೇನೋ ಪ್ರತಿ ದಿನವೂ ನನ್ನ ಮನಸ್ಸಿನಲ್ಲೇ ಹಾರಿಬರುತ್ತೇನೆ. ನೋಡಿ ಇಲ್ಲಿ ವಿಮಲೆ ಇದಾಳೆ. ಇದೋ ಹರಿ. ಇಲ್ಲಿ ಧರ್ಮಕುಮಾರ. ನೀವೂ ನನ್ನ ಹಾಗೆಯೆ ಹಾರಿ ಬನ್ನಿ. ಮನಸ್ಸಿನಲ್ಲಿ ನೀವೂ ನನ್ನ ಬಳಿಗೆ ಬರಬಹುದು.

ಯೋಚನೆ ಮಾಡಲು ಶಕ್ತಿ ಬಂದಮೇಲೆ ನಮಗೆ ಗುರುವೇತಕ್ಕೆ? ಗುರು ದಾರಿ ತೋರಿಸಬಲ್ಲ. ಆಲೋಚನಾಶಕ್ತಿ ಕೊಡಬಲ್ಲನೇ? ಬುದ್ಧಿ ವಂತರಿಗೆ ಒಳ್ಳೆಯ ಆಲೋಚನೆಗಳೇ ಹೊಳೆಯುತ್ತವೆ.

ಪ್ರಭುಭಾಯಿಯ ಸಂಧ್ಯಾಪ್ರಾರ್ಥನೆಗೆ ನೀವೆಲ್ಲ ಸೇರುವಿರಲ್ಲ. ನಿಮ್ಮಲ್ಲಿ ಶ್ರದ್ಧೆಯಿಂದ ಪ್ರಾರ್ಥನೆ ಮಾಡುವವರು ಯಾರು? ಬರೆಯಿರಿ. ಮಕ್ಕಳೆಲ್ಲ ರುಜು ಹಾಕಿದ ಕಾಗದ ಒಂದನ್ನು ನನಗೆ ಕಳಿಸಿರಿ. ರುಜು ಮಾಡಲು ಬಾರದವರು ಹಂಸಪಾದದ ಗುರುತು ಹಾಕಲಿ.

ಬಾಪೂ ಆಶೀರ್ವಾದಗಳು'

ಕೆಲಸಮಾಡಿ ದಣಿದಾಗ ಮಕ್ಕಳೊಡನೆ ಆಡುವುದೂ ಒಂದು ಬಗೆಯ ವಿಶ್ರಾಂತಿ. ಬಾಪೂ ಈ ಕಲೆಯಲ್ಲಿ ತುಂಬಾ ಪಳಗಿದ ಕೈ. ಒಂದೇ ಒಂದು ಮುಗುಳು ನಗೆಯಿಂದ ಎಳೆಯ ಮಕ್ಕಳ ಮನಸ್ಸನ್ನು ಎಳೆದು ಕೊಂಡು ಬಿಡುತ್ತಾರೆ. ಮಕ್ಕಳನ್ನು ಮುದ್ದಾಡಿ ಮಡಿಲಲ್ಲಿ ಮಲಗಿಸು ತ್ತಾರೆ. ಎಷ್ಟೋ ಸಲ ಆ ಮೆದುವಾದ ನಗೆಯಾಟದಲ್ಲಿ ಮಗು ನಿದ್ದೆ ಹೋಗುತ್ತದೆ. ಮಕ್ಕಳ ನಡುವೆ ಬಾಪೂವನ್ನು ನೋಡಿದರೆ ಚಿಕ್ಕೆಗಳ ನಡುವೆ ಚಂದ್ರಾಮನನ್ನು ಕಂಡಂತೆ ಅನಿಸುತ್ತದೆ. ರಾಗದ್ವೇಷಪೂರ್ಣ ರಾದ ಹಿರಿಯರಿಗಿಂತ ಅವರ ನಡುವೆಯೇ ಇವರಿಗೆ ಹೆಚ್ಚು ಆನಂದ ಇದ್ದಂತೆ ತೋರುತ್ತಿದೆ.

ಭಿನ್ನ ಮತಗಳ, ಪಕ್ಷಪಕ್ಷಗಳ, ದೇಶದೇಶಗಳ ಜಗಳದ ಕಡೆತದಲ್ಲಿ ಮಕ್ಕಳೇ ಅಮೃತಹಸ್ತ ಧನ್ವಂತರಿ. ಜಗತ್ತಿನ ರಾಗದ್ವೇಷದ ಕೋಲಾ ಹಲದಲ್ಲಿ ಮಕ್ಕಳ ಮನಸ್ಸೇ ಶಾಂತಿ–ಐಕ್ಯದ ಸ್ಥಾಯೀ ಶ್ರುತಿ. ಆ ಶ್ರುತಿ ಯನ್ನು ಗಾಂಧೀಜಿಯ ಹಾಗೆ ಗುರುತಿಸಿಕೊಂಡವರು ಈ ಕಾಲದಲ್ಲಿ ಮತ್ತೊಬ್ಬರು ಇಲ್ಲ.



## ಅಹಿಂಸೆಯ ಅವತಾರ

ಮಕ್ಕಳು ಇದ್ದಂತೆಯೇ ಹೆಂಗಸರು. ವ್ಯವಹಾರದಲ್ಲಿ ಮುಳುಗಿ ಲೌಕಿಕ ಮಾಯೆಯಲ್ಲಿ ಪಂಡಿತರಾದ ಗಂಡು ಜಾತಿಗೆ ಇರುವ ಸ್ವಾರ್ಥ ಕೌಟಿಲ್ಯಗಳು ಪ್ರೇಮಮಯಿಯಾದ ಸರಲಸ್ವಭಾವದ ಹೆಣ್ಣಿಗೆ ಎಲ್ಲಿಯವು? ಆಕೆಯದು ಭಾವನಾಪ್ರಧಾನವಾದ ವೃತ್ತಿ. ಅಲ್ಲದೆ ಅನಾದಿ ಕಾಲ ದಿಂದಲೂ ಮನೆಯ ಪಂಜರದಲ್ಲೇ ಬೆಳೆದ ಗಿಣಿ. ಮಕ್ಕಳಿಗಿಂತ ಹೆಚ್ಚು ತಿಳಿವಿಗೆ ಗಂಡು ಜಾತಿ ಹೆಣ್ಣಿಗೆ ಅವಕಾಶ ಕೊಟ್ಟದ್ದು ಎಂದು ?

ಹೆಣ್ಣು ರಸಸೃಷ್ಟಿಯ ಪರಮಾವಧಿ. ಅಹಿಂಸೆ ಪ್ರೇಮಗಳ ಚಿರಂತನ ಪೂಜಾರಿಣಿ. ಈ ಹೊಲಬು ಅರಿಯದೆ 'ಸ್ತ್ರೀ ಬುದ್ಧಿಃ ಪ್ರಳಯಾಂತಕಃ' ಎಂದವ ಪಾಪಿ. 'ನಾರಿ ಹೆಮ್ಮಾರಿ' ಎಂದವ ದ್ರಾಕ್ಷಿಹಣ್ಣು ಹುಳಿ ಎಂದ ನರಿ. ತನ್ನ ಮೈಯೊಳಗಿನ ಕಾಮಜ್ವರಕ್ಕೆ ಹೆಣ್ಣು ಕಾರಣಕ್ರಿಮಿ ಎಂದು ಹೇಳಿದ ತಿಳಿವಿಗೆ ಔಷಧ ಉಂಟೆ? ಕುಣಿಯಲಾರದ ಸೂಳೆ ನೆಲ ಡೊಂಕು ಎಂದಂತಿದೆ ಈ ವ್ಯವಹಾರ. ತನ್ನ ಲೋಭ ಮೋಹಗಳನ್ನು ಮರೆಮಾಡಿ ಕಾಮಿನೀ ಕಾಂಚನವೆಂದು ಸೂತ್ರ ಹೆಣೆದು, ಮಂದಿಯನ್ನು ಮೋಸ ಗೊಳಿಸಹೋಗಿ ತನ್ನ ಬಲೆಯಲ್ಲಿ ತಾನೇ ಬಿದ್ದಿದಾನೆ ಗಂಡಸು.

ವಿಶ್ವದ ಇತಿಹಾಸದಲ್ಲಿ ಎಲ್ಲ ದಾಸ್ಯಗಳಲ್ಲಿ ಹೆಂಗಸರದೇ ಬಹಳ ಘೋರವಾದುದು. ಸಂಸಾರದ ಆಟದಲ್ಲಿ ಗಂಡು ಶಕುನಿಯ ದಾಳ

ಆಡುತ್ತಿದಾನೆ. ಆಕೆ ಗೆಲ್ಲುವ ಸಂಭವವೇ ಇಲ್ಲ. ಸೋತು ಸೋತು ಸೋಲೇ ತನ್ನ ಪಾಲಿಗೆ ಸರಿ ಎಂದು ಆಕೆ ತಿಳಿದಿದಾಳೆ. ಇದರಿಂದ ಯುಗಯುಗದ ದೌರ್ಜನ್ಯದ ಹೊರೆ ನಮ್ಮ ಪಾಲಿಗೆ ಕಾದಿದೆ. ಆ ಪಾಪಪರ್ವತವನ್ನು ಕರಗಿಸಬೇಕು. ಅದನ್ನು ತಲೆಯ ಮೇಲೆ ಹೊತ್ತು ನಾವು ಎಷ್ಟು ದೂರ ನಡೆದೇವು. ಆಕೆಗೆ ತನ್ನ ಪಾಡಿನ ಅರಿವು ಆಗಿದೆ. ಆ ಜ್ಞಾನೋದಯವನ್ನು ಅರಿತುಕೊಳ್ಳಬೇಕಾದುದು ಮಾನವಧರ್ಮ. ಹೀಗೆ ಗಾಂಧೀಜೀ ತಿಳಿದಿರಬೇಕು. ಇಲ್ಲದಿದ್ದರೆ Invariably man is the aggressor—ಯಾವಾಗಲೂ ಗಂಡುಸೇ ಕಾಲು ಕೆದರುವವನು, ಇವನದೇ ಎಲ್ಲ ದೌರ್ಜನ್ಯ ಎಂದು ಹೇಳುತ್ತಿದ್ದರೆ?

ಹೆಣ್ಣಿನ ಸಹಕಾರಕ್ಕೆ ಗಾಂಧೀಜೀ ಕೊಟ್ಟಷ್ಟು ಬೆಲೆ ಬೇರೆ ಯಾವ ಅವತಾರಪುರುಷನೂ ಕೊಟ್ಟಿಲ್ಲ. ಪುರಾಣಯುಗದ ಮಾತು ಹಾಗಿರಲಿ. ಬುದ್ಧದೇವನೂ ಹೆಂಗುಸಿಗೆ ಬಾಪೂ ಕೊಟ್ಟ ಸ್ಥಾನ ಕೊಡಲಿಲ್ಲ. ಹೆಣ್ಣು ಜನ್ಮಕ್ಕೆ ಮುಕ್ತಿಯ ಅಧಿಕಾರ ಇಲ್ಲವೆಂದ. ಉಳಿದವರಿಗಂತೂ 'ನಾರೀ ಸ್ತನಭರ ನಾಭೀ ದೇಶ'ದಲ್ಲಿ ಬರೀ 'ಮಾಂಸವಸಾದಿವಿಕಾರ'ವೇ ಕಂಡವು. ದಾಸರಿಗೆ ಕೂಡ 'ನಾರಿ ನರಕದ ದಾರಿ.' ಮನುವಿಗಂತೂ ಹೆಂಗುಸು 'ಪ್ರಮಾದ ಪಥ'ದ ಕೈಗಂಬ. ಗಂಡುಸನ್ನು ಕೆಡಿಸಿ ಅಡ್ಡಹಾದಿ ಹಿಡಿಸಲೆಂದೇ ಹೆಣ್ಣಿನ ಅವತಾರ. ಗಂಡುಸು ತುಪ್ಪದ ಗಡಿಗೆ ಹೆಣ್ಣು ಬೆಂಕಿಯ ಕುಂಡ ಎಂಬ ಗಾದೆಯೇ ಹುಟ್ಟಿಕೊಂಡಿತು. *

---

* ಹೆಣ್ಣಿನ ಬಗ್ಗೆ ಇಂಥ ಅಭಿಪ್ರಾಯಪಟ್ಟ ಕೀರ್ತಿ ಕೇವಲ ನಮ್ಮ ನಾಡಿಗೇ ಸಂದಿಲ್ಲ. ಇದು ಇಡೀ ಜಗತ್ತಿಗೆ ಹೊಂದಿದ ಮಾತು. "ಅರೇಬಿಯಾದಲ್ಲಿ ಹೆಣ್ಣು ಎಂದರೆ ಒಂದು ಸಾಮಾನು. ತಂದೆಯ ಸೊತ್ತು; ಮದುವೆಯಾದರೆ ಗಂಡನ ಸೊತ್ತು. ಗಂಡ ಸತ್ತರೆ ಉಳಿದ ಚರಸೊತ್ತಿನ ಹಾಗೆ ವಿಧವೆಯೂ ವಾರಸುದಾರರಿಗೆ ಸೇರಬೇಕು. ಅರೇಬಿಯಾದಲ್ಲಿ ಕುರೇಷ್ ಮನೆತನಗಳಲ್ಲಿ ಹೆಣ್ಣು ಹುಟ್ಟಿದರೆ ಅವಕ್ಕೆ ಸಾವೇ ತೊಟ್ಟಿಲು. ಯಹೂದ್ಯರಲ್ಲಿ ತಂದೆಯಾಗಲಿ ಅಣ್ಣ ತಮ್ಮಂದಿರಾಗಲಿ ಹೆಣ್ಣನ್ನು ಮಾರಬಹುದು. ಆದುದರಿಂದ ಚೆಂದವಾದ ಹೆಣ್ಣು ಅವರಿಗೆ ಲಾಭ. ಕಿರಸ್ತಾನರ ಮತದಲ್ಲಿಯಂತೂ ಜಗತ್ತಿನ ಮೂಲಪಾಪ ಹೆಣ್ಣು. ಹೆಣ್ಣಲ್ಲವೆ ಗಂಡನ್ನು ಸೆಳೆದು ಕೆಣಕಿ ಬೆದೆಗೆ ತಂದುದು! ಆಗ ಆಕೆ ಆ ಕೆಲಸ ಮಾಡಿರದಿದ್ದರೆ ಇಂದಿಗೂ ಜನವೆಲ್ಲ ನಂದನವನದಲ್ಲಿ ನಗ್ನಸೌಂದರ್ಯ

ಇಷ್ಟೆಲ್ಲ ಶ್ರೀರಂಗನೀತಿ ಹೇಳಿಯೂ ಗಂಡು ಹೆಣ್ಣನ್ನು ಬಿಟ್ಟಿಲ್ಲ. ಅವನಿಗೆ ಆಕೆ 'ಭಾರ್ಯೆ.' ಅವನು 'ಭರ್ತೃ.' ಆಕೆ ಹೊರೆ, ಇವನು ಹೊರುವವನು. ಈ ವೈರಾಗ್ಯವೆಲ್ಲ ಆಕೆಯ ಕಾಟದಿಂದ ತನ್ನನ್ನು ಬಿಡಿಸಿಕೊಳ್ಳುವುದಕ್ಕೆ ಅಲ್ಲ. ತನ್ನ ಕೋಟೆಯಲ್ಲಿ ಆಕೆಯನ್ನು ಭದ್ರವಾಗಿ ಕಟ್ಟಿಹಾಕಲಿಕ್ಕೆ. ಆಕೆ ತನಗೆ ಅಗತ್ಯ. ಆದರೆ ಆ ಗುಟ್ಟು ಆಕೆಗೆ ತಿಳಿಯಬಾರದು.

ಗಂಡಸಿನ ಈ ವಿಚಿತ್ರ ವೈರಾಗ್ಯ ಬಾಪೂಗೆ ಅರ್ಥವಿಲ್ಲದ ಅವಾಂತರ. 'ಇಬ್ಬರ ಆತ್ಮವೂ ಒಂದೇ. ಇಬ್ಬರ ಬಾಳೂ ಒಂದೇ. ಭಾವನೆಗಳೂ ಒಂದೇ. ಗಂಡು ಹೆಣ್ಣು ಪರಸ್ಪರ ಪೂರಕ ಸೃಷ್ಟಿ. ಒಬ್ಬರಿಗೊಬ್ಬರು ಆಸರೆ. ಒಬ್ಬರ ಸಂಪೂರ್ಣ ಸಹಾಯವಿಲ್ಲದೆ ಇನ್ನೊಬ್ಬರು ಬಾಳಲಾರರು. ಇದೇ ಮಾತನ್ನೇ ಕಾಲಿದಾಸಕವಿ ಗಂಡು–ಹೆಣ್ಣು–ವಾಕ್ ಅರ್ಥಗಳಂತೆ ಎಂದು ಹೇಳಿದ. ಗಂಡಿನ ಕಾರ್ಯಕ್ಷೇತ್ರ ಬೇರೆ, ಹೆಣ್ಣಿನದು ಬೇರೆ. ಆದರೂ ಇಬ್ಬರದೂ ಒಂದೇ ಗುಣ ಸಂಸ್ಕೃತಿ. ಗಂಡು ಉರಿ ಆದರೆ ಹೆಣ್ಣು ಬೆಳಕು.

ಅಷ್ಟೇ ಅಲ್ಲ. 'ಹೆಣ್ಣು ಅಹಿಂಸೆಯ ಅವತಾರ. ಅಹಿಂಸೆ ಎಂದರೆ ಕೊನೆ ಇಲ್ಲದ ಒಲವು. ಅಂದರೆ ಎಣೆಯಿಲ್ಲದ ದುಃಖ ಸಹನಶಕ್ತಿ. ಈ ಶಕ್ತಿಯನ್ನು ಗಂಡಿನ ತಾಯಾದ ಹೆಣ್ಣಿಗಿಂತ ಹೆಚ್ಚಾಗಿ ತೋರಬಲ್ಲವರು ಯಾರು? ಗರ್ಭ ಧರಿಸಿ ಒಂಭತ್ತು ತಿಂಗಳು ಹೊತ್ತು ಸಲಹಿ ಆ ದುಃಖದೊಳಗೆಯೇ ಸುಖವನ್ನು ಕಾಣುವಲ್ಲಿ ಅದನ್ನು ತೋರುತ್ತಿದಾಳೆ. ಹೆರಿಗೆಯ ಬೇನೆಗಿಂತ ಹಿರಿಯ ನೋವು ಏನುಂಟು? ಆದರೆ ಸೃಷ್ಟಿಯ ಸಂತೋಷ ಭರದಲ್ಲಿ ಅದನ್ನೆಲ್ಲ ಮರೆತುಬಿಡುತ್ತಾಳೆ. ತಾನು ಪಡೆದ ಮಗು ದಿನದಿನಕ್ಕೆ ಬೆಳೆಯಲೆಂದು ನಿತ್ಯವೂ ಕಷ್ಟಪಡುವವರು ಯಾರು? ಆ ವಾತ್ಸಲ್ಯವನ್ನು ಹೆಣ್ಣು ಇಡೀ ಜಗತ್ತಿಗೆ ಬೀರಲಿ. ಹಿಂದೆ ಆಗಲಿ ಮುಂದೆ ಆಗಲಿ ತಾನು

---

ದಿಂದ ಸುಖವಾಗಿರಬಹುದಾಗಿತ್ತು. ಈಗಲೂ ಅವರಿಗೆ ಹೆಣ್ಣು ಸೈತಾನನ ಸೋದರಿ. ಸೀಜರ್ ಚಕ್ರವರ್ತಿಯ ಪಾಲಿನ ಮೃತ್ಯು, ಬೇಬಿಲಾನಿನ ವಿನಾಶಿನಿ, ಟ್ರಾಯ್ ಪಟ್ಟಣದ ವಿಧ್ವಂಸಿನಿ ಯಾರು? ಹೆಣ್ಣು. ಇಂದಿಗೂ ಆಕೆಗೆ ಸ್ವರ್ಗದಲ್ಲಿ ಎಡೆಯುಂಟೋ ಇಲ್ಲವೋ ಪಾದರಿಗಳಿಗೇ ಸಂದೇಹ."

—ಖಾಲಿದ್ ಲತೀಫ್ ಗೌಬಾಃ ಪೈಗಂಬರ್

ಗಂಡಸಿನ ಕಾಮದ ವಿಷಯ ಎಂಬುದನ್ನು ಆಕೆ ಮರೆಯಲಿ. ಆಗ ಗಂಡಿನ ಜೊತೆಯಲ್ಲಿ ಅವನ ತಾಯಿ, ಅವನ ಜನ್ಮದಾತ್ರಿ, ಅವನ ಜೀವನ ಸೂತ್ರ ಧಾರಿಣಿ–ಎಂದು ಹೆಣ್ಣು ಸಗರ್ವವಾಗಿ ನಿಂತಾಳು. ಕಲಹದಲ್ಲಿ ಮುಳುಗಿ ಶಾಂತಿಯ ಅಮೃತಕ್ಕಾಗಿ ಈ ಕುರುಕ್ಷೇತ್ರ ಬಾಯಾರಿದೆ. ಇವರಿಗೆ ಶಾಂತಿಯ ಕಲೆಯನ್ನು ಕಲಿಸುವುದು ಆಕೆಗೇ ಸಂದಭಾಗ್ಯ.'

ಹೆಣ್ಣು ಗಾಂಧೀಜಿಗೆ ತಾಯಿ. ಆಕೆ ಇಂದ್ರಿಯ ಭೋಗದ ಪದಾರ್ಥ ಎಂಬುದು ಹೊಲ್ಲ. ಹೆಣ್ಣು ಪಾವನರೂಪಿ. ಅಷ್ಟು ಹೊಲಸಾಗಿ ಆಕೆಯನ್ನು ತಿಳಿಯುವುದು ಸಾಧ್ಯವಿಲ್ಲ. ಹಿಂದಿನ ಕಾಲದಲ್ಲೂ ಒಂದೊಂದು ಸಲ ಮಿಂಚಿನಂತೆ ಹೆಣ್ಣಿನ ವಿಷಯದಲ್ಲಿ ಆದರ ಹೊಳೆದು ಹೋಗಿದೆ. ನೂರು ತಪ್ಪುಮಾಡಲಿ ಹೆಣ್ಣನ್ನು ಹೂವಿನಿಂದಲೂ ಕೂಡ ಹೊಡೆಯಬೇಡ ‡ ಎಂದು ತಂತ್ರಶಾಸ್ತ್ರದ ಹಾದಿ ಹಿಡಿದವರು ಹೇಳಿದಾರೆ. ವೈಷ್ಣವರು ಇನ್ನೂ ಒಂದು ಹೆಜ್ಜೆ ಮುಂದೆ ಹೋದರು. ಹೆಣ್ಣಿಗೆ ಪಾಪವೇ ಇಲ್ಲ § ಎಂದರು. ಮೊದಲು ಹೇಳಿದವರದು ವಿಚಿತ್ರ ವೈರಾಗ್ಯವಾದರೆ ಇವರದು ವಿಪರೀತರಾಗ. ಈ ಪಾಪ ಪುಣ್ಯಗಳ–ಬೆಂಕಿ ತುಪ್ಪಗಳ ವಿಷಯ ವ್ಯವಹಾರದಲ್ಲಿ ಗಾಂಧೀಜೀ ತೊಡಗಿಕೊಳ್ಳರು. ಗಾಂಧೀಜಿಯ ಬ್ರಹ್ಮಚರ್ಯ ಉತ್ತಮ ಜಾತಿಯದು. ಈ ಯುಗವು ಕಂಡ ನೈಷ್ಠಿಕ ಬ್ರಹ್ಮಚಾರಿ ಅವರು. ಬ್ರಹ್ಮಚರ್ಯವ್ರತ ತೊಟ್ಟಮೇಲೆ ಅವರಿಗೆ 'ಹೆಣ್ಣು ಎನ್ನುವ ಜೀವವೆಲ್ಲ ತಂಗಿಯೋ ಮಗಳೋ ಆಗಿಹೋಯಿತು.' ಈ ನಿಟ್ಟಿನಲ್ಲಿ ನಡೆದವರಿಗೆ ಹೆಣ್ಣು ಅಗ್ನಿಕುಂಡವಲ್ಲ, ಯಜ್ಞಕುಂಡ.

---

‡ ಶತಾಪರಾಧ್ಯೆ ವನಿತಾಂ ಪುಷ್ಪೇಣಾಪಿ ನ ತಾಡಯೇತ್ ।
ದೋಷಾಂ ನಗಣಯೇತ್ ಸ್ತ್ರೀಣಾಂ ಗುಣಾನ್ನೈವ ಪ್ರಕಾಶಯೇತ್ ॥

—ಕುಲಾರ್ಣವತಂತ್ರ

§ ಯಥಾ ಗವಿ ಯಥಾ ವಿಪ್ರೇ ಯಥಾ ವೇದಾಂತ ವೇದಿನೇ ।
ವನಿತಾಯಾಂ ತಥಾ ಶಕ್ರ ದುರಿತಂ ನೈವ ವಿದ್ಯತೇ ॥

ಲಕ್ಷ್ಮೀತಂತ್ರ

ಶ್ರೀಮಾನ್ ರಾ. ಅನಂತಕೃಷ್ಣಶರ್ಮರ ಕೃಪೆಯಿಂದ

ಈ ಗುಂಪಿಗೆ ಹೆಣ್ಣು ಪಾಪವರಿಯದ ಅಪ್ಸರೆ. ಆ ಗುಂಪಿಗೆ ಕಾಮ ಬಾಣ ಕೈಯಲ್ಲಿ ಹಿಡಿದ ಬೇಟೆಗಾತಿ. ಇಬ್ಬರ ಕಣ್ಣೂ ಹೆಣ್ಣಿನ ರೂಪದ ಮೇಲಿದೆ. ಇಬ್ಬರ ಮನಸ್ಸೂ ಆಕೆಯ ಭೋಗಕ್ಕೆ ಸೋತಿದೆ. ಇಬ್ಬರಿಗೂ ಗಂಡು ಹೆಣ್ಣು ಎಂಬ ಭೇದ ಕಣ್ಣಿಗೆ ಕಟ್ಟಿದೆ. ರೂಪಿನ ರಾಜ್ಯ ದಾಟದೆ ಈ ಭೇದ ಬಿಡದು. ಗಾಂಧೀಜಿಗೆ ಈ ನಾಮರೂಪ ಕಾಲ್ತೊಡಕಾಗುವುದಿಲ್ಲ. 'ಇಂದು ಹೆಣ್ಣು ನಿನ್ನ ಹೆಂಡತಿಯಾಗಿದ್ದಾಳು. ಹಿಂದೆಯೋ—ಮೊದಲಿಗೋ—ಹೆಣ್ಣು ನಿನ್ನ ತಾಯಿ ಆಗಿದ್ದಳೆಂಬುದನ್ನು ಮರೆಯಲೇಕೆ?' ಮೇಲಿನ ಎರಡೂ ಹಾದಿಗಳ ಸಾಹಿತ್ಯದಲ್ಲಿ ಹೆಣ್ಣೆಂದರೆ ರೂಪ ಸೌಂದರ್ಯದ ಅಧಿದೇವತೆ. ಬ್ರಹ್ಮ ಸೃಷ್ಟಿಯಲ್ಲಿ ಇಲ್ಲದ ಅಂದವೆಲ್ಲ ಕವಿ ಸೃಷ್ಟಿಯಲ್ಲಿ ಹೆಂಗುಸಿಗೆ ಬಂದಿದೆ. ಈ ವಿಷಯದಲ್ಲಿ ತೋರಿಸಿದಷ್ಟು ಧಾರಾಳ ಕವಿಗಳು ಇನ್ನಾವುದರಲ್ಲೂ ತೋರಿಸಿಲ್ಲ. ಸೃಷ್ಟಿಯ ಬೇರೆ ಬೇರೆ ಪದಾರ್ಥಗಳಲ್ಲಿ ಕಾಣುವ ಚೆಲುವನ್ನೆಲ್ಲ ಸಂಗ್ರಹಿಸಿ ದೊಡ್ಡದೊಂದು ಗುಡಾಣದಲ್ಲಿ ಕುದಿಸಿ ಆ ಚೆಲುವಿನ ರಸದಿಂದ ಎರಕಹೊಯ್ದು ಹೆಣ್ಣಿನ ಗೊಂಬೆಯನ್ನು ಸೃಷ್ಟಿಸಿದಾರೆ ಇವರು. ಇಂಥ ಅಭಿನವ ಬ್ರಹ್ಮರಿಗೆ 'ಒಂದೇ ಒಂದು ನಿಯಮ'ವನ್ನು ಗಾಂಧೀಜೀ ಸೂಚಿಸುತ್ತಾರೆ. ಒಂದು ಒರೆಗಲ್ಲು ಕೊಡುತ್ತಾರೆ. 'ಅವರ ಬಗ್ಗೆ ಬರೆವಾಗ ನೀವು ಅವರನ್ನು ಏನೆಂದು ತಿಳಿದು ಬರೆಯುತ್ತೀರಿ? ನನ್ನ ಮಾತು ಕೇಳಿ ಲೇಖನಿ ಹಿಡಿಯುವ ಮೊದಲು ಹೆಣ್ಣು ಎಂದರೆ ನಿಮ್ಮ ತಾಯಿ ಎಂದು ಧ್ಯಾನಿಸಿಕೊಳ್ಳಿರಿ; ಬಾಯಾರಿದ ಭೂಮಿಗೆ ತಂಪು ನೀಡುವ ಮಳೆನೀರು ಆಕಾಶದಿಂದ—ಸುರಿವಂತೆ ನಿಮ್ಮ ಲೇಖನಿಯಿಂದ ಪವಿತ್ರ ಸಾಹಿತ್ಯ ಹರಿದೀತು. ರೂಪ ವರ್ಣನೆಯ ವಿವರಗಳು ಸಾಹಿತ್ಯಕ್ಕೆ ಅಷ್ಟು ಅಗತ್ಯವೇನು? ನನಗೆ ಹಾಗೆ ಅನಿಸದು. ನಿಮ್ಮ ಸಾಹಿತ್ಯದಲ್ಲಿ ಹೆಣ್ಣು ದೇವತೆ ಎನ್ನುತ್ತೀರಿ.' ಆದರೆ ಅಲ್ಲಿರುವ ಭಾವ ಭಕ್ತಿಯಲ್ಲ, ಕಾಮ. 'ಅದು ಶುದ್ಧ ತಪ್ಪು.'

ಹೆಣ್ಣು ಅಬಲೆ ಎಂಬ ದುರ್ಭಾವವೊಂದು ಜನರಲ್ಲಿ ಹರಡಿದೆ. ಇದು ಹೀಗೆ ಏಕೆ ಎಂದು ಗಾಂಧೀಜೀ ಕೇಳುತ್ತಾರೆ. 'ಹೆಣ್ಣು ಅಬಲೆಯೆ? ಏತರಲ್ಲಿ ಅಬಲೆ? ನಾನಂತೂ ಅರಿಯೆ. ಗಂಡುಸಿನಹಾಗೆ ಹೆಣ್ಣು ಗೂಳಿಯಲ್ಲ;

ಆ ಪಶುತ್ವ ಆಕೆಗೆ ಇವನಷ್ಟು ಇಲ್ಲ ಎಂಬದು ಅದರ ಅರ್ಥವಾದರೆ ಸರಿ. ಆದರೆ ಆ ಮಾತಿನಿಂದ ಆಕೆ ಅಬಲೆ ಎಂದು ಅರ್ಥ ಹೊರಡುವದಿಲ್ಲ. ಆಕೆಯ ಗುಣ ಉನ್ನತವಾದುದು ಎಂದು ಗೊತ್ತಾಗುತ್ತದೆ. ಕ್ಷಾತ್ರ ಬಲದಲ್ಲಿ ಆಕೆ ಅಬಲೆಯಾದರೆ ಕ್ಷಮಾ ಬಲದಲ್ಲಿ ಆಕೆ ಸಬಲೆ. ಹೆಣ್ಣು ಅಹಿಂಸೆ–ತ್ಯಾಗಗಳ ಪುತ್ಥಳಿ ಎಂದು ನಾನು ವರ್ಣಿಸಿದೇನೆ. ತಾನು ಗಂಡು ಜಾತಿಯ ಕೈಗೊಂಬೆ, ತನಗೆ ಏನೂ ಕೈಲಾಗದು ಎಂಬ ಭಾವ ಆಕೆ ಬಿಡ ಬೇಕು. ಬಿಟ್ಟರೆ ತನಗೂ ತನ್ನ ಜೊತೆಗಾರನಿಗೂ–ತಂದೆ, ಮಗ, ಗಂಡ ಯಾರೇ ಆಗಲಿ–ಜಗತ್ತನ್ನು ಹೆಚ್ಚು ವಾಸಯೋಗ್ಯವಾಗಿ ಮಾಡಬಲ್ಲಳು. ಆ ಶಕ್ತಿ ಆಕೆಗೆ ಉಂಟು. ನಿರರ್ಥಕವಾಗಿ ಜೀವ ಹಿಂಸೆಮಾಡುವ ಮಹಾ ಶಕ್ತಿ ಗಂಡುಸಿಗಿದೆ. ನಿಜ. ಇದನ್ನು ಕಲಿತು ಗಂಡುಸಿಗೆ ಇದಿರುನಿಂತು ಹೆಣ್ಣು ಜಗದ್ಧಿತವನ್ನು ಮಾಡಲಾರಳು. ಗಂಡುಸು ತಪ್ಪು ಹೆಜ್ಜೆ ಹಾಕು ತ್ತಿದಾನೆ. ಅದರಿಂದ ವಿನಾಶ ಕಾದಿದೆ. ಆ ವಿನಾಶಕ್ಕೆ ಅವನು ಒಬ್ಬನೇ ಹೋಗುವುದಿಲ್ಲ; ಹೆಣ್ಣನ್ನೂ ಎಳೆದುಕೊಂಡು ಹೋಗುತ್ತಾನೆ. ಅದು ಇಬ್ಬರನ್ನೂ ಕವಿಯುತ್ತದೆ. ಅವನನ್ನು ತಪ್ಪು ಹಾದಿಯಿಂದ ಸರಿಸಿ ವಿನಾಶದಿಂದ ಉಳಿಸುವುದು ಆಕೆಯ ಪುಣ್ಯವಾಗಲಿ.'

ಗಂಡುಸಾಗಿ ಹುಟ್ಟಿದ್ದರೆ ಚೆನ್ನಾಗಿತ್ತು ಎಂಬ ಮಾತು ಹೆಂಗುಸ ರಲ್ಲಿ ಅತಿ ಸಾಧಾರಣ. ಗಾಂಧೀಜೀ ಹೆಂಗುಸಿನ ಈ ಮೂರ್ಖತನಕ್ಕೆ ಮರುಗುತ್ತಾರೆ. ತಮ್ಮ ಜಾತಿಯನ್ನು ತಾವೇ ಅಷ್ಟು ತುಚ್ಛವಾಗಿ ಕಾಣುವುದು ಸರಿಯಲ್ಲ. ಹೆಂಗುಸು ಹಾಗೆ ಬಯಸಲು ಕಾರಣವಿರ ಬಹುದಾದರೆ ಗಂಡುಸೂ ಹೆಣ್ಣಾಗಿ ಹುಟ್ಟಿದ್ದರೆ ಚೆನ್ನಾಗಿತ್ತು ಎಂದು ಬಯಸಲು ಕಾರಣವಿದೆ. ಆಂಧ್ರ ಪ್ರಾಂತದ ಕಲಾವಂತಿಯರನ್ನು ನೋಡಿ ಗಾಂಧೀಜೀ 'ನನಗೆ ಪುನರ್ಜನ್ಮ ಇರುವುದಾದರೆ ಇವರ ನಡುವೆ ಹುಟ್ಟಿ ಇವರ ಸೇವೆ ಮಾಡಬಯಸುತ್ತೇನೆ' ಎಂದರು. ಅಲ್ಲದೆ ಹೆಣ್ಣು ಲಕ್ಷ್ಮಿ ಯಲ್ಲವೆ. ಆಕೆಯ ಪವಿತ್ರ ಚರಿತ್ರೆ ಏನು ಕಡಮೆಯೇ?

ನಾಮರೂಪವನ್ನು ಮೀರಿ ಗಾಂಧೀಜೀ ಹೆಣ್ಣಿನಲ್ಲಿ ಆತ್ಮದ ಒಂದು ದಿವ್ಯ ತೇಜಸ್ಸನ್ನು ಕಂಡಿದಾರೆ. ಗಂಡಿನಲ್ಲಾಗಲಿ ಹೆಣ್ಣಿನಲ್ಲಾಗಲಿ

ಧರ್ಮ-ಅಧರ್ಮ, ಮಾನವತ್ವ-ಪಶುತ್ವ ಎರಡೂ ಬೆರೆತಿವೆ. ಅಧರ್ಮವನ್ನು ಬಿಟ್ಟು ಪಶುತ್ವವನ್ನು ಗೆದ್ದರೆ ಆ ದಿವ್ಯ ತೇಜಸ್ಸು ಬೆಳಗುತ್ತದೆ. ಹೆಣ್ಣಿನಲ್ಲಿ ಬೆಳಗುವುದು ಅಹಿಂಸೆ-ಪ್ರೇಮ. ಈ ಹಾದಿಯಲ್ಲಿ ಗಾಂಧೀಜೀ ಹೆಣ್ಣು ಅನುಗ್ರಹಮಯಿ ಎಂಬ ನಿಲುಕಿಗೆ ಬಂದಿದಾರೆ. ರಾಮಾನುಜೀಯ ಪಂಥದಲ್ಲಿ ಲಕ್ಷ್ಮಿಗೆ ಬಹಳ ಪ್ರಧಾನವಾದ ಸ್ಥಾನ. ಅವರ ನಾರಾಯಣನು ಲಕ್ಷ್ಮೀ ವಿಶಿಷ್ಟನಾದವ. ಲಕ್ಷ್ಮಿಯನ್ನು ಅವರು ಹೀಗೆ ವರ್ಣಿಸುತ್ತಾರೆ.

**ಸಹಧರ್ಮ ಚರೀಂ ಶೌರೇಃ ಸಮ್ಮಂತ್ರಿತ ಜಗದ್ಧಿತಾಂ ।**
**ಅನುಗ್ರಹಮಯೀಂ ವಂದೇ ನಿತ್ಯಮಜ್ಞಾತನಿಗ್ರಹಾಂ ॥**

ಲಕ್ಷ್ಮಿ ಶೌರಿಯ ಸಹಧರ್ಮಚರಿ, ಧರ್ಮದ ಸಂಗಾತಿ; ಯಾವಾಗಲೂ ಜಗದ್ಧಿತವನ್ನೇ ಚಿಂತಿಸುವಳು; ಆಕೆ ಅನುಗ್ರಹಮಯಿ; ನಿಗ್ರಹ ಎಂಬುದನ್ನೇ ಎಂದೂ ಅರಿಯದಾಕೆ. ಆಕೆಗೆ ನಮಸ್ಕಾರ. ಗಾಂಧೀಜಿಯ ಮನಸ್ಸಿನಲ್ಲೂ ಅದೇ ಭಾವನೆ ಇರಬೇಕೆನಿಸುತ್ತದೆ. ಅವರಿಗೆ ತಮ್ಮಲ್ಲಿರುವ 'ಎಲ್ಲ ಶುಭಗುಣವೂ' ತಮ್ಮ 'ತಾಯಿ ನೀಡಿದ ದಾನ.' 'ಅಂತಲೇ ಹೆಣ್ಣು ಎಂದರೆ ನನಗೆ ನನ್ನ ತಾಯಿಯ ಮೇಲೆ ಇದ್ದಷ್ಟು ಗೌರವ-ಭಕ್ತಿ. ಇಂದ್ರಿಯ ಭೋಗದ ವಸ್ತು ಎಂದು ನಾನು ಎಂದೂ ತಿಳಿದಿಲ್ಲ' ಎನ್ನುವುದು. ಹೆಂಗುಸಿನದು ಕ್ಷಾತ್ರವಲ್ಲ, ಕ್ಷಮೆ ಎಂದಾಗ ಅದೇ ಭಾವ; ಆಕೆಯ ಗುಣ ನಿಗ್ರಹವಲ್ಲ ಅನುಗ್ರಹ ಎಂದು. ಆಕೆಯು ಅಹಿಂಸೆಯ ಮೂರ್ತಿ ಎಂದಾಗಲೂ ಅದೇ ಭಾವ. ಆಕೆಯ ಕೆಲಸ ಜಗದ್ಧಿತ ಚಿಂತನೆ; ಜಗತ್ತಿಗೆ ಶಾಂತಿ ಬೀರುವುದು. ಆದರೆ ಗಂಡಸಿನ ದೌರ್ಜನ್ಯ ಜಾಲಕ್ಕೆ ಸಿಕ್ಕಿ ಹೆಂಗುಸು ತನ್ನ ಸ್ವಭಾವ ಮರೆತು ಇದಾಳೆ. 'ಗಂಡುಸು ಹೆಂಗುಸನ್ನು ನಿಗ್ರಹಿಸಲು ಶಾಸನ-ಶಾಸ್ತ್ರ ಮಾಡಿದಾನೆ. ಆಕೆಯನ್ನು ತನ್ನ ಸಾಧನಸಾಮಗ್ರಿಯಾಗಿ ಮಾಡಿಕೊಂಡಿದಾನೆ. ಆಕೆಗೂ ಅದೇ ಪಾಠವಾಗಿದೆ. ಕಡೆಗೆ ಅದೇ ಸುಲಭವೂ ಸುಖವೂ ಆಗಿ ಕಂಡಿತು. ಕೆಳಗೆ ಬೀಳುವವರು ಇನ್ನೊಬ್ಬರನ್ನು ಜೊತೆಗೆ ಸೆಳೆದುಕೊಂಡು ಬಿದ್ದರೆ ಬೀಳಲು ಸುಲಭವಾಗುತ್ತದೆ.' ಈ ಸೆಳೆತದ ಸಾಧನವಾಗಿ ಕಾಮಶಾಸ್ತ್ರ, ಕೊಕ್ಕೋಕ ಮೊದಲಾದ ರತಿಶಾಸ್ತ್ರಗಳೆಲ್ಲ ಹುಟ್ಟಿದವು. ಗಂಡು

ಜಾತಿಯನ್ನು ಒಂದು ಮೇರೆ ತಪ್ಪದ ಹಾಗೆ ಇರಿಸಲು, ಅವರ ಅಧಿಕಾರ ತಮಗೆ ಪೀಡೆಯಾಗದಂತೆ ಮಾಡಲು ಹೆಣ್ಣು ನಾನಾ ವಿದ್ಯೆಗಳನ್ನು ಕಲಿತಳು. ಒನಪು ಒಯ್ಯಾರ, ಬಿಂಕ ಬೇಟ ಆಕೆಯ ಧರ್ಮವಾಯಿತು. ಇದನ್ನು ಕಂಡು ಗಾಂಧೀಜೀ ತುಂಬ ಮರುಗಿದಾರೆ. ಗಂಡಸಿನ ಕಾಮ ವಾಸನೆಯನ್ನು ತೃಪ್ತಿಗೊಳಿಸುವುದೇ ಹೆಂಗುಸಿನ ಪರಮಾರ್ಥವೇ? ಎಂದು ಗದರಿಸಿ ಕೇಳುತ್ತಾರೆ. 'ಗಂಡುಸು ಕೊಟ್ಟ ಬಿರುದಿಗೆ ತಕ್ಕಂತೆ ಇರಬೇಕೆಂದು ನಿಮಗೆ ಆಸೆಯೇ? ನಿಮ್ಮ ರೂಪ ಸೌಂದರ್ಯವನ್ನು ಮನ ದಣಿಯುವ ಹಾಗೆ ವರ್ಣಿಸಿ ತೃಪ್ತಿಪಡಲಿ ಗಂಡುಸು ಎಂದು ನಿಮ್ಮ ಅಭಿಪ್ರಾಯವೇ? ಅದು ನಿಮಗೆ ಸಮ್ಮತವೇ? ಗಂಡಿನ ಕಣ್ಣಿಗೆ ನಿಮ್ಮ ರೂಪು ಅಂದವಾಗಿ ಕಾಣಲಿ ಎಂದು ಬಯಸುತ್ತೀರಾ?' ಈ ಪ್ರಶ್ನೆ ಹಳ್ಳಿಯ ಹೆಂಗುಸರನ್ನು ಕೇಳಿಲ್ಲ ಗಾಂಧೀಜೀ. ಕಲಿತವರಿಗೇ ಈ ಸವಾಲು ಹಾಕಿದಾರೆ. ಸೀತೆ ಅವರಿಗೆ ಆದರ್ಶ ಸ್ತ್ರೀ, ಆದರ್ಶ ಸತಿ. 'ಸೀತೆ ನಿಮ್ಮ ಹಾಗೆ ಸಿಂಗಾರ ಮಾಡಿಕೊಂಡು ರಾಮನ ಮನಸ್ಸು ಸೆಳೆಯುತ್ತಿದ್ದಿರಬಹುದೆ? ಛೆ, ಎಂದಿಗೂ ಇಲ್ಲ. ಸೀತೆ ರಾಮನ ದಾಸಿ ಆಗಿದ್ದಳು ಎಂದು ತಿಳಿದವರಿಗೆ ಸೀತೆಯ ಸ್ವತಂತ್ರ ಗುಣದ ಔನ್ನತ್ಯವಾಗಲಿ ರಾಮನ ಔದಾರ್ಯದ ವೈಶಾಲ್ಯವಾಗಲಿ, ಎರಡೂ ಗೊತ್ತಿಲ್ಲ. ಸೀತೆ ಕೈಲಾಗದ ಅಬಲೆಯಾಗಿರಲಿಲ್ಲ.'

ಸೀತೆ ಒಂದು ಸಲ ಗಂಡನಿಗೆ ಇದುರಾಡಿದಳು. ರಾಮಾಯಣದಲ್ಲಿ ಆ ಪ್ರಸಂಗ ಬಹಳ ಮೆದುವಾಗಿ ವರ್ಣಿತವಾಗಿದೆ. ಗಂಡನೇ ದೇವರು ಎಂಬ ನೀತಿಗೆ ಗಂಡನಿಗಿಂತ ಧರ್ಮ ದೊಡ್ಡದು ಎಂಬ ಸೂತ್ರವನ್ನು ಸೀತೆ ಜೋಡಿಸಿದಾಳೆ. ಗಾಂಧೀಜಿಗೆ ಆ ಸಂದರ್ಭ ಬಹಳ ಮೆಚ್ಚಿನದು; ಬಹಳ ಬೆಲೆಯುಳ್ಳದ್ದು. ನಮ್ಮಲ್ಲಿ ಗಂಡಿಗೆ ಇದಿರಾಡುವುದು ಹೆಣ್ಣಿಗೆ ಒಂದು ಪಾಪವಾಗಿದೆ. 'ಧರ್ಮಕ್ಕಾಗಿ ಗಂಡನಿಗೆ ಇದಿರಾಡುವ ಕಲೆ ನಮ್ಮ ಹೆಂಗುಸರಿಗೆ ಕಲಿಸಬೇಕು' ಎನ್ನುತ್ತಾರೆ ಗಾಂಧೀಜೀ. 'ಗಂಡನ ಕಾಮ ನಿರೋಧಕ್ಕೆ ತನಗೆ ಅಧಿಕಾರ ಇಲ್ಲ ಎಂದು ಹೆಂಗುಸು ತಿಳಿದಿದ್ದಾಳೆ. ಅದು ತಪ್ಪು. ಆ ಅಧಿಕಾರ ಆಕೆಗೆ ಸಹಜವಾದುದು, ಮೂಲ

ಭೂತವಾದುದು.' ಈ ಮಾತನ್ನು ಗಾಂಧೀಜೀ ಸಾರಿಸಾರಿ ಹೇಳುತ್ತಾರೆ. ನಗೆಮಾತಿನಲ್ಲಿ, ಗಂಭೀರೋಪದೇಶದಲ್ಲಿ, ವಿಷಾದದ ಉದ್ಗಾರದಲ್ಲಿ— ಅನೇಕ ಪ್ರಕಾರವಾಗಿ ಅದು ಹೊರಬೀಳುತ್ತದೆ. 'ನನ್ನ ಹೆಂಡತಿಯೇ ನನಗೆ ಸರ್ವ ಸ್ತ್ರೀಲೋಕ. ಆಕೆಯನ್ನು ಅರ್ಥ ಮಾಡಿಕೊಂಡಾಗ ನನಗೆ ಇಡೀ ಹೆಣ್ಣುಜಾತಿಯ ಮನಸ್ಸೇ ಅರ್ಥವಾಯಿತು.' ಅವರ ಆಶ್ರಮ ಜೀವನದಲ್ಲೂ ಆಫ್ರಿಕಾದಲ್ಲೂ ಹಿಂದುಸ್ತಾನದಲ್ಲೂ ಅವರಿಗೆ ಅನೇಕ ಜನ ಹೆಂಗುಸರೊಡನೆ ಬಾಳಬೇಕಾಗಿ ಬಂದಿದೆ. ಕೆಲವರು ಬಳಗದವರು ಕೆಲವರು ಗೆಳೆಯರು. ಇವರಲ್ಲಿ ಬೇರೆ ಬೇರೆ ಜಾತಿ ಬೇರೆ ಬೇರೆ ದೇಶದವರೂ ಇದ್ದರು. ಈಗಲೂ ಇದಾರೆ. ಇವರ ಕೆಲಸದಲ್ಲಿ ಅವರೂ ಪಾಲುಗೊಂಡಿದಾರೆ. ಅವರಿಗೆಲ್ಲ ಈ ಮಂತ್ರೋಪದೇಶವಾಗಿದೆ. 'ಅವರಿಗೆ ಈ ವಿದ್ಯೆ ಕಲಿಸಿದೇನೆ. ನನ್ನ ದಿನಗಳು ಬಹಳ ಉಳಿದಿಲ್ಲ. ಉಳಿದಿರುವ ಆಯುಷ್ಯದಲ್ಲಿ ಹೆಣ್ಣು ಜಾತಿಗೆ ಈ ಸ್ವಾತಂತ್ರ್ಯಮಂತ್ರ ಕಲಿಸಬೇಕೆಂದಿದೇನೆ. ಅವರ ಮನಸ್ಸಿಗೆ ಈ ಸತ್ಯ ತಿಳಿಯುವ ಹಾಗೆ ಹೇಳಬೇಕೆಂದಿದೇನೆ.' ಎನ್ನುತ್ತಾರೆ.

ಗಾಂಧೀಜಿಯ ಬಾಳು ಸೋತವರ ಗೆಲವಿಗಾಗಿ ಮೀಸಲಾಗಿದೆ; ದಲಿತರ ಉದ್ಧಾರಕ್ಕಾಗಿ, ಬಡ ಕುರಿಗಳ ಮೋಕ್ಷಕ್ಕಾಗಿ ಮುಡಿಪಾಗಿದೆ. ಅಂತೇ ಸ್ತ್ರೀಜನ ಸಮಸ್ಯೆಯ ಬಗ್ಗೆ ಅವರಿಗೆ ಅಷ್ಟು ಉತ್ಸಾಹ. ಆ ಸೇವೆಯಲ್ಲಿ ಅವರಿಗೆ ಮಾತೃಪೂಜೆ. ಈ ಪೂಜೆಗೆ ತಮಗೆ ಅರ್ಹತೆ ಇದೆ ಎಂದು ಅವರು ತಿಳಿದಿದಾರೆ. 'ದಕ್ಷಿಣ ಆಫ್ರಿಕಾದಲ್ಲಿ ಸತ್ಯಾಗ್ರಹಕ್ಕೆ ಬನ್ನಿರೆಂದು ಹೆಂಗುಸರನ್ನು ಕರೆದಾಗ ನನಗೆ ತಿಳಿಯಿತು—ಸ್ತ್ರೀಜನ—ಸೇವೆಗೆ ನನಗೆ ಯೋಗ್ಯತೆ ಇದೆ ಎಂಬುದು. ನನ್ನ ಮಾತು ಅವರ ಹೃದಯಕ್ಕೆ ನೇರಾಗಿ ತಾಕುತ್ತಿದ್ದುದು ನನಗೇ ಅಚ್ಚರಿಯಾಯಿತು. ಮುಸ್ಲಿಮ ಹೆಂಗುಸರಿಗೆ ಕೂಡ ನನ್ನ ಬಳಿ ನಿಸ್ಸಂಕೋಚ; ಅವರು ನನ್ನ ಮುಂದೆ ಪರದೆ ಹಾಕಿಕೊಳ್ಳುತ್ತಿರಲ್ಲಿಲ್ಲ.'

ಹಿಂದುಸ್ತಾನದ ಹೆಂಗುಸರಲ್ಲಿ ಈಚೆಗೆ ಅದ್ಭುತವಾದ ಜಾಗೃತಿ ಉಂಟಾಗಿದೆ. ಮೊನ್ನೆ ಮೊನ್ನೆಯವರೆಗೆ ತೊತ್ತಾಗಿದ್ದ ಹೆಂಗುಸು ಇಂದು

ರಾಜಕೀಯರಂಗದಲ್ಲಿ ಸಮಾನವಾಗಿ ಹೆಜ್ಜೆ ಹಾಕುತಿದಾಳೆ. ಗಾಳಿಬೆಳಕು ಸೋಕಿದರೆ ಮೈ ಮೈಲಿಗೆಯಾದೀತು ಎಂದು ಪರದೆಯ ಹಿಂದೆ ಹುದುಗಿ ಸಲ್ಪಟ್ಟಿದ್ದಾಕೆ ರಾಷ್ಟ್ರಮಾತೆ ಆಗಿದಾಳೆ, ಮಂತ್ರಿ ಆಗಿದಾಳೆ. ಅಡಿಗೆಯ ಮನೆಯಲ್ಲಿ ಸಂಜೆಗತ್ತಲಿನಲ್ಲಿ ಕರಿಯ ಬಾವುಗ ಬಂದರೆ ಚಿಟ್ಟನೆ ಚೀರಿ ಕೊಳ್ಳುತ್ತಿದ್ದ ಮಹಾಧೀರೆ ಇಂದು ಪೋಲೀಸರ ಲಾಠೀಪ್ರಯೋಗವನ್ನು ತಾನಾಗಿ ಇದುರಿಸುತ್ತಿದಾಳೆ. ಇದೆಲ್ಲ ಈ ಗಾಂಧೀಯುಗದಲ್ಲಿ ಆಗಿದೆ. ಗಾಂಧೀಜಿಗಿಂತ ಮೊದಲು ಹಿಂದುಸ್ತಾನದ ಹೆಂಗುಸರನ್ನು ಆ ಕೂಪ ದಿಂದ ಎತ್ತಲು ಹೆಣಗಿದವರು ಬಹಳಮಂದಿ ಇದಾರೆ. ಶಂಕರಾಚಾರ್ಯರಿಗೆ ಮೊದಲು ಅದ್ವೈತವು ಇರಲಿಲ್ಲ ಎಂದಲ್ಲ. ಹಾಗೇ ಗಾಂಧೀಜಿಯ ಕೈವಾ ಡಕ್ಕೆ ಈ ಕೀರ್ತಿ ಮುಖ್ಯವಾಗಿ ಸಲ್ಲಬೇಕು.

'ಸತ್ಯಾಗ್ರಹದಿಂದಲೇ ಸ್ತ್ರೀಜನ ಸಮಸ್ಯೆಗೆ ನನ್ನ ಸೇವೆ ಮೊದ ಲಾಯಿತು' ಎಂದಿದಾರೆ ಗಾಂಧೀಜೀ. 'ಹಳ್ಳಿಯ ಹೆಂಗುಸರಿಗೆ ಹಿಂದೆ ಅವರು ಯಾವಾಗಲೂ ಕಂಡು ಅರಿಯದ ಶಕ್ತಿ ಗೌರವಗಳನ್ನು ಕೊಟ್ಟಿತು ಸತ್ಯಾಗ್ರಹ. ಉಪ್ಪಿನ ಸತ್ಯಾಗ್ರಹ ಸಾವಿರಾರುಜನ ಹೆಂಗಳೆಯರನ್ನು ಅವರ ಗವಿಗಳಿಂದ ಹೊರಗೆಳೆದು ಗಂಡುಸಿನೊಡನೆ ಸರಿಸಮವಾಗಿ ದೇಶ ಸೇವೆ ಮಾಡಲು ಹಚ್ಚಿತು.' ನಿಜವಾಗಿಯೂ ಹಿಂದುಸ್ತಾನದ ಹೆಂಗಸರ ಮೋಕ್ಷ ಸತ್ಯಾಗ್ರಹದಿಂದ ಆದಹಾಗೆ ಮತ್ತೆ ಯಾವುದರಿಂದಲೂ ಆಗಿಲ್ಲ. ಕಾಂಗ್ರೆಸ್ಸಿನಲ್ಲಿ ನಿರ್ಭಯವಾಗಿ ನಲಿದಾಡುವ ನಾನಾಪ್ರಾಂತಗಳ ಕೇಸರೀ ಬಣ್ಣದ ಸ್ವಯಂ ಸೇವಿಕೆಯರೇ ಅದಕ್ಕೆ ಸಾಕ್ಷಿ. ಗಾಂಧೀಜೀ ಹೇಳಿ ದುದು ಅಭಿಮಾನದ ಮಾತಲ್ಲ. ಸತ್ಯಾಗ್ರಹ ನಮ್ಮ ಹೆಂಗುಸರಿಗೆ ಹೊಸ ತೊಂದು ಶಕ್ತಿ–ದೃಷ್ಟಿ ಕೊಟ್ಟಿತು. ಅದರಲ್ಲಿ ಪ್ರಧಾನಪಾತ್ರ ವಹಿಸಲು ಹೆಂಗುಸರಿಗೆ ವಿಶೇಷ ಸೌಲಭ್ಯವಿದೆ. ಸಾವಿರಾರು ವರ್ಷಗಳಿಂದಲೂ ಹೆಂಗುಸಿನ ರಾಮಬಾಣ ಶಾಂತಿ, ಸ್ಥೈರಣೆ, ಸತ್ಯ, ನಿರ್ಭಯಗಳು. ಆಕೆಯ ಸ್ವಭಾವಕ್ಕೆ ಹಿಂಸೆ ಕೇವಲ ರಾಕ್ಷಸಗುಣ. ಆ ದಾರಿ ಆಕೆಯದಲ್ಲ. ಪರರಿ ಗಾಗಿ ದುಃಖ ನುಂಗುವುದು, ಜಗದ್ಧಿತಕ್ಕಾಗಿ ಆತ್ಮತ್ಯಾಗ ಮಾಡುವುದು ಆಕೆಯ ದಾರಿ. ಆಕೆಯ ಪ್ರಕೃತಿಯೇ ಅದನ್ನು ಆಕೆಗೆ ಕಲಿಸುತ್ತಿದೆ.

ಮಕ್ಕಳನ್ನು ಹೊತ್ತು ಹೆತ್ತು ಸಲಹುವ ಆಕೆಯ ಶರೀರಧರ್ಮವೇ ಆಕೆಗೆ ಸತ್ಯಾಗ್ರಹದ ತತ್ವವೇಕೆ-ಆಚರಣೆಯನ್ನೇ ಕಲಿಸುತ್ತಿದೆ. ಜಗತ್ತಿನಲ್ಲಿ ಕಾಲಿಟ್ಟ ಪ್ರತಿಯೊಂದು ಮಗುವೂ ಆಕೆಯ ಸಹನೆಯ ಹೂವು, ಆತ್ಮ ತ್ಯಾಗದ ನೋಂಪಿಯ ಹಣ್ಣು. ಅಲ್ಲಿಗೇ ಮುಗಿಯಲಿಲ್ಲ ಆ ಅಹಿಂಸೆಯ ದಿವ್ಯ ಪ್ರೇಮದ ತಪಸ್ಸು. ಬಾಲ್ಯದಲ್ಲಿ ಮಗುವನ್ನು ಬೆಳೆಸುವಾಗ ಸಾವಿರ ಸಂದರ್ಭಗಳಲ್ಲಿ ಆ ವ್ರತದ ಕಠಿಣ ಪರೀಕ್ಷೆಯಾಗುತ್ತದೆ. ಸಮಗ್ರಾಗಿ, ನಮ್ಮಲ್ಲಿ ಅವರು ಇಟ್ಟ ಪ್ರೀತಿಗಾಗಿ ಆ ಕಷ್ಟನಿಷ್ಠುರಗಳನ್ನು ಅವರು ಸೋಸುತ್ತಾರೆ. ಅವರಂತೆ ನಾವೂ ಮಾನವಕೋಟಿಯ ದುಃಖನಿವಾರಣೆ ಗಾಗಿ ಸಂತೋಷದಿಂದ, ಸಮರ್ಪಣೆಯ ದೃಷ್ಟಿಯಿಂದ ದುಃಖಪಾನದ ವ್ರತ ಹಿಡಿಯಬೇಕೆಂಬುದೇ ಸತ್ಯಾಗ್ರಹದ ಸಂದೇಶ. ಈ ದಾರಿಯಲ್ಲಿ ಗಂಡಸರಾದ ನಮಗಿಂತ ಅವರು ಶತಯೋಜನ ದೂರ ಮುಂದೆ ಹೋಗಿ ದಾರೆ. ಆ ಅನುಭವದಲ್ಲಿ ನಮ್ಮ ಹಾದಿ ಇದೆ. ಅವರ ಮುಂದಾಳುತನದಲ್ಲಿ ನಮ್ಮ ಮೋಕ್ಷವಿದೆ.

ಅಹಿಂಸೆಯೇ ಪರಮಧರ್ಮ ಎಂದು ನಮ್ಮವರು ಹಿಂದೆಯೇ ಹೇಳಿ ದಾರೆ. ಕೋಟಿ ಗ್ರಂಥದಲ್ಲಿ ಅಡಕವಾದ ಧರ್ಮಸೂಕ್ಷ್ಮ ಇದು. 'ಪೂರ್ಣ ಅಹಿಂಸೆಯ ಇದಿರಿನಲ್ಲಿ ಹಿಂಸೆ ಬೆಳಕಿನ ಮುಂದೆ ಕತ್ತಲಿನಂತೆ ಕರಗಿ ಹೋಗುತ್ತದೆ.' ಎಂದು ಯೋಗಾಚಾರ್ಯ ಪತಂಜಲಿ ಋಷಿ ಸಾರಿದಾನೆ. ಯೇಸುಕ್ರಿಸ್ತನೂ ಅಹಿಂಸೆಯನ್ನೇ ನಂಬಿದ ಮಹಾನುಭಾವ. ಆದರೆ ಇಲ್ಲೆಲ್ಲೂ ಗಾಂಧೀಜಿಗೆ ಅಹಿಂಸೆಯ ಪಾಠ ಆಗಲಿಲ್ಲ; ಆ ದೀಕ್ಷೆ ಸಿಗಲಿಲ್ಲ. ಅವರ ಹೆಂಡತಿ ಕಸ್ತೂರಬಾಗೆ ಆ ಗುರುತ್ವ ಸಲ್ಲಿಸಬೇಕು.

'ನನ್ನ ಹೆಂಡತಿಯನ್ನು ನನ್ನ ಮನಸ್ಸಿಗೆ ತಕ್ಕಂತೆ ಬಗ್ಗಿಸುವ ಪ್ರಯತ್ನದಲ್ಲಿ ಆಕೆಯಿಂದ ನಾನೇ ಅಹಿಂಸೆಯ ಪಾಠವನ್ನು ಕಲಿತೆ. ನನ್ನ ಹಟಕ್ಕೆ ಮಣಿಯದೆ ದೃಢವಾಗಿ ವಿರೋಧಿಸುವುದೊಂದು ಕಡೆ; ನನ್ನ ಮೂರ್ಖ ದೌರ್ಜನ್ಯದ ಪೀಡೆ ಸದ್ದಿಲ್ಲದೆ ಸೈರಿಸುವುದು ಒಂದು ಕಡೆ. ಇದು ನನ್ನನ್ನು ನಾಚಿಸಿ ಆಕೆಯನ್ನು ಆಳಲಿಕ್ಕೇ ನಾನು ಹುಟ್ಟಿದ್ದೇನೆ ಎಂಬ ನನ್ನ ಪಿತ್ತವನ್ನು ಪೂರಾ ಇಳಿಸಿತು. ಹೀಗಾಗಿ ಪರಿಣಾಮದಲ್ಲಿ

ಅಹಿಂಸೆಯ ಹಾದಿಯಲ್ಲಿ ಆಕೆ ನನ್ನ ಗುರು ಆದಳು. ನಾನು ದಕ್ಷಿಣ ಆಫ್ರಿಕಾದಲ್ಲಿ ಮಾಡಿದ್ದೇನು ? ಆಕೆ ಅರಿಯದೆ ಅನುಸರಿಸಿದ ಸತ್ಯಾಗ್ರಹ ಧರ್ಮವನ್ನೇ ನಾನು ಅರಿತು ಬೆಳೆಸಿದೆ. ಅಷ್ಟೆ.' ಅಂತೆಯೆ ಸತ್ಯಾಗ್ರಹದಲ್ಲಿ ಪುಸ್ತಕ ಪಾಂಡಿತ್ಯದ ಗೋಜು ಇಲ್ಲ. ಅದಕ್ಕೆ ಬೇಕಾದುದು ದೃಢ ಆತ್ಮ ವಿಶ್ವಾಸ, ಅಚಲ ಪ್ರೇಮ. ಅದು ಜ್ಞಾನಮಾರ್ಗವಲ್ಲ, ಭಕ್ತಿಪಂಥ.

ಇದೇ ಕಾರಣವಿದ್ದೀತು ಸ್ತ್ರೀಲೋಕದ ಮೇಲೆ ಗಾಂಧೀಜಿಗೆ ಇರುವ ಹಿಡಿತಕ್ಕೆ. ಇದಲ್ಲದೆ ಗಾಂಧೀಜಿಯ ಕಾಮಧೇನುವಾದ ರಾಟೆಗೂ ಹೆಂಗುಸರಿಗೂ ಇರುವ ಸಂಬಂಧ ಯಾರಿಗೆ ಗೊತ್ತಿಲ್ಲ. ಚರಖಾ ಬಡ ಕೂಲಿ ಹೆಣ್ಣುಮಗಳ ಪಾಲಿನ ವಿಷ್ಣು ಚಕ್ರ. ಆ ದಿನ ಮೊರೆ ಇಟ್ಟವಳು ಒಬ್ಬ ದ್ರೌಪದಿ. ಇಂದು ಹಿಂದುಸ್ತಾನದ ಬಡಹೆಂಗುಸರೆಲ್ಲರ ಗೋಳು ಕೇಳಿಸುತ್ತಿದೆ. ಮನೆಮನೆಯಲ್ಲಿಯೂ ಚಕ್ರಾವತಾರವಾಗಬೇಕಾಗಿದೆ. ದರಿದ್ರನಾರಾಯಣನ ಚಕ್ರ, ಹೀಗೆ ಹೇಳಿದವರು ಕವಿಯಲ್ಲ. ಅಲಂಕಾರಕ್ಕಾಗಿ ಹಾಗೆ ಹೇಳಲಿಲ್ಲ. ಹಾಗೆ ಅಂದವರು ಗಾಂಧೀ ದರ್ಶನಕ್ಕೆ ಬಂದಿದ್ದ ಒಬ್ಬ ಸಾಮಾನ್ಯ ಹೆಂಗುಸು.

ಅದು ಹೇಗಾದರೂ ಇರಲಿ. ಸ್ತ್ರೀಲೋಕದ ಶ್ರದ್ಧೆ ವಿಶ್ವಾಸ–ಸಹಾಯ ಸಾಹಚರ್ಯ ಗಾಂಧೀಜಿಗೆ ದೊರೆತ ಹಾಗೆ ಯಾರಿಗೂ ದೊರೆತಿಲ್ಲ. ಗಾಂಧೀಜಿಗಾಗಿ ಬಡತನವನ್ನು ಸಂತೋಷದಿಂದ ಸ್ವೀಕರಿಸಿದ ಆಗರ್ಭ ಶ್ರೀಮಂತಿನಿಯರು ಇದಾರೆ. ಬಾಪೂಜಿಯ ಶುಶ್ರೂಷೆಗೆ ಎಂದು ಆಜೀವ ಬ್ರಹ್ಮಚರ್ಯದ ಕಠಿನವ್ರತವನ್ನು ತೊಟ್ಟ ಕೋಮಲೆಯರು ಉಂಟು. ಅವರ ಮನಸ್ಸಂತೋಷಕ್ಕಾಗಿ ಕೆಲವು ಜನ ಪರಮ ಸನಾತನಿಯರು ಸಂಪ್ರದಾಯವನ್ನು ಮುರಿದಿದಾರೆ. ಕೆಲವರು ಇಂಗ್ಲೀಷು ಹೆಂಗುಸರು ಮಹಾತ್ಮನನ್ನು ಅನುಸರಿಸಿ ಸ್ವಜಾತಿಗೆ ಬೇಡದವರು ಆಗಿದಾರೆ. ಮೀರಾಬೇನಳಂತೂ ಸರ್ವಧರ್ಮವನ್ನೂ ಬಿಟ್ಟು 'ತಂ ಏಕಂ'–ಅವರೊಬ್ಬರನ್ನೇ–ಶರಣು ಹೋಗಿದಾಳೆ.

ಗಾಂಧೀಜಿಯ ಸೇನೆಯಲ್ಲಿ ಅಬಲೆಯರೇ ಬಹಳ. ಅಹಿಂಸೆಯ ಋಷಿಯಾದ ಇವರಿಗೆ ಇದು ಸರಿ ತಾನೆ. ಶುಶ್ರೂಷಾ ಪರಾಯಣೆ

ಮೀರಾಬೇನ್, ಮೈಗಾವಲಿನ ಸುಶೀಲಾ ನಾಯರ್, ರಾಯಭಾರಿ ಅಮೃತ ಕುವರ್, ಉತ್ಕಲದ ಶಾಂತಿಲಕ್ಷ್ಮಿ ರಮಾದೇವಿ ಚೌಧುರಿ, ಜ್ಯೋತಿಸಂಘದ ಜೀವ ಮೃದುಲಾ ಬೇನ್, ತ್ಯಾಗಪ್ರಾಣೆ ಭಕ್ತಿ ಲಕ್ಷ್ಮಿಬಾ, ಗಾಂಧೀ ಸೇವಾಸೇನೆಯ ಕ್ಯಾಪ್ಟನ್ ಗೋಷೀ ಬೇನ್ ಪೆರಿನ್ ಬೇನರು, ಸತ್ಯಾಗ್ರಹಿ ಪ್ರೇಮಾ ಕಂಟಕ್, ತಾಲೀಮೀ ಸಂಘದ ಆಶಾದೇವಿ ಮುಂತಾದವರು ಹಿಂದುಸ್ತಾನಕ್ಕೆ ಚೆನ್ನಾಗಿ ಪರಿಚಿತರಾಗಿದಾರೆ. ಜನಸಾಮಾನ್ಯಕ್ಕೆ ಪರಿಚಯವಾಗದವರು ಇನ್ನೂ ಎಷ್ಟೋ ಮಂದಿ ಇದಾರೆ.

ಈ ಗುಂಪಿನಲ್ಲಿ ಈಚೆಗೆ ಕುಮಾರಿ ಅಮ್ತುಲ್ ಸಲಾಮಳ ಹೆಸರು ಕೊಂಚ ಪ್ರಚಾರವಾಯಿತು. ಸಿಂಧಪ್ರಾಂತಕ್ಕೆ ಬಾಪೂಜಿಯ ಶಾಂತಿ ದೂತಿಯಾಗಿ ಈಕೆ ಸಂಧಾನಕ್ಕೆ ಹೋಗಿದಾಳೆ. ಹಿಂದು–ಮುಸ್ಲಿಮ ಸೌಹಾರ್ದಕ್ಕಾಗಿ ತನ್ನ ಪ್ರಾಣವನ್ನೇ ಬಲಿಕೊಡುವ ಮಹಾಸಂಕಲ್ಪ ಈಕೆಯದು.

ಕುಮಾರಿ ಸಲಾಮಳು ಇನ್ನೂ ಚಿಕ್ಕ ಪ್ರಾಯದ ಹುಡುಗಿ. ೨೩–೨೪ ವರುಷ ವಯಸ್ಸಿರಬಹುದು. ಮೈಯೋ ಎಲೆಯ ಬಳ್ಳಿಯ ಹಾಗೆ ಅತಿ ದುರ್ಬಲ. ಆರೋಗ್ಯವೂ ಅಷ್ಟೆ. ಸೇವಾಗ್ರಾಮದಲ್ಲಿ ಆಕೆಯ ಕೆಲಸ ಗಾಂಧೀಜಿಯ ಶುಶ್ರೂಷೆ. ಮೀರಾಬೇನ್ ಆಶ್ರಮದಲ್ಲಿ ಇಲ್ಲದಾಗ ಆಕೆಯ ಪಾಲಿನ ಕೆಲಸವೆಲ್ಲ ಈಕೆಯ ಪಾಲಿಗೆ. ಬಾಪೂಜಿಯ ಊಟ–ಉಪಚಾರ ಈಕೆಯ ಕೆಲಸ.

ಸಲಾಮಳು ಸೇವಾಗ್ರಾಮಕ್ಕೆ ಬರುವ ಮೊದಲು ಸಾಬರಮತಿಯಲ್ಲಿಯೂ ಇದ್ದಳು. ಹಲವು ವರ್ಷಗಳಿಂದ ಈಕೆ ಆಶ್ರಮವಾಸಿಯಾಗಿ ಬಾಪೂಜಿಯ ಪರಿವಾರದೊಳಗೆ ಸೇರಿಹೋಗಿದಾಳೆ. ಈಕೆಯ ತಂದೆ ಪಟಿಯಾಲಾ ಸಂಸ್ಥಾನದಲ್ಲಿ ಮೀರ್ ಮುನಷಿ–ಮುಖ್ಯ ಮುತ್ಸದ್ದಿ–ಆಗಿದ್ದರು. ಸಾಧಾರಣ ಶ್ರೀಮಂತರ ಮನೆತನ. ಈಗಲೂ ಅವರ ಮಕ್ಕಳು–ಕುಮಾರಿಯ ಅಣ್ಣತಮ್ಮಂದಿರು–ಮುಂಬಯಿಯಲ್ಲಿ ಅಚ್ಚುಕಟ್ಟಾಗಿ ವ್ಯಾಪಾರ ಮಾಡಿಕೊಂಡು ಚೆನ್ನಾಗಿ ಗಳಿಸುತ್ತಿದಾರೆ. ಅವರ ಜೊತೆಯಲ್ಲಿ

ಇದ್ದರೆ ಈಕೆಗೆ ಎಲ್ಲ ಸೌಖ್ಯವೂ ಉಂಟು. ಸಿರಿವಂತಿಕೆಯಲ್ಲಿ ಬದುಕ ಬಹುದು. ಅವರಿಗೂ ತಮ್ಮ ತಂಗಿ ತಮ್ಮ ನಡುವೆ ಇರಲಿ ಎಂಬ ಆಶೆಯಿದೆ.

ಆದರೆ, ಬಾಪೂಜಿಯ ಆಶ್ರಮ ಜೀವನದ ರುಚಿ ನೋಡಿದ ಈ ಜೀವಿಗೆ ಮತ್ತೆ ಸಿಂಗಾರ ಬಂಗಾರದ ಬದುಕು ರುಚಿಸೀತು ಹೇಗೆ? ಆಶ್ರಮದಲ್ಲಿ ಬದುಕು ತುಂಬಾ ಕಷ್ಟವಾದುದು. ಮೈಗೆ ಆ ಒರಟು ಬಾಳು ಸಹಿಸೀತು. ಆದರೆ ಮನಸಿಗೆ ಆ ನಿಯಮಗಳ ಪಾಲನೆ ಬಹಳ ಕಷ್ಟ. ಆದರೂ ಆಕೆ ಆಶ್ರಮವನ್ನು ಬಿಡಲಿಲ್ಲ.

ಕುಮಾರಿ ಸಲಾಮುಳ ಮೈಕಟ್ಟು ತುಂಬಾ ಅದೃಢ. ಗಾಳಿ ಬೀಸಿದರೆ ಹಾರಿಹೋಗುವ ಹಾಗೆ ಇದಾಳೆ. ಆರೋಗ್ಯವೂ ಅಷ್ಟೆ. ಆದರೆ ಆ ಬಡಕಲು ಮೈಯಲ್ಲಿ ಇರುವ ಧೈರ್ಯ ತ್ಯಾಗ ಬಹಳ ಹೆಚ್ಚಿನದು. ಸತ್ಯಾಗ್ರಹವೇ ಹಾಗೆ. ಆ ಸೇನೆಯಲ್ಲಿ ದುರ್ಬಲರಿಗೂ ರೋಗಿಗಳಿಗೂ, ಹೆಣ್ಣಿಗೂ ಗಂಡಿಗೂ, ಹುಡುಗರಿಗೂ ಮುದುಕರಿಗೂ ಎಲ್ಲರಿಗೂ ಸ್ಥಾನವುಂಟು.

ಇಲ್ಲೇ ಅಲ್ಲ. ವಿಲಾಯತಿಯಲ್ಲೂ ಇದೆ ಈ ಗುಂಪು. ಕಳೆದ ವರ್ಷ ರಾಜಕೋಟೆಯ ಪ್ರಕರಣದಲ್ಲಿ ರಾಯಭಾರಿಯಾಗಿ ನಡೆದು ವೈಸರಾಯ ಗಾಂಧೀ ಭೇಟಿಯನ್ನು ಸಾಂಗಗೊಳಿಸಿದ ಅಗಾಥಾ ಹ್ಯಾರಿಸನ್ ಯಾರಿಗೆ ಗೊತ್ತಿಲ್ಲ! ಗಾಂಧೀಜೀ ದುಂಡುಮೇಜಿನ ಪರಿಷತ್ತಿಗೆಂದು ಇಂಗ್ಲೆಂಡಿಗೆ ಹೋಗಿದ್ದಾಗ ಭವ್ಯವಾದ ಅರಮನೆಗಳಲ್ಲಿ ವಾಸಮಾಡಬಹುದಾಗಿತ್ತು. ಆದರೆ ಹಾಗೆ ಮಾಡಲಿಲ್ಲ. ಬಡಬಗ್ಗರ ಕೇರಿಯಲ್ಲಿ ದೀನಸೇವಾಶ್ರಮದಲ್ಲಿ ಇದ್ದರು. ಆ ಕಿಂಗ್ಸ್ಲಿ ಹಾಲಿನಲ್ಲಿ ಇಂದಿಗೂ ಗಾಂಧೀಜೀ ನೆಟ್ಟ ಒಂದು ಮರ ಇದೆ. ಈಗಲೂ ಮಹಾತ್ಮರು ವಾಸವಾಗಿದ್ದ ಕೋಣೆ ಎಂದು ಒಂದು ಕೋಣೆ ತೋರಿಸುತ್ತಾರೆ. ಗಾಂಧೀಜೀ ಅಲ್ಲಿ ಇಳಿಯುವ ಹಾಗೆ ಮಾಡಿದ್ದು ಆ ಕಿಂಗ್ಸ್ಲಿ ಹಾಲಿನ ಯಜಮಾನಿ ಮ್ಯೂರಿಯಲ್ ಲೆಸ್ಟರ್‌ನ ಭಕ್ತಿ. ಗಾಂಧೀಜೀ ಹಿಂದೂ ಬೈರಾಗಿಗಳ ರೀತಿಯವರು. ಅರ್ಧದಿಗಂಬರ ಸನ್ಯಾಸಿ. ವಿಲಾಯತಿಯಲ್ಲಿ ಸಾಧುಸತ್ಪುರುಷರು ಕೂಡಾ ಪೂರ್ಣ

ವಸ್ತ್ರಧಾರಿಗಳು. ಇಂಥ ವೇಷದಿಂದ ಇನ್ನೊಬ್ಬರು ಯಾರಾದರೂ ವಿಲಾಯತಿಗೆ ಹೋದರೆ ಹುಚ್ಚು ನಾಯನ್ನು ಕಲ್ಲಿನಿಂದ ಹೊಡೆದು ಹುಡುಗರು ಕೊಲ್ಲುವಂತೆ ಅಲ್ಲಿನ ಜನ ಮಾಡಿಯಾರು. ಆದರೆ ಇವರಿಗೆ ಎಷ್ಟು ಮರ್ಯಾದೆ! ಬೆಳಗಿನ ಜಾವದ ಛಳಿ ಅಲ್ಲಿ ಹಿಮದಂತೆ ಕೊರೆಯುತ್ತದೆ. ಇವರ ಪ್ರಾರ್ಥನೆಗಳಿಗೆ ಬರಬೇಕಾದರೆ ಅಲ್ಲಿನ ಜನರಿಗೆ ಅದೊಂದು ಕಠಿನ ಪರೀಕ್ಷೆ. ಇಷ್ಟಾದರೂ ಆ ನಾಲ್ಕು ದಿನ ಬಾಪೂಜಿಯ ಜೊತೆಯಲ್ಲಿ ಇದ್ದು ತಮ್ಮ ಬಾಳನ್ನು ಬೆಳಗಿಸಿಕೊಳ್ಳಬೇಕು ಎಂದು ಪ್ರಯತ್ನಪಟ್ಟವರಲ್ಲಿ ಹೆಂಗುಸರೇ ಬಹಳ.

ಆ ಸೆಳೆತವನ್ನು ವಿಂಗಡಿಸಿ ವಿಮರ್ಶಿಸಿ ಇಲ್ಲಿದೆ ಅದರ ಮೂಲ ಎಂದು ಹೇಳುವುದು ಬಲು ಕಷ್ಟ. ಹೆಣ್ಣಿನ ಬಾಳಿನಲ್ಲಿ ತ್ಯಾಗವೇ ಧ್ರುವಶ್ರುತಿ. ತ್ಯಾಗವನ್ನು ಕಂಡು ಅದು ಸಹಜವಾಗಿಯೇ ಮಿಡಿಯುತ್ತದೆ. ಧರ್ಮವು ಹೆಂಗುಸರ ಗುತ್ತಿಗೆ ಎಂದು ಹೇಳುವುದುಂಟು. ಅದೂ ನಿಜ ಇರಬಹುದು. ಪಾಂಡಿತ್ಯಕ್ಕೆ ಜ್ಞಾನಕ್ಕೆ ದೂರವಾಗಿ ಕೇವಲ ಬಾಳ ತೀರ್ಥದಲ್ಲೇ ಮೀಯುವ ಜನ ಹೆಂಗುಸರು. ಆದುದರಿಂದ ಪವಿತ್ರಜೀವನದ ಪ್ರಭಾವ ಅವರನ್ನು ಎಳೆಯುತ್ತದೆಯೊ ಏನೋ. ಅಂತು, ಅವರಿಗೆ 'ಉತ್ತಮರ ಸಂಗವದು ತೀರ್ಥ', 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ.'

ಸೇವಾಗ್ರಾಮಕ್ಕೆ ಮೇಲಿಂದ ಮೇಲೆ ಯಾತ್ರಾರ್ಥಿಗಳಾಗಿ ಬರುವ ವಿಲಾಯತಿಯ ಹೆಂಗುಸರು ಪಡಬೇಕಾದ ಕಷ್ಟ ಅವರಿಗೇ ಗೊತ್ತು. ಇಂದ್ರಲೋಕದಂಥ ವಿಲಾಯತಿ ಎಲ್ಲಿ! ಆಶ್ರಮದ ಕಠಿನ ಜೀವನ ಎಲ್ಲಿ! ಆದರೂ ಸಂತೋಷದಿಂದ ಅವರು ತಮ್ಮ ಯಾತ್ರೆ ಮಾಡುತ್ತಾರೆ. ಗಾಂಧೀಜೀ ರೋಮ್ ನಗರಕ್ಕೆ ಹೋಗಿದ್ದರಲ್ಲ. ಆಗ ಜನಸಂದಣಿಯಿಂದ ದೂರವಾಗಿ ಯಾವುದೋ ಒಂದು ಮೂಲೆಯಲ್ಲಿ ಗುಡಿಸಲು ಒಂದರಲ್ಲಿ ಏಕಾಂತವಾಗಿ ವಸತಿಮಾಡಿದ್ದರು. ಯಾರನ್ನೂ ನೋಡುವ ಗದ್ದಲ ಬೇಕಾಗಿರಲಿಲ್ಲ. ಒಂದು ದಿನ ಬೆಳಗ್ಗೆ ಯಾರೋ ಒಬ್ಬ ಸುರಸುಂದರಿ ಆ ಗುಡಿಸಿಲನ್ನು ಹುಡುಕಿಕೊಂಡು ನಡೆದುಬಂದು ಗಾಂಧೀಜಿಯೊಡನೆ ಏಕಾಂತದಲ್ಲಿ ಮಾತಾಡಬಯಸಿದಳು. ಆಕೆ ಮತ್ತಾರೂ ಅಲ್ಲ. ಇಟಲಿ ದೇಶದ ದೊರೆಯ ಕಿರಿಯ ಮಗಳು ರಾಜಕುಮಾರಿ ಮೇರಿಯಾ.

'ಕಂಬನಿ'ಯಿಂದ ಕನ್ನಡ ನಾಡನ್ನು ತೋಯಿಸಿಹೋದ ಕೊಡಗಿನ ಗೌರಮ್ಮನ ಹೆಸರು ಎಲ್ಲರಿಗೂ ಗೊತ್ತಿರಬೇಕು. ಆಕೆ ಗಾಂಧೀಜಿಯನ್ನು ಒಮ್ಮೆ ಗೆದ್ದಳು. ಆಕೆಯ ಹಟಮಾರಿತನಕ್ಕೆ ಬಾಪೂ ಸೋತುಹೋದರು. ಅದು ನಡೆದುದು ಹೀಗೆ.

ಒಂದು ದಿನ ಸಂಜೆಗೆ ಗಾಂಧೀಜೀ ಗುಂಡಗುಟ್ಟಿಯಲ್ಲಿ ತಂಗಿದ್ದರು. ಅದು ಬಹಳ ರಮಣೀಯವಾದ ಪ್ರದೇಶ. ಅವರು ಇಳಿದ ಮನೆಗೆ ನೆರೆಯದೇ ಗೌರಮ್ಮನ ಮನೆ. ಗಾಂಧೀಜಿಯನ್ನು ತಮ್ಮ ಮನೆಗೆ ಕರೆದು ತರಬೇಕೆಂದು ಆಕೆಯ ಆಸೆ. ಆ ಊರಿನ ಸ್ವಾಗತಮಂಡಲಿಯವರು ಅದಕ್ಕೆ ಗಮನ ಕೊಡಲಿಲ್ಲ. ಈಕೆಗೆ ತುಂಬ ನೋವಾಯಿತು. ಅನ್ನ ನೀರೇ ಮುಟ್ಟಲಿಲ್ಲ. ಬೆಳಗಿನಿಂದ ಉಪವಾಸ. ಈ ಸುದ್ದಿ ಹೇಗೋ ಗಾಂಧೀಜಿಗೆ ತಿಳಿಯಿತು. ಗೌರಮ್ಮ ಅವರು ಇದ್ದಲ್ಲಿಗೆ ಬಂದಳು. ಬಂದವಳೇ ಅಳ ತೊಡಗಿದಳು. ಕುತ್ತಿಗೆ ಬಿಗಿದುಬಂತು. ಮಾತೇ ಆಡಲಾಗಲಿಲ್ಲ.

'ಉಪವಾಸ ಏಕಮ್ಮ ತಾಯಿ' ಎಂದರು ಬಾಪು.

'ನೀವು ನಮ್ಮ ಮನೆಗೆ ಬರಲಿ ಅಂತ.' ದುಃಖದಿಂದ ಕೊರಳು ಉಬ್ಬಿ ಬಂದಿತ್ತು. 'ನಿಮಗಾಗಿ ಕೆಲವು ಒಡವೆ ತೆಗೆದಿಟ್ಟಿದೀನಿ.'

'ಬಹಳ ಚಲೋದು. ಆದರೆ ಮೊದಲು ನಿನ್ನ ಉಪವಾಸ ಮುಗಿಸಬೇಕು.'

'ನೀವು ಬರುತ್ತೀನಿ ಅಂತ ಮಾತುಕೊಟ್ಟರೆ—'

'ಮಾತು ಕೇಳಬೇಡ ತಂಗೀ. ತೆಗೆದುಕೋ. ಈ ಕಿತ್ತಳೆಹಣ್ಣು ತಿನ್ನು ಮೊದಲು. ಹಾಗೆಲ್ಲ ವ್ಯಾಪಾರ ಮಾಡುತ್ತಾರೆಯೆ? ನನ್ನಮೇಲೆ ನಂಬಿಗೆ ಇರಲಿ. ನಿನ್ನ ಪ್ರೇಮದ ದುರ್ವಾರಶಕ್ತಿಯಲ್ಲಿ ನಿನಗೆ ನಂಬಿಗೆ ಇರಲಿ.'

ಅಲ್ಲಿಗೂ ಆಕೆ ಹಣ್ಣು ಮುಟ್ಟಲಿಲ್ಲ. ಮಾತು ಆಗಲೇ ಕೊಟ್ಟು ಆಯಿತು ಎಂದು ಆಕೆಗೆ ಅರ್ಥವಾಗಲಿಲ್ಲ. ಮೀರಾಬೇನ್ ಹಣ್ಣು ಸುಲಿದರು. ಗೌರಮ್ಮನಿಗೆ ಇನ್ನೂ ಅನುಮಾನ. 'ನೀವು ಬರುತೀರಾ ಹಾಗಾದರೆ' ಎಂದಳು.

'ಬರುತ್ತಾರೆ ತಗೋ ತಾಯಿ' ಮೀರಾಬೇನ್ ಹೇಳಿದರು. ನಗುತ್ತ

ಗೌರಮ್ಮ ಹಣ್ಣು ತಿಂದಳು. ಅಲ್ಲಿಗೇ ಗಾಂಧೀಜೀ ಬಿಟ್ಟಾರೆ. ಕೊಟ್ಟ ಆಭರಣ ಮತ್ತೆ ಇಡಬಾರದು ಎಂದು ನಿಯಮ ಮಾಡಿಸರು. ಅದಕ್ಕೆ ಆಕೆ ಒಪ್ಪಿದಳು. ಗೌರಮ್ಮನಿಗೆ ಆಗ ಇಪ್ಪತ್ತೊಂದು ವರ್ಷ. ಮದುವೆ ಯಾಗಿತ್ತು. ಆಕೆಯ ಗಂಡ ಗೋಪಾಲಕೃಷ್ಣಯ್ಯನೂ ಜೊತೆಯಲ್ಲಿ ಇದ್ದರು. ಆತನನ್ನು ಕೇಳಿದರು ಗಾಂಧೀಜೀ: 'ಒಡವೆ ಕೊಡಬೇಕೆಂದು ಈಕೆಗೆ ಯಾರು ಹೇಳಿದರು ?'

'ಯಾರೂ ಇಲ್ಲ. ಆಕೆಯದೇ ಇಚ್ಛೆ. ನಾನೂ ಒಪ್ಪಿಗೆ ಕೊಟ್ಟೆ.

ಗಾಂಧೀಜಿಯ ದರ್ಶನಕ್ಕಾಗಿ ಆಸೆಪಡದವರು ಯಾರು? ಸಾವಿರಾರು ಮೈಲು ದೂರದಿಂದ ಜನ ಬರುತ್ತಾರೆ. ಕೆಲವರು ಕೇವಲ ದರ್ಶನಕ್ಕಾಗಿಯೇ ಬರುತ್ತಾರೆ. ಅವರು ಮಾತು ಕೂಡ ಆಡುವುದಿಲ್ಲ. ಒಂದು ಸಲ ಹಣ್ಣುಹಣ್ಣು ಮುದುಕಿ ಒಬ್ಬಾಕೆ ಅವರ ದರ್ಶನ ಮಾಡಿಕೊಂಡಳು. ಆಕೆ ಗೌರಮ್ಮನ ಹಾಗೆ ಹಟವೂ ಹಿಡಿಯಲಿಲ್ಲ; ಒಡವೆಯೂ ಕೊಡಲಿಲ್ಲ. ಆಕೆಯ ಭಕ್ತಿಯೇ ಆಕೆಗೆ ಆ ಪುಣ್ಯ ಒದಗಿಸಿತು. ಇಲ್ಲದಿದ್ದರೆ ಆ ಸಂದರ್ಭದಲ್ಲಿ ಅದು ಯಾವ ರೀತಿಯಿಂದಲೂ ಸಾಧ್ಯವಿರಲಿಲ್ಲ.

ಸಂಯುಕ್ತಪ್ರಾಂತದಲ್ಲಿ ಗಾಂಧೀಜೀ ಪ್ರವಾಸ ಮಾಡುತ್ತಿದ್ದರು. ಬಿರುಗಾಳಿಯಂತೆ ಗಂಟೆಗೆ ಒಂದು ಹಳ್ಳಿ ದಾಟುತ್ತ ಪ್ರಯಾಣ ನಡೆದಿತ್ತು. ದಾರಿಯಲ್ಲಿ ಒಂದು ಬಯಲು ಬಂತು. ಆಗ ಮೋಟಾರಿನ ವೇಗ ಹೆಚ್ಚಿಸಿದರು. ಕೊಂಚ ದೂರ ಹೋದಮೇಲೆ ಥಟ್ಟನೆ ಟೈರು ಹರಿಯಿತು. ಆಗ ಸಣ್ಣಾಗಿ ಮಳೆ ಹನಿ ಉದುರುತ್ತಿತ್ತು. ಟೈರು ಸರಿಮಾಡಬೇಕಾಗಿದ್ದುದರಿಂದ ಗಾಡಿಯಲ್ಲಿ ಇದ್ದವರೆಲ್ಲ ಇಳಿದರು. ಆಗ ಒಬ್ಬ ಮುಪ್ಪಿನ ಮುದುಕಿ ಕೈಯಲ್ಲಿ ಕೊಡೆ ಹಿಡಿದು, ಕೋಲು ಊರಿಕೊಂಡು ಮೆಲ್ಲಗೆ ಹೆಜ್ಜೆ ಇಡುತ್ತ 'ಮಗು, ನಿಮ್ಮಲ್ಲಿ ಯಾರು ಮಹಾತ್ಮಾ ಗಾಂಧಿ?' ಎಂದು ಕೇಳುತ್ತ ಬಂದಳು. ಯಾರೂ ಉತ್ತರ ಕೊಡಲಿಲ್ಲ. ಆಕೆ ಮತ್ತೆ ಕೇಳಿದಳು. ಆಗ ಗಾಂಧೀಜಿಯೇ ಕೇಳಿದರು: 'ಏಕೆ ತಾಯಿ, ಆತನನ್ನು ಯಾಕೆ ಹುಡುಕುತ್ತೀಯಮ್ಮ ?'

ಆಕೆ ಹೇಳಿದಳು. 'ಅಯ್ಯಾ! ನನಗೆ ಈಗ ನೂರಾನಾಲ್ಕಾಯಿತು.

ಕಣ್ಣು ಮುಂದವಾಗಿವೆ. ನಾನು ಅನೇಕ ತೀರ್ಥಯಾತ್ರೆ ಮಾಡಿದೇನೆ. ಬದರಿಕಾಶ್ರಮಕ್ಕೂ ಹೋಗಿದ್ದೆ. ನನ್ನ ಮನೆಯಲ್ಲೇ ಎರಡು ಗುಡಿ ಕಟ್ಟಿಸಿ ಅವಕ್ಕೆ ಹೊಲಮನೆ ದತ್ತಿಬಿಟ್ಟು ನಡೆಸುತ್ತಿದೇನೆ. ರಾಮ-ಕೃಷ್ಣರ ಅವತಾರವಿದ್ದಂತೆ ಈಗ ಮಹಾತ್ಮಾಗಾಂಧೀ ಅವತಾರ ಆಗಿದೆಯಂತೆ. ಆತನ ದರ್ಶನ ಆಗುವ ತನಕ ನನಗೆ ಸಾವು ಬಾರದಪ್ಪ' ಮಾತಾಡುವಾಗ ಆಕೆಯ ಕಣ್ಣಿನಲ್ಲಿ ಹನಿತುಂಬಿತು. ಇದುರಿಗೆ ನಿಂತಿದ್ದಾತನೇ ಆತ ಎಂಬುದು ಆಕೆಗೆ ಹೊಳೆಯಿತು. ತಾನು ಯಾರ ದರ್ಶನ ಬಯಸಿದಳೋ ಆತನೇ ಆಕೆ ಯೊಡನೆ ಮಾತಾಡುತ್ತಿದ್ದ. ಆಕೆಯ ಆನಂದಕ್ಕೆ ಮೇರೆ ಉಂಟೆ? ಇಂಥ ಹೊತ್ತಿನಲ್ಲಿ ಅಲ್ಲದೆ ಮತ್ತೆ ಯಾವಾಗ ತನ್ನ ಬಾಳಿನ ಮಹಾಸಮಸ್ಯೆ ಬಿಡಿಸಬೇಕು. 'ಸ್ವಾಮಿ, ಈ ಆಸೆ, ಈ ದಾಹವನ್ನು ಶಮನ ಮಾಡುವುದು ಹೇಗೆ?' ಎಂದು ಕೇಳಿದಳು. ಆ ನೂರಾನಾಲ್ಕು ವರ್ಷದ ಮುದುಕಿಯೂ ಈ ಪ್ರಶ್ನೆ ಕೇಳಬೇಕೆ! ಗಾಂಧೀಜೀ ನಕ್ಕರು. 'ಹೌದು ತಾಯಿ. ಸುಖದ ಆಸೆ ಸಾಯದೆ ಕರ್ಮಬಂಧನ ತಪ್ಪದು' ಎಂದು ಆಕೆಯ ಸ್ವಂತಸುದ್ದಿ ವಿಚಾರಿಸಿದರು. ಆಕೆ ಹನ್ನೆರಡನೆ ವಯಸ್ಸಿಗೇ ವಿಧವೆಯಾದಳಂತೆ. ಆಗಿ ನಿಂದಲೂ ನಿಯಮವಾಗಿ ಬಾಳಿದಳು. ಆ ನೇಮ—ಆ ತಪಸ್ಸು ಎಲ್ಲಾ ಹೇಳಿದಳು. ಸದ್ಯ ದಿನಕ್ಕೊಂದು ಸಲ ದರ್ಭೆ ಹುಲ್ಲಿನ ರಸದ ಪಾನಕ ಒಂದು ಲೋಟ ಕುಡಿಯುತ್ತಿದ್ದಳು.

ಆ ದಿನ ಬೆಳಗಿನಿಂದ ಅದೇ ಮರದ ಕೆಳಗೆ ಗಾಂಧೀಜಿಯ ದರ್ಶನ ಕ್ಕಾಗಿಯೆ ಆಕೆ ಕಾದು ನಿಂತಿದ್ದಳು. ಓಡಾಡಲು ಆಕೆಗೆ ಬಲವಿರಲಿಲ್ಲ. ಕೊಡೆ ಹಿಡಿದು ಹಾಗೇ ನಿಂತಿದಾಳೆ. ಗಾಂಧೀಜಿಯ ಮೋಟಾರು ಅಂಬಿನ ವೇಗದಿಂದ ಹೋಗುತ್ತಿತ್ತು. ಟೈರು ಹರಿಯದಿದ್ದರೆ ಗಾಡಿ ನಿಲ್ಲುವ ಸಂಭವವೇ ಇರಲಿಲ್ಲ. ಆ ಮರದ ಅಡಿಯಲ್ಲಿ ಹರಿಯದೆ ಸ್ವಲ್ಪ ದೂರ ದಲ್ಲಿ ಹರಿದಿದ್ದರೂ ಆ ಮುದುಕಿಗೆ ದರ್ಶನ ಆಗುತ್ತಿರಲಿಲ್ಲ. ಹತ್ತೇ ಹೆಜ್ಜೆ ಯಾದರೂ ನಡೆದು ಅಲ್ಲಿಗೆ ಹೋಗಲು ಆಕೆಗೆ ಸಾಧ್ಯವಾಗುತ್ತಿರಲಿಲ್ಲ. ಆಕೆಯ ನಿರ್ಮಲ ಭಾವನೆಯ ಬಲವೇ ಆಕೆಗೆ ಆ ಭಾಗ್ಯ ಕೊಟ್ಟಿತು. ಯಾದೃಶೀ ಭಾವನಾ ಯತ್ರಸಿದ್ಧಿರ್ಭವತಿ ತಾದೃಶೀ—ಅಲ್ಲವೆ!

ಗಾಂಧೀಜೀ ಎಂದರೆ ಹೆಣ್ಣು ಹೃದಯಕ್ಕೆ ದೇವರು ನೀಡಿದ ಮಹಾ ಪ್ರಸಾದವಿದ್ದಂತೆ. ಯಶೋದೆಗೆ ಕೃಷ್ಣನಿದ್ದಂತೆ ಅವರಿಗೆ ಗಾಂಧೀಜೀ ಒಂದು ನಿಧಿ. ಅಂಥ ಅನುಭವ ಒಂದು ಹೆಣ್ಣು ಹೃದಯಕ್ಕೆ ಆಯಿತು. ಗಾಂಧೀಜೀ ಇಂಗ್ಲೆಂಡಿಗೆ ಹೋದಾಗ ಒಬ್ಬ ಜರ್ಮನ್ ತರುಣಿ ಅವ ರನ್ನು ನೋಡಲು ಬಂದಳು. ಆಗ ಬರಹೋಗುವವರ ಗದ್ದಲ. ಭೇಟಿ–ಮಾತುಕತೆಗಾಗಿ ಜನ ಒಂದೇಸಮನೆ ತುಂಬಿದ ಹೊಳೆಯಂತೆ ಬರುತ್ತಿದ್ದರು. ಯಾರೊಡನೆಯೋ ಮಾತು ನಡೆದಿದ್ದಾಗ ಆ ಜರ್ಮನ್ ಯುವತಿ ಆತುರದಿಂದ ಒಳಗೆ ನುಗ್ಗಿಬಂದಳು. ಪರಿಚಯದ ಸಲಿಗೆ ಇದ್ದುದರಿಂದ ಸಂಪ್ರದಾಯದ ಮಾತುಕಥೆ ಯಾವೂ ನಡೆಯಲಿಲ್ಲ. ಆಕೆಯನ್ನು ನೋಡಿ ಗಾಂಧೀ ನೂಲುತ್ತಿದ್ದವರು ಒಂದು ಗಳಿಗೆ ಅದನ್ನು ನಿಲ್ಲಿಸಿ ಕೈ ನೀಡಿದರು. ಆ ಕೈ ಬೆರಳೆಲ್ಲ ಒಣಗಿ ಮೂಳೆಯಾಗಿದ್ದರೂ ಅದರಲ್ಲಿ ಚಪಲತೆ ತುಂಬಿತ್ತು. ಆ ಕೈಯನ್ನು ಆಕೆ ತನ್ನೆರಡು ಕೈಗಳಿಂದಲೂ ಹಿಡಿದುಕೊಂಡಾಗ ಯಾವುದೋ ದಿವ್ಯ ಪದಾರ್ಥವೊಂದನ್ನು ಮುಟ್ಟಿದ ಹಾಗೆ ಆಕೆಯ ಭಾವನೆ.

'ಜರ್ಮನಿಗೆ ಹಿಂದಿರುಗಿ ಪ್ರಯಾಣವೇ' ಗಾಂಧೀಜೀ ಕೇಳಿದರು. ಆಕೆ ಹೌದು ಎನ್ನುವಂತೆ ತಲೆಬಾಗಿದಳು. ಆಕೆಗೆ ಹನಿಗಣ್ಣಾಗಿತ್ತು. ತುಟಿ ಅದುರುತ್ತಿದ್ದವು. ಏನೋ ಒಂದು ಗಾಢಾನುಭವ ಆಕೆಯ ಕುತ್ತಿಗೆ ಬಿಗಿದಿತ್ತು. ಬಾಯಿಂದ ಮಾತು ಹೊರಡುವುದು ತುಂಬಾ ಕಷ್ಟವಾಯಿತು. 'ಗುಡ್ ಬೈ' ಇದೊಂದೇ ಮಾತು ಆಡುವಾಗ ಆಕೆಗೆ ಸಾಕಾಗಿ ಹೋಯಿತು. ಒಂದು ಹೆಜ್ಜೆ ಹಿಂದಿಟ್ಟು, ಆಕಾಶದ ಕಡೆಗೆ ಕೈಚಾಚಿ ಗಾಂಧೀಜಿಯನ್ನೇ ದಿಟ್ಟಿಸಿ ನೋಡುತ್ತ ನಿಂತಳು. ಅಳು ಬಿಕ್ಕಿ ಬಂತು. ಹಾಗೆಯೆ ಹೊರಟುಹೋದಳು.

ಗಾಂಧೀಜೀ ಮಾಡುವ ಎಲ್ಲ ಕೆಲಸಗಳಲ್ಲೂ ರಮಣೀಯವಾದ ಒಂದು ಬಗೆಯ ಆತ್ಮೀಯತೆ ಇದೆ. ಪ್ರತಿಯೊಂದು ಸಂದರ್ಭವೂ ಉತ್ತಮ ಕಾವ್ಯವಸ್ತು ಆಗುತ್ತದೆ. ದಕ್ಷಿಣ ಆಫ್ರಿಕಾದಲ್ಲಿ ಜನರಲ್ ಸ್ಮಟ್ಸ್ ಗಾಂಧೀಜಿಗೆ ಪ್ರತಿಕಕ್ಷಿ; ವಿರೋಧಪಕ್ಷದ ನಾಯಕ. ಅವನೇ ಇವರಿಗೆ ಜೈಲಿನ

ರುಚಿ ಮೊದಲು ತೋರಿಸಿದುದು. ಜೈಲಿನೊಳಗೆ ಕೂತು ಗಾಂಧೀಜೀ ಮಾಡಿದುದೇನು! ತನ್ನ ವಿರೋಧಿಗಾಗಿ ಒಂದು ಜೊತೆ ಕಾಲ್ಮರೆ ಹೊಲಿದರು. ಬಿಡುಗಡೆಯಾಗಿ ಹೊರಗೆ ಬಂದಕೂಡಲೆ ಮೊದಲು ಮಾಡಿದ ಕೆಲಸ ಎಂದರೆ ಆ ಜೊತೆಯನ್ನು ಸ್ಮಟ್ಸ್‌ಗೆ ಕಾಣಿಕೆಯಾಗಿ ಕೊಟ್ಟುದು. ಇಂಥ ರಸಮಯ ಸನ್ನಿವೇಶದಲ್ಲಿ ಬಳುಕದ ಹೃದಯ ಉಂಟೆ? ಹೂವಿಗಿಂತ ಮಿದುವಾದ ಈ ಮಿಡಿತಕ್ಕೆ ಕರಗದ ಕಾಠಿಣ್ಯವೂ ಇದೆಯೇ?

ಈ ಆತ್ಮೀಯತೆಗೆ ವಿನೋದ, ಸಾವಧಾನ, ಸಾನುಭೂತಿಗಳು ಬೆರೆತು ಗಾಂಧೀಜಿಯ ಕೈಯಲ್ಲಿ ಅದೊಂದು ವಿಚಿತ್ರಕಲೆಯೇ ಆಗಿದೆ. ತಮ್ಮ ಬಳಿಗೆ ಬಂದ ಹೆಂಗುಸರಿಗೆ ದೇಶಸೇವೆಯ ದೀಕ್ಷೆ ಕೊಡುವುದರಲ್ಲಿ ಈ ಕಲೆಯನ್ನು ಪೂರಾ ಉಪಯೋಗಮಾಡುತ್ತಾರೆ ಬಾಪು. ಸಕಲಾಭರಣಭೂಷಿತರಾಗಿ ಬಂದವರು ನಿರಾಭರಣ ಸುಂದರಿಯರಾಗಿ ಹಿಂದಿರುಗಿದಾರೆ. ವಿದ್ಯಾವತಿಯರಾಗಿ ರಾಜಕಾರಣ ಚರ್ಚಿಸಲು ಬಂದವರಿಗೆ ಸೂತ್ರದೀಕ್ಷೆ ಕೊಟ್ಟಿದಾರೆ. ಪರದೆಯೇ ಪಾತಿವ್ರತ್ಯ ಎಂದು ತಿಳಿದಿದ್ದವರನ್ನು ಪ್ರಚಾರಕ ವೃತ್ತಿಯ ಪಂಚಾಗ್ನಿ ತಪಸ್ಸಿಗೆ ಎಳೆದಿದಾರೆ. ನಗುನಗುತ್ತಲೇ ಅವರ ನಾಚಿಕೆಯನ್ನು ಕಳೆದು ಸ್ವತಂತ್ರದೃಷ್ಟಿಯ ಧೈರ್ಯವನ್ನು ಕೊಡುತ್ತಾರೆ. ಇಲಿಯನ್ನು ಹುಲಿಯಾಗಿ ಮಾಡುತ್ತಾರೆ. ಹುಲಿಯನ್ನು ಇಲಿ ಮಾಡುತ್ತಾರೆ.

ಒಂದು ಸಲ ಕೆಲವರು ಹೆಂಗುಸರು ಗಾಂಧೀಜಿಯ ಭೇಟಿಗೆ ಬಂದಿದ್ದರು. ಅವರೆಲ್ಲರೂ ಹಣವಂತರ ಮನೆಯವರು. ನಗೆಮಾತು ನಾಲ್ಕು ನಡೆದ ಮೇಲೆ ಅವರಲ್ಲಿ ಹಿರಿಯಳಾಗಿದ್ದಾಕೆ ಖಾದೀ ಉಡುವುದಾಗಿ ಮಾತುಕೊಟ್ಟಳು. ಗಾಂಧೀಜೀ ಕೇಳಿದರು: 'ನಿನಗೆ ಮದುವೆ ಆಗಿದೆಯೇನಮ್ಮ?'

'ಹೂಂ. ಆಗಿದೆ.'

ಪ್ರಶ್ನೆಗೆ ಮೊದಲಾಯಿತು. 'ನಿನ್ನ ಗಂಡ ಖಾದೀ ಹಾಕುತ್ತಾನೆಯೆ?'

'ಇಲ್ಲ.' ಈ ಮಾತು ಹೇಳುವಾಗ ಆಕೆಗೆ ತುಂಬ ನಾಚಿಕೆ; ಕೆನ್ನೆ ಕೆಂಪೇರಿತ್ತು.

'ಹಾಗಾದರೆ ನಿನ್ನಗಂಡ ನಿನ್ನನ್ನು ಖಾದೀ ತೊಡಗೊಡುತ್ತಾನೆಯೋ ಇಲ್ಲವೋ?'

ಇಕ್ಕಟ್ಟಿನ ಪ್ರಶ್ನೆ; ಏನು ಹೇಳಬೇಕು. 'ಅವರು ಹೇಳಿದಹಾಗೆ ಮಾಡುತ್ತೇನೆ.' ಗರತಿಯಾದವಳ ಉತ್ತರ ಅದು.

ಆದರೆ ಗಾಂಧೀಜೀ ಬಿಡಬೇಕಲ್ಲ. 'ಹಾಗಾದರೆ ನೀನು ಕೊಟ್ಟ ಮಾತಿನ ಗತಿಯೇನಮ್ಮ?' ನಗುತ್ತ ಕೇಳಿದರು.

ಆಕೆಗೆ ದಿಕ್ಕುತೋರದೆ ಕಕ್ಕಾಬಿಕ್ಕಿ ಆದಳು.

ಬಾಪುವೇ ದಾರಿತೆಗೆದರು. ಆಕೆಗೆ ಹೇಳಿಕೊಟ್ಟರು: 'ನಿನ್ನ ಗಂಡನನ್ನು ಒಪ್ಪಿಸಲಾರೆಯೇನು ನೀನು?'

ಅಂಜುತ್ತ ಅಂಜುತ್ತ ಆಕೆ ನುಡಿದಳು, 'ಹೂಂ.'

'ಒಂದು ವೇಳೆ ಆತ ಖಾದೀ ತೊಡಬೇಡ ಎಂದರೆ ಆತನ ಮಾತು ಮೀರುತ್ತೀಯೆ ಅಲ್ಲವೆ?'

ಉತ್ತರವಿಲ್ಲ; ಮೌನ.

ಮತ್ತೆ ಇವರೇ ಮಾತು ಸಾಗಿಸಿದರು. 'ಸೀತಾದೇವಿ ಶ್ರೀರಾಮಚಂದ್ರನ ಮಾತು ಮೀರಿದಾಳೆ; ಗೊತ್ತೇ ತಾಯಿ ನಿನಗೆ.'

ಆಕೆಗೆ ಆ ಕಥೆ ಹೊಳೆಯಲಿಲ್ಲ.

'ಕೇಳು. ಶ್ರೀರಾಮಚಂದ್ರ ಅಡವಿಗೆ ಬರಬೇಡ ಎಂದು ಸೀತೆಗೆ ಹೇಳಿದಾಗ ಆಕೆ ಅವನ ಮಾತು ಕೇಳಿದಳೆ! ಇಲ್ಲ. ಆತನನ್ನು ಹಿಂಬಾಲಿಸುವುದೇ ತನ್ನ ಧರ್ಮ ಎಂದು ಆಕೆಗೆ ಗೊತ್ತು. ಆಕೆಯ ಹಾಗೆ ನೀನೂ ನಿನ್ನ ಗಂಡನಿಗೆ ಪೂಜೆಮಾಡು. ಆದರೆ ನಿನ್ನ ಧರ್ಮಕ್ಕೆ ಆತ ಅಡ್ಡಿಬಂದರೆ ಮರ್ಯಾದೆಯಾಗಿ ಆತನ ಮಾತು ಮೀರಬೇಕು. ತಿಳಿಯಿತೇನಮ್ಮ?'

ಆಕೆಯ ಗಂಡ ಬೇಡ ಎಂದರೂ ಖಾದೀ ತೊಡದೆ ಬಿಡುತ್ತಾಳೆಯೆ ಆಕೆ ಇನ್ನು! ಈಕೆಯನ್ನು ನೋಡಿ ಆತನೂ ತೊಡಬೇಕಷ್ಟೆ.

ಡಾಕ್ಟರ್ ಮೂಡ್ ರಾಯ್ಡನ್ ಒಬ್ಬ ಆಂಗ್ಲವಿದುಷೀಮಣಿ. ಆಕೆಗೊಮ್ಮೆ ಗಾಂಧೀಜಿಯ ಸೌಜನ್ಯ ಅನುಭವಕ್ಕೆ ಬಂತು. ಲಂಡನ್ನಿನಲ್ಲಿ ಒಂದು ದೊಡ್ಡ ಸಭೆ. ಆ ಸಭೆ ಮುಗಿಸಿಕೊಂಡು ಗಾಂಧೀಜೀ ಮತ್ತೊಂದು ಸಭೆಗೆ ಹೋಗಬೇಕಾಗಿತ್ತು. ಇಲ್ಲಿಂದ ಆ ಸಭೆಗೆ ತನ್ನ ಮೋಟಾರಿನಲ್ಲಿ ಕರೆದುಕೊಂಡು ಹೋಗುವುದಾಗಿ ಆಕೆ ಗಾಂಧೀಜಿಗೆ ಹೇಳಿಕೊಂಡಿದ್ದಳು. ಸಭೆ ಮುಗಿದು ಹೊರಗೆ ಬಂದಾಗ ಜನದ ಗದ್ದಲವೋ ಗದ್ದಲ. ಸಾಗರದ ಅಲೆಗಳಂತೆ. ಆಕೆಗೆ ಆ ಗದ್ದಲಲ್ಲಿ ತನ್ನ ಕಾರು ಕಾಣಲಿಲ್ಲ. ಊರಿನ ಮೋಟಾರುಗಳೆಲ್ಲ ಅಲ್ಲೇ ಸುಳಿದಾಡುತ್ತಿದ್ದವು. ಆಕೆಯೇ ಹೇಳಿದಾಳೆ. 'ಲಂಡನ್ನಿನ ಕಾರುಗಳೆಲ್ಲ ತಮ್ಮ ಸಾರಥಿಗೆ ಆ ವರ–ಗಾಂಧೀಜೀ ತಮ್ಮ ಕಾರಿನಲ್ಲಿ ಕೂತುಕೊಳ್ಳುವ ಭಾಗ್ಯ–ಸಿಗಲಿ ಎಂದು ಅಲ್ಲೇ ಸುಳಿದಾಡಿದವು. ಗಾಳಿ ತಂಪಾಗಿತ್ತು. ಸ್ವಲ್ಪ ಮಳೆಯೂ ಬಂದಿತ್ತು. ಗಾಂಧೀಜಿಗೆ ಮೈತುಂಬ ಅರಿವೆಯಿರಲಿಲ್ಲ. ಇಂಥ ಪ್ರಸಂಗದಲ್ಲಿ ಅವರನ್ನು ಕಾಯಿಸಬಾರದು ಎನಿಸಿ ದುಃಖವಾಯಿತು. ನೀವು ಮತ್ತೊಂದು ಕಾರಿನೊಳಗೆ ಹತ್ತಿಬಿಡಿರಿ; ನನ್ನ ಕಾರಿಗಾಗಿ ಕಾಯಬೇಡಿ ಎಂದೆ. ಬೇಡ ಬೇಡ; ನಿನ್ನ ಕಾರಿಗಾಗಿ ಕಾಯುತ್ತೇನೆ ಎಂದರು ಗಾಂಧೀಜೀ. ನನಗಂತು ತಲೆಯ ಮೇಲೆ ಒಂದು ಕಿರೀಟ ಇಟ್ಟಹಾಗೆ ಅನಿಸಿತು.' ಕೃಷ್ಣನ ಅರಮನೆಯ ವೈಭವವನ್ನು ಕಂಡು ಕುಚೇಲ ತಾನು ತಂದಿದ್ದ ಅವಲಕ್ಕಿಯ ಗಂಟು ನಾಚಿಕೆಯಿಂದ ಮರೆಮಾಡಲು ಯತ್ನಿಸಿದನಂತೆ. ಕೃಷ್ಣನ ಚುರುಕುಗಣ್ಣಿಗೆ ಅದು ಬಿತ್ತು. ಕುಚೇಲನ ನಡುಗುವ ಕೈಯಿಂದ ಅದನ್ನು ಕಸಿದುಕೊಂಡು ಗಬಗಬ ಆ ಅವಲಕ್ಕಿ ಮುಕ್ಕಿದನಂತೆ. ಆ ದಿನ ಅವನಿಗೆ ದೇವರು ಅನುಗ್ರಹ ಕಿರೀಟ ಇಟ್ಟಾಗ ಇಂಥದೇ ಆನಂದ ಅನುಭವವಾಗಿರಬೇಕು.

ಇಂಥ ಮಹಾಪುರುಷನ ಸಾನ್ನಿಧ್ಯದಲ್ಲಿ ಕಲ್ಲೂ ಕೊನರೀತು; ಮಣ್ಣೂ ಉಸಿರಾಡೀತು. ದಧೀಚಿಯ ಮೂಳೆಗಳಿಂದ ದೇವತೆಗಳು ವಜ್ರಾಯುಧ ಮಾಡಿದರಂತೆ. ಗಾಂಧೀಜೀ ಮಾನವ ಹೃದಯಗಳನ್ನೇ ವಜ್ರಾಯುಧ ಮಾಡಿದರು. ಇಲ್ಲದಿದ್ದರೆ ಬಾರ್ಡೋಲಿಯ ಸತ್ಯಾಗ್ರಹದಲ್ಲಿ ಗಂಡು–ಹೆಣ್ಣು ತೋರಿಸಿದ ಪರಾಕ್ರಮ ಸಾಧ್ಯವಾಗುತ್ತಿತ್ತೆ?

ಪಾತಿಗೆ ತಪ್ಪುವುದಕ್ಕಿಂತ ಜೈಲಿಗೆ ಹೋಗುವುದೇ ಲೇಸು ಎಂಬುದು ಜನರ ನೀತಿ ಆಯಿತು. ದಿನವೂ ನೂರಾರು ಜನ ಯುವಕರು ಕಬ್ಬಿಣದ ಕಂಕಣಕ್ಕಾಗಿ ಕಾದಿರುತ್ತಿದ್ದರು. ಯಾರೂ ಹಿಂಜರಿವಹಾಗಿರಲಿಲ್ಲ. ಅಂಜು ಗುಳಿ ಎಂದು ಹೆಸರಾದ ಹಿಂದೂ ಹೆಂಗಸರು ಕೂಡ ಕಲಿತನದಿಂದ ಮಾತಾಡಹತ್ತಿದರು. 'ಮಾತಿಗೆ ತಪ್ಪಿದವರುಂಟೆ? ನೀವು ಹೋಗಿಬನ್ನಿ. ನಾವೆಲ್ಲ ಮನೆ ಮಕ್ಕಳು ನೋಡಿಕೊಳ್ಳುತ್ತೇವೆ' ಎನ್ನತೊಡಗಿದರು. 'ಸಮಯಬಂದರೆ ನಾವೂ ನಿಮ್ಮ ಜೊತೆಗೇ' ಎಂದರು. ಆದೂ ಆಯಿತು.

ಕನ್ಹಯ್ಯಾಲಾಲ ಮುನಷಿ ಗಾಂಧೀಗೆ ಶರಣು ಹೋಗಿ ಜೈಲಿಗೆ ನಡೆದರು. ಅವರು ಸಾಹಿತಿಗಳು, ಕಲಾವಿದರು. ರಂಗಮಹಲು ಜೀವನದ ಜಾತಿ. ಅವರ ತಾಯಿ ತುಂಬಾ ಮುದುಕಿ. ನಡೆಯಲಾಗದಿದ್ದರೂ ಆಕೆ ಒಂದು ದಿನ ಗಾಂಧೀಜಿಯ ಪ್ರಾರ್ಥನೆಗೆ ಬಂದಳು. ಎಲ್ಲಾ ಮುಗಿದ ಮೇಲೆ ಗಾಂಧೀಜೀ ಕೇಳಿದರು: 'ನಿನ್ನಮಗ ಮತ್ತೊಂದುಸಲ ಜೈಲಿಗೆ ಹೋಗಬೇಕಾಗಿದೆ. ನೀನೇನು ಹೇಳುತ್ತೀ ಮತ್ತೆ?' ಆ ಮುದುಕಿ ನಿಶ್ಚಿಂತೆ ಯಿಂದ ಹೇಳಿದಳು. 'ಮಗನನ್ನು ನಿಮ್ಮ ಕೈಯಲ್ಲಿ ಇಟ್ಟಿದ್ದೇನೆ. ನಿಮಗೆ ಬೇಕಾದದ್ದು ಮಾಡಿರಿ.'

ಉಪ್ಪಿನ ಸತ್ಯಾಗ್ರಹದಲ್ಲಿ ಹೆಂಗುಸರು ತೋರಿದ ಧೈರ್ಯ ಶೌರ್ಯ ಇತಿಹಾಸ ಯೋಗ್ಯವಾದವು. ಯಾರಾದರೂ ಉಪ್ಪಿನ ಸತ್ಯಾಗ್ರಹದಲ್ಲಿ ನಡೆದ ಪ್ರಸಂಗಗಳನ್ನೆಲ್ಲ ಪೋಣಿಸಿ ಬರೆದರೆ ಆಗ ತಿಳಿದೀತು. ಗಾಂಧೀ ಜಿಯ ಕೈವಾಡದಿಂದ ಹಿಂದೀ ಹೆಂಗುಸರು ಎಷ್ಟು ಧೀರೆಯರಾಗಿ ಕಾದಿದ ರೆಂಬುದು. ಸರೋಜಿನೀದೇವೀ ಸಿಂಹಿಣಿಯಂತೆ ಸೇನೆಯನ್ನು ನಡೆಸಿದಳು. ಕನ್ನಡಿಗರ ಕಣ್ಣೊಂಬೆ ಕಮಲಾದೇವಿ ಕಲಿಯಂತೆ ನುಗ್ಗಿದಳು. ಗಂಡುಸರು ಹಿಂಜರಿದಕಡೆ ಹೆಣ್ಣು ಮುಂದೆ ನುಗ್ಗಿತು. ಗುಜರಾತಿನ ಹೆಂಗಸರೆಲ್ಲ ಸೇರಿ ವೈಸರಾಯ್‌ಗೆ ಒಂದು ಕಾಗದ ಕಳಿಸಿದರು. ಅದು ಕಾಗದವಲ್ಲ. ಕದನದ ಆಹ್ವಾನ.

ಭರತಖಂಡದಲ್ಲಿ ಚಳುವಳಿಯ ಬೆಂಕಿ ಉರಿಯುತ್ತಿರುವಾಗ ನಾವು ತಟಸ್ಥರಾಗಿರಕೂಡದು. ಉಪ್ಪಿನ ಸತ್ಯಾಗ್ರಹದ ತತ್ವವನ್ನು ನಾವೂ ಒಪ್ಪು ತ್ತೇವೆ. ನಮ್ಮ ಹಳ್ಳಿಗಳಲ್ಲಾಗಲೇ ಹೆಂಗುಸರು ಉಪ್ಪುಮಾಡುತ್ತಿದಾರೆ.

ನಾವು ಬೇರೆ ಕೆಲಸವನ್ನು ಹುಡುಕಬೇಕು. ವಿದೇಶೀ ವಸ್ತ್ರ ಬಹಿಷ್ಕಾರ, ಮದ್ಯಪಾನ–ನಿರೋಧ ಇವೆರಡನ್ನೂ ನಾವು ಜರುಗಿಸಬೇಕೆಂದು ಗಾಂಧೀಜೀ ಹೇಳಿದಾರೆ. ಅದು ನಮಗೂ ಒಪ್ಪಿಗೆ. ನಾವು ಆ ಚಳುವಳಿ ಆರಂಭಿಸುತ್ತೇವೆ. ಪರದೇಶೀ ಬಟ್ಟೆ ನಮ್ಮ ದೇಶಕ್ಕೆ ಬಾರದಂತೆ ತಡೆಯುವುದು, ಮದ್ಯಪಾನವನ್ನು ನಿಲ್ಲಿಸುವುದು ನಿಮ್ಮ ಧರ್ಮ ಎಂದು ಮೊದಲು ನಿಮಗೆ ತಿಳಿಸುವುದು ಚೆನ್ನು. ತಿಳಿಸಿದೇವೆ.'

ಸರೋಜಿನಿ ಸಿರಿವಂತಿಕೆಯಲ್ಲಿ ಬಾಳು ಕಳೆದು ಮುಪ್ಪಿಗೆ ಮುಟ್ಟಿದ ಹೆಂಗುಸು. ಮುಂಬಯಿಯ ತಾಜಮಹಾಲಿನ ಹೋಟೆಲು ಆಕೆಯ ಮನೆ. ಆಕೆ ಕಾಲಿಟ್ಟರೆ ಹೂವಿನ ಹಾಸುಗೆಯ ಮೇಲೆ; ಮಲಗಿದರೆ ಹಂಸ ತೂಲಿಕಾ ತಲ್ಪ. ಇಂಥ ಜೀವ ಧರಸನ ಮುತ್ತಿಗೆಯಲ್ಲಿ ಮುಂದಾಳಾಗಿ ಹೋದಳು. ಯಾರೋ ಕೇಳಿದರು : ನಿಮ್ಮ ಅರಸು ಜೀವಕ್ಕೆ ಈ ಕಲ್ಲು ಮಣ್ಣು, ಬಿಸಿಲು ಬೆಂಕಿ ಹೇಗೆ ಒಗ್ಗೀತು? 'ಮನಸು ಮಾಡಿದರೆ ಎಲ್ಲಾ ಒಗ್ಗುತ್ತದೆ. ನನಗೆ ಯಾವ ತರದ ತೊಂದರೆಯೂ ಕಾಣಲಿಲ್ಲ' ಎಂದರು ಆಕೆ. ಈ ಮಾತು ಆಡಿದುದು ಆಕೆಯೇ ಆದರೂ ಆಡಿಸಿದುದು ಗಾಂಧೀಜಿ.

ಹೆಣ್ಣು ಎಂಬ ಜೀವ ಎಲ್ಲ ಧೀರವಾಗಿ ನಡೆಯುವುದಿಲ್ಲ. ಅಲ್ಲಲ್ಲಿ ಒಂದು ಹೆಜ್ಜೆ ತಪ್ಪುತ್ತದೆ. ಒಂದು ಅಪಶ್ರುತಿ ಕೇಳಿಸುತ್ತದೆ. ಒಬ್ಬ ಅನುಭವಶಾಲಿಯಾದ ದೇಶಸೇವಕ ಒಮ್ಮೆ ಅರಿಯದ ಹುಡುಗಿಯೊಬ್ಬಳನ್ನು ಪಾಪಕ್ಕೆ ಸೆಳೆದ. ಆಕೆಗೆ ಇವನು ಪಾಠಹೇಳಿಕೊಡುತ್ತಿದ್ದ. ಇಬ್ಬರಿಗೂ ಮನಸ್ಸು ಕೂಡಿತು. ಮೈ ಕೂಡುವುದು ತಡವಾದೀತೇ? ಆದರೆ ಆಕೆ ಮದುವೆ ಆಗದ ಕನ್ಯೆ. ಈತ ಗೃಹಸ್ಥ. ಈ ಸಂಬಂಧದಿಂದ ಆ ಹುಡುಗಿ ಬಸಿರಾದಳು. ಏನು ಮಾಡಬೇಕು ? ಧರ್ಮಸಂಕಟ ಬಂತು. ಆ ಗಂಡುಸು ಗಾಂಧೀಜಿಯ ಮುಂದೆ ಎಲ್ಲವನ್ನೂ ಒಪ್ಪಿಕೊಂಡ. ಕಣ್ಣೀರು ಸುರಿಸಿದ. 'ಆ ಸಂಬಂಧವನ್ನು ಹೇಗೆ ಮುರಿಯಲಿ; ಅದು ಒಲವಿನ ಗಂಟು. ಕತ್ತಿ ಹಿಡಿದು ಆ ಗಂಟು ಕತ್ತರಿಸಲೇ? ಅಹಿಂಸೆಯ ಹಾದಿಯನ್ನೇ ತುಳಿಯಬೇಕು' ಎಂದರು. ಆ ಹುಡುಗಿಗೆ ಬಂದಿದ್ದ ವಿಪತ್ತು ಮರ್ಯಾದೆಯಿಂದ ದಾಟಲು ಎಲ್ಲ ಏರ್ಪಾಡನ್ನೂ ಮಾಡಿದರು. ಪಾಪಕಾರಣನಾದ ಆ

ಗಂಡುಸಿಗೆ ಎಲ್ಲ ವ್ಯವಹಾರವನ್ನೂ ಬಿಡಿಸಿ, ಆತನನ್ನು ತನ್ನ ಬಳಿಯಲ್ಲೇ ಇಟ್ಟುಕೊಂಡು ಮೂಕಸೇವೆಯ ತಪಸ್ಸಿನಿಂದ ಆ ಅವಮಾನ ಕಳೆದು ಕೊಳ್ಳುವಂತೆ ಹೇಳಿದರು.

ಪಾತಿತ್ಯದ ಉದಾಹರಣೆ ಅಲ್ಲೊಂದು ಇಲ್ಲೊಂದು ಸಿಕ್ಕರೆ ಅದನ್ನು ಸೈರಿಸಬಹುದು. ಈ ಪಾತಿತ್ಯವನ್ನೆ ಒಂದು ಕಸಬಾಗಿ ಮಾಡಿ ಹೆಣ್ಣನ್ನು ಶಾಶ್ವತವಾಗಿ ಕಾಮದ ಗೊಂಬೆಯಾಗಿ ಮಾಡಿದ ವೇಶ್ಯಾವೃತ್ತಿಯನ್ನು ಹೇಗೆ ಸೈರಿಸಬೇಕು. ಸೂಳೆ ಮುಪ್ಪಾಗಿ ಜೋಗಿತಿ ಆದಳು ಎಂಬ ವ್ಯಂಗ್ಯ ವಿನೋದವಾಗಲಿ, ಸೂಳೆ ನಿತ್ಯಸುಮಂಗಲೆ ಎಂಬ ಮೂಢೋತ್ಸಾಹ ವಾಗಲಿ ಗಾಂಧೀಜಿಗೆ ಸರಿಬಾರದು. ವೇಶ್ಯಾವೃತ್ತಿ ಕಾಮುಕ ಸಮಾಜವು ಒಡ್ಡಿದ ಕುತಂತ್ರ. ಅದರಲ್ಲಿ ಬಿದ್ದ ಹೆಣ್ಣಿಗೆ ಸಮಾಜದ ಉತ್ಸವ ಪರಿಷೆ ಗಳಲ್ಲಿ ಕೊಡುವ ಗೌರವ ಆ ತಂತ್ರದ ಮುಂಕುಬೂದಿ. ಗಾಂಧೀಜಿಗೆ ಪತಿತರಾದ ವೇಶ್ಯೆಯರನ್ನು ನೋಡಿದಾಗ ತಮ್ಮ ಅಕ್ಕತಂಗಿಯರ ನೆನ ಪಾಗುತ್ತದೆ. ಪತಿತ ಭಗಿನಿಯರು ಎಂದು ಅವರು ಇವರನ್ನು ಕರೆದಾಗ ಅದು ಅಲಂಕಾರದ ನುಡಿಯಲ್ಲ. ಬಿರಿದ ಎದೆಯಿಂದ ಒಸರಿ ಬಂದ ಆರ್ದ್ರ ವಾಣಿ. ವೇಶ್ಯೆ ಪತಿತಳಲ್ಲ; ಆಕೆ 'ನಮ್ಮ ಪಾತಿತ್ಯದ ಕುರುಹು. ನಮ್ಮ ಕೀಳುತನವನ್ನು ನೆನಪು ಕೊಡುವ ವಸ್ತು.' ಗಾಂಧೀಜೀ ಅಂಥವರಲ್ಲೂ ದೊಡ್ಡ ಪರಿವರ್ತನೆ ಮಾಡಿದ್ದಾರೆ. ಎಷ್ಟೋ ಜನ ತಮ್ಮ ವೃತ್ತಿಯನ್ನು ಬಿಟ್ಟಿದಾರೆ. ರಾಟೆಯನ್ನು ಶರಣುಹೋಗಿ ಗರತಿಯರಾಗಿದಾರೆ.

ಗಾಂಧೀಜಿಯ ಪ್ರಭಾವವೇ ಅಂಥದು. ಅದರ ಇದಿರು ಕರಗದ ತಾಯಿ ಉಂಟೆ? ನಂದೀಬೆಟ್ಟದಲ್ಲಿದ್ದಾಗ ಬೆಂಗಳೂರಿಂದ ಬಂದ ಹೆಂಗಸರು ಯಾರು ಹಿಂದಿರುಗಬೇಕಾದರೆ ಖಾದಿ ಉಡದೆ ಹೋದವರು? ಒಬ್ಬ ಮುಗುದೆ ಮುತ್ತೈದೆ ಬಂದರು. ಬಾಳೆಯ ಹಣ್ಣು, ದ್ರಾಕ್ಷಿ ತಂದು ಗಾಂಧೀಜಿಯ ಮುಂದಿಟ್ಟು ನಿಂತುಕೊಂಡರು. ಯಾರೋ ಹೇಳಿದರು: 'ಈಕೆಗೆ ಮಕ್ಕಳಿಲ್ಲ. ಮಕ್ಕಳು ಬೇಕು ಎಂದು ತುಂಬ ಆಸೆಯಿದೆ. ಅದಕ್ಕೆ ನಿಮ್ಮ ಆಶೀರ್ವಾದ ಬೇಕು ಎಂದು ಕೋರಿದಾಳೆ.' ಇದೇನು ವರ ಕೊಡುವ ಸಂಜೀವರಾಯನೆಂದು ಈಕೆ ತಿಳಿದಳೋ ಗಾಂಧೀಜಿಯನ್ನೂ

ಎಂದು ಅಲ್ಲಿದ್ದವರಿಗೆ ಆಶ್ಚರ್ಯವೂ ಜಿಗುಪ್ಸೆಯೂ ಆಗಿರಬೇಕು. ಗಾಂಧೀಜಿ ಸೂಚಿಸಿದರು. ಮೈಸೂರಿನ ಮಕ್ಕಳಲ್ಲಿ ಯಾರನ್ನಾದರೂ ದತ್ತು ತೆಗೆದು ಕೊಳ್ಳಲಿ ಅಂತ. ಆಕೆ ಮುಗುಳು ನಗೆ ನಕ್ಕಳು. ಗಾಂಧೀಜೀ ಬಿಡಲಿಲ್ಲ. 'ನಾಡಿನಲ್ಲಿ ಎಷ್ಟು ಜನ ಮಕ್ಕಳಿಲ್ಲ! ಅವರಲ್ಲಿ ಹಸಿದವನಿಗೆ ಅನ್ನ ನೀಡಲಿ, ಬೆತ್ತಲೆ ನಡುಗುವವನಿಗೆ ಬಟ್ಟೆ ಕೊಡಲಿ, ಆಶ್ರಯ ಬೇಕಾದವನಿಗೆ ಆಶ್ರಯ ನೀಡಲಿ. ಹಾಗೆ ಮಾಡಿದರೆ ಇಡೀ ಮೈಸೂರಿಗೆ ಆಕೆ ಸುಖವಾದ ತಾಯಿ ಆದಾಳು.' ಆಕೆಯ ಮಾತು ಕನ್ನಡ. ಇವರ ಮಾತು ಇಂಗ್ಲೀಷು. ಆದರೂ ಇವರು ಈ ಮಾತು ಆಡುವಾಗ ಆ ಕಣ್ಣಲ್ಲಿ ಬೆಳಗಿದ ಕಾಂತಿ ಆಕೆಗೆ ಅರ್ಥವಾಯಿತು. ಕನ್ನಡದಲ್ಲಿ ಇವರ ಮಾತು ಹೇಳಿದಾಗ ತಲೆ ಯಲ್ಲಾಡಿಸಿದಳು. 'ಆಕೆಗೆ ಸಮಾಧಾನವೇ ಕೇಳಿ' ಎಂದರು ಗಾಂಧೀಜಿ. ಸಮಾಧಾನ ಸೂಸುವ ಕಣ್ಣಿಂದ ಗಾಂಧೀಜಿಯನ್ನು ನೋಡಿ ತಲೆಬಾಗಿ ಆಕೆ ಹೊರಟು ಹೋದಳು.

ಅದೇ ದಿನ ಬೆಂಗಳೂರಿಂದ ಎರಡು ಗುಂಪು ಹೆಂಗಸರು ಬಂದಿದ್ದರು. ಒಂದು ತಮಿಳು ಮಾತಾಡುವ ಜನ. ಇನ್ನೊಂದು ಕನ್ನಡ. ಕನ್ನಡದ ಕೃಷ್ಣಮ್ಮನ ಗಂಡ ಗಾಂಧೀಜೀ ನೋಡಲೆಂದು ತಮ್ಮದು ಒಂದು ಯೋಜನೆಯ ಪ್ರತಿ ಬಿಟ್ಟು ಹೋಗಿದ್ದರು. ಅದನ್ನು ತಿರುಗಿ ಒಯ್ಯಲು ಆಕೆ ಬಂದಿದ್ದರು. ಅದರಲ್ಲಿ ಯಾವುದೋ ನಾಲ್ಕು ಸಾಲನ್ನು ಗಾಂಧೀಜೀ ಹಿಂದೀ ಮಾಡಿಕೊಡಬೇಕೆಂದು ಆತನ ಆಸೆ. ಖಾದೀ ಸೀರೆ ಉಟ್ಟು ಬಾರದೆ ಪುಸ್ತಕ ಕೊಡುವುದಿಲ್ಲ ಎಂದರು ಗಾಂಧೀಜೀ. ಒಳ್ಳೇ ಪೀಕ ಲಾಟಕ್ಕೆ ಬಂತು. ಆಕೆಯ ಜೊತೆಯಲ್ಲಿ ಇನ್ನೊಂದು ಹುಡುಗಿಯೂ ಇತ್ತು. ಇಬ್ಬರೂ ಯೋಚಿಸತೊಡಗಿದರು. ಇವರ ಹಾಗೆಯೇ ತಮಿಳು ಹೆಂಗುಸರೂ ಯೋಚನೆ ಮಾಡತೊಡಗಿದರು.

'ಹಾಗಾದರೆ ನೋಡಿ. ನಿಮ್ಮಲ್ಲಿ ಒಬ್ಬರನ್ನೊಬ್ಬರು ಸೋಲಿಸಿ ಬಿಡಬೇಕು' ಎಂದರು ಗಾಂಧೀಜೀ.

ಕನ್ನಡದ ಕಂದಮ್ಮ—ಆ ಹುಡುಗಿ—ಜಂಬಕೊಚ್ಚಿದಳು: 'ಈ ತಮಿಳ ರನ್ನು ನಾವು ಸೋಲಿಸಿಬಿಡುತ್ತೇವೆ.'

ಅವರೇಕೆ ಹಿಂದೆಬಿದ್ದಾರು? ಅವರೂ ಇವರನ್ನು ಸೋಲಿಸುವ ಮಾತಾಡಿದರು.

ಗಾಂಧೀಜೀ ಈ ಮೇಲಾಟಕ್ಕೆ ಸಕ್ಕು, 'ಹಾಗಾದರೆ ಕನ್ನಡ–ತಮಿಳು ಹೆಂಗಸರೆಲ್ಲ ಒಳ್ಳೆಯವರು. ಗಂಡುಸರೇ ಕೆಟ್ಟ ಅಲ್ಲವೆ' ಎಂದರು. ಎಲ್ಲರೂ ಸಕ್ಕರು.

ಅಲ್ಲಿಯೆ ಕೆಳಗೆ ಖಾದೀಭಂಡಾರ ಇತ್ತು. ಅಲ್ಲಿ ಖಾದೀ ಸೀರೆ ಕೊಂಡು ಉಟ್ಟು ಬಂದರು ಕೃಷ್ಣಮ್ಮನೂ ಆ ಕಂದಮ್ಮನೂ. ಅಷ್ಟು ಹೊತ್ತಿಗೆ ಯಾರೋ ಕಾಲೇಜು ಶಿಕ್ಷಕರು ಮಾತಾಡುತ್ತಿದ್ದರು. ಕನ್ನಡದ ಈ ಹೆಂಗುಸರನ್ನೂ ಅವರ ಈ ಖಾದೀ ವೇಷವನ್ನೂ ನೋಡಿ ಗಾಂಧೀಜಿಗೆ ಬಹಳ ಹರುಷವಾಯಿತು. ಆ ಶಿಕ್ಷಕರು ತಮಗೆ ಏನಾದರೂ ಒಂದು ಸಂದೇಶ ಕೊಡಬೇಕೆಂದು ಬೇಡಿದಾಗ ಗಾಂಧೀಜೀ ಇವರನ್ನು ತೋರಿಸಿ–'ಇವರೇ ನನ್ನ ಸಂದೇಶ. ನೋಡಿ. ನಿಮ್ಮ ಹುಡುಗರು ಇವರಿಗಿಂತ ಹಿಂದೆ ಬೀಳದಹಾಗಿರಲಿ' ಎಂದರು.

ಒಡನೆಯೆ ಗಾಂಧೀಜೀ ಆ ಹಿಂದೀ ಭಾಷಾಂತರಮಾಡಿ ಆ ಪುಸ್ತಕ ಕೃಷ್ಣಮ್ಮನಿಗೆ ಕೊಟ್ಟು 'ನಿನ್ನ ಹೆಂಡತಿಯ ಸಂಕಲ್ಪಶಕ್ತಿಗೂ ಸಜ್ಜನಿಕೆಗೂ ಈ ಕೆಲಸ ಇಷ್ಟು ಸುಲಭವಾಯಿತು' ಎಂದು ಆಕೆಯ ಗಂಡನಿಗೆ ಕಾಗದ ಬರೆದುಕೊಟ್ಟರು. ಕೃಷ್ಣಮ್ಮನಿಗೆ ಮನಸ್ಸು ಕರಗಿತು. ಎಂದೆಂದಿಗೂ ಖಾದಿಯನ್ನೇ ಉಡುವುದಾಗಿ ಸಂಕಲ್ಪಮಾಡಿದಳು. ಜೊತೆಯಲ್ಲಿದ್ದ ಹುಡುಗಿ ೧೬–೧೭ ವರ್ಷದಾಕೆ. 'ನಿನ್ನನ್ನು ದತ್ತು ತೆಗೆದುಕೊಳ್ಳಲೇ ಅನಿಸುತ್ತದೆ ಮಗು. ನೀನು ಹೋಗಿ ನಿಮ್ಮ ಶಾಲೆಯಲ್ಲಿ ಹುಡುಗಿಯರಿಗೆಲ್ಲ ಖಾದೀ ಉಡಿಸುತ್ತೀಯಾ?' ಎಂದು ಕೇಳಿದರು. ಗಾಂಧೀಜಿಯ ಆಶೀರ್ವಾದ ಇದ್ದರೆ ಅದೇನು ಮಹಾಕೆಲಸ ಎಂತಲೋ ಏನೋ ಆ ಹುಡುಗಿ ಆಗಲಿ ಎಂದಳು.

ಈ ಸಂದರ್ಭ ಹೀಗಾದರೆ ಬೆಂಗಳೂರು ಮಹಿಳಾ ಸೇವಾ ಸಮಾಜಕ್ಕೆ ಹೋದಾಗ ಇನ್ನೊಂದು ತೆರ. ಅಲ್ಲಿ ೨೨೫ ರೂಪಾಯಿ ನಿಧಿ ಕೊಟ್ಟರು. ಸವಿಯಾದ ಸಂಗೀತ ಹಾಡಿದರು. ಇವರಿಗೆ ಅದರಿಂದ ತೃಪ್ತಿ

ಯಾಗಲಿಲ್ಲ. 'ದರಿದ್ರ ನಾರಾಯಣನಿಗೆ ತೃಪ್ತಿಯೇ ಇಲ್ಲ. ಆ ಗುಡಾಣದಂಥ ಹೊಟ್ಟೆಯಲ್ಲಿ ನಿಮ್ಮ ಹಣಕ್ಕೂ ನಿಮ್ಮ ಒಡವೆಗೂ ಕೂಡ ಸ್ಥಳವಿದೆ. ನೀವು ಇಟ್ಟಿರುವ ಒಡವೆ ನಿಮ್ಮ ಸ್ತ್ರೀ ಧನ. ನಿಮಗೆ ಬೇಕಾದಹಾಗೆ ದಾನ ಮಾಡಬಹುದು. ನಿಮಗೆ ಅಧಿಕಾರವಿದೆ. ಆ ಒಡವೆಯೆಲ್ಲ ನಿಮಗೆ ಅಲಂಕಾರ; ನಿಮ್ಮ ಸದ್ಗುಣ. ನಿಮ್ಮ ಒಡವೆ ದಾನಮಾಡಿದರೆ ಒಡವರ ಸೇವೆ ಮಾಡಿದಹಾಗೆ ಆದೀತು' ಎಂದರು. ಒಡವೆ ಸುರಿದವು.

ಹೆಂಗುಸರ ಮೈಮೇಲಿನ ಒಡವೆ ಗಾಂಧೀಜೀ ಸುಲಿದಹಾಗೆ ಯಾರೂ ಸುಲಿದಿಲ್ಲ. ಗಾಂಧೀಜಿಯ ನುಡಿಯಲ್ಲಿ ತಮ್ಮ ಅಖಂಡತ್ಯಾಗ ಶಕ್ತಿಯನ್ನು ಹೆಣ್ಣುಜೀವಕ್ಕೆ ತೋರಿಸುವ ಮಂತ್ರವಿದೆ. ಅಂಥ ನೋಟ ಬೇರೆ ಬದುಕಿನಲ್ಲಿ ಕಾಣದು. ಕಾಣದವರನ್ನು ಅದನ್ನು ನಂಬುವುದೂ ಕಷ್ಟ.

ಬಡಗಾರ ಎಂಬುದು ಮಲಬಾರಿನಲ್ಲಿ ಒಂದೂರು. ಅಲ್ಲಿ ಒಂದು ಬಹಿರಂಗ ಸಭೆ. ಜನ ಬಹಳ ನೆರೆದಿದ್ದರು. ಗಾಂಧೀಜೀ ತಮ್ಮ ಮೋಡಿ ಹಾಕಿದರು; ಹಾಕಿ, ಒಡವೆ ಕೊಡಿರೆಂದು ಸೆರಗೊಡ್ಡಿ ಬೇಡಿದರು. ಮಳೆ ಸುರಿದಂತಾಯಿತು ಒಂದು ಗಳಿಗೆ. ಕೌಮುದಿ ಹದಿನಾರು ವರುಷದ ಹುಡುಗಿ. ಬಾಪೂಜಿಯ ಬಳಿಗೆ ಬಂದು ತನ್ನ ಕೈಯ ಬಂಗಾರದ ಬಳೆ ತೆಗೆದು ಅವರಿಗೆ ಕೊಟ್ಟು ಅವರ ಹಸ್ತಾಕ್ಷರ ಬೇಡಿದಳು. ಬಾಪೂ ಬರೆಯ ತೊಡಗಿದಾಗ ಕೌಮುದಿಯ ಇನ್ನೊಂದು ಕೈಯೂ ಬರಿದಾಯಿತು. ಆಕೆಯ ಕೈಗೆ ಇದ್ದುದೇ ಒಂದೊಂದು ಬಳೆ. ಬಾಪೂ ನೋಡಿದರು. 'ಒಂದೇ ಸಾಕಮ್ಮ. ಒಂದಕ್ಕೇ ಹಸ್ತಾಕ್ಷರ ಕೊಡುತ್ತೇನೆ ತಾಯಿ' ಎಂದರು. ಅದಕ್ಕೆ ಉತ್ತರವಾಗಿ ತನ್ನ ಕೊರಲಿಗೆ ಕೈ ಹಾಕಿದಳು ಹುಡುಗಿ. ಕೊರಲಲ್ಲಿದ್ದ ಬಂಗಾರದ ಸರ ತೆಗೆಯುವುದು ಸುಲಭವಾಗಿರಲಿಲ್ಲ. ಆಕೆಯ ನಿಡಿದಾದ ಜಡೆಯಿಂದ ಅದನ್ನು ಬಿಡಿಸಿ ತೆಗೆಯಬೇಕಾಗಿತ್ತು. ಆ ಮಲಬಾರೀ ಮಗು ಅಷ್ಟು ಜನಸಂದಣಿಯಲ್ಲಿಯೂ ನಾಚದೆ ಅದನ್ನು ತೆಗೆದೇ ಬಿಟ್ಟಳು. ಜನ ಹರುಷದಲ್ಲಿ ಓಲಾಡಿದರು.

ಬಾಪುಗೆ ಅಚ್ಚರಿಯಾಯಿತು. 'ಅಲ್ಲಮ್ಮ; ನಿಮ್ಮ ತಂದೆ ತಾಯಿಯನ್ನು ಕೇಳಬೇಡವೆ ಮಗು?' ಎಂದರು. ಕೌಮುದಿ ಮರುಮಾತೇ ಆಡಲಿಲ್ಲ.

ಆಕೆಯ ತ್ಯಾಗ ಇನ್ನೂ ಮುಗಿದಿರಲಿಲ್ಲವೋ ಏನೋ! ಕಿವಿಗೆ ಕೈಹಾಕಿದಳು. ಜನಕ್ಕೆ ಇದೆಲ್ಲ ಮಿಂಚಿನಂತೆ ಕಣ್ಣುಕುಕ್ಕಿತು. ಕಲ್ಲುಗೊಂಬೆಗಳಾದರು. ಸಭೆಯಲ್ಲ ಒಂದೇ ಉಸಿರು. ಕೌಮುದಿ ಕಿವಿಯ ಓಲೆಯನ್ನೂ ಕಳಚಿದಳು. ಜನಸ್ತೋಮವೆಲ್ಲ ಒಂದೇಸಲ ಹೋ ಎಂದರು. ಆನಂದದ ಉಬ್ಬರ ತಡೆಯಲಾಗಲಿಲ್ಲ. ಕುಣಿದಾಡಿದರು. ಬಾಪೂಗೆ ಯಾರೋ ಹೇಳಿದರು. ಆ ಒಡವೆಗಳನ್ನೆಲ್ಲ ಹರಾಜು ( ಲಿಲಾವು ) ಮಾಡುತ್ತ ನಿಂತಿದ್ದಾತನೇ ಕೌಮುದಿಯ ತಂದೆ. ಮಗಳ ಒಡವೆ ಒಂದೊಂದಾಗಿ ಆತನೇ ಹರಾಜು ಮಾಡುತ್ತಿದ್ದ. ಆತನ ಕಣ್ಣಿನಲ್ಲಿ ಒಂದು ಅಲೌಕಿಕಾನಂದದ ಹೊಳಪು ಮಿನುಗುತ್ತಿತ್ತು. ಬಾಪೂಗೆ ತಡೆಯಲಾಗಲಿಲ್ಲ, ಆದರೂ ಕೌಮುದಿಗೆ ಹೇಳಿದರು. 'ಈಗ ಒಡವೆಯೇನೋ ಕೊಟ್ಟೆ ಕೌಮುದಿ. ಮತ್ತೆ ಅವನ್ನು ಎಂದೂ ಇಡದಿದ್ದರೆ ಈ ತ್ಯಾಗಕ್ಕೆ ಬೆಲೆ ತಾಯಿ.' ಕೌಮುದಿಗೆ ವಯಸ್ಸು ಎಳದು ಆದರೂ ಹೃದಯ ಬೆಳೆದದ್ದು, ದೃಢಕಂಠದಿಂದ ಆ ದೇವತೆ ತಥಾಸ್ತು ಎಂದಳು.

ಇಲ್ಲಿಗೆ ಬಾಪೂಜಿಯ ಮನಸಿನ ಅಣೆಕಟ್ಟು ಒಡೆದು ಹೋಯಿತು. ಹಸ್ತಾಕ್ಷರದ ಪುಸ್ತಕ ಕೌಮುದಿಗೆ ಕೊಡುವಾಗ ಎದೆ ತುಂಬಿಬಂತು. 'ಕೌಮುದಿ, ನೀನು ಕಳಚಿಕೊಟ್ಟ ಒಡವೆಗಿಂತ ನಿನ್ನ ತ್ಯಾಗವೇ ಹಿರಿಯ ಒಡವೆ, ತಂಗೀ' ಎಂದರು.

ಹೆಂಗುಸನ್ನು ಹೇಡಿ ಎಂದು ಗಾಂಧೀಜೀ ತಿಳಿದಿಲ್ಲ ಎಂದೇ ಈ ವಿಲಕ್ಷಣ ಜಾಗೃತಿ ಸಾಧ್ಯವಾಗಿದೆ. ಭಾರ್ಯೆ ಎಂಬ ಭಾವ ಗಾಂಧೀಜಿಗೆ ಸಮ್ಮತವಿಲ್ಲ. ಹೆಂಡತಿ ಗಂಡನಿಗೆ ಹೊರೆಯಲ್ಲ. ಇಬ್ಬರೂ ಸರಿಸಮ. 'ಅವನು ಸ್ವಾಮಿ ಆದರೆ ಈಕೆ ಸ್ವಾಮಿನಿ.' ಹೆಂಗಸು ಕೈಲಾಗದ ಪ್ರಾಣಿ. ಆಕೆಯ ಮಾನ ಕಾಪಾಡಲು ಗಂಡಸು ಬೇಕೇಬೇಕು ಎಂದು ತಿಳಿವುದು ತಪ್ಪು. 'ಹೆಣ್ಣಿನ ಮಾನ ಗಂಡಸು ಕಾಯಬಲ್ಲನೆ? ಅಂಥ ಒಂದು ಉದಾಹರಣೆಯನ್ನೂ ನಾನು ಅರಿಯೆ. ಕಾಯಬೇಕೆಂದರೂ ಅವನಿಗೆ ಸಾಧ್ಯವೆ? ಸೀತೆಯ ಮಾನ ರಾಮಚಂದ್ರ ಕಾಯ್ದನೆ? ದ್ರೌಪದಿಯ ಮಾನ ಕಾಯ್ದವರು ಪಾಂಡವರೇ? ಇವರಿಬ್ಬರು ಸತಿಯರೂ ತಮ್ಮ ಪವಿತ್ರ ಗುಣದ ಬಲದಿಂದಲೇ ತಮ್ಮ ಮಾನ ಉಳಿಸಿಕೊಂಡರು.'

ಅಹಿಂಸೆಯ ಮಾತು ಎತ್ತಿದಾಗೆಲ್ಲ ಹೆಣ್ಣಿನ ಮಾನದ ಪ್ರಶ್ನೆ ಒಂದು ತಂದು ನಿಲ್ಲಿಸುವುದು ಸಹಜವಾಗಿದೆ. ದುಷ್ಟ ಒಬ್ಬ ಹೆಂಗಸನ್ನು ಕಾಡಿದರೆ ಆ ಅತ್ಯಾಚಾರವನ್ನು ನಿರೋಧಿಸದೆ ಇರುವುದು ಹೇಗೆ? ಗಾಂಧೀಜೀ ಅದಕ್ಕೆ ಚಲೋ ಉತ್ತರ ಕೊಟ್ಟಿದಾರೆ. ಆಕೆ ನಿರೋಧಿಸಬೇಕು ಅಗತ್ಯವಾಗಿ. ಅದು ಆಕೆಯ ಧರ್ಮ. ಆದರೆ ಕತ್ತಿ ಕಠಾರಿ ಹಿಡಿದು ಅಲ್ಲ. ಹಿಂಸೆಯಿಂದ ಅಲ್ಲ. ತನ್ನ ಜೀವ ಕೊಟ್ಟಾದರೂ ನಿರೋಧಿಸಬೇಕು. ಹೆಣ್ಣಿಗೆ ಮಾನಸಂರಕ್ಷಣೆ ಗಂಡಿನ ಆಸರೆಯುಲ್ಲಿಲ್ಲ; ತನ್ನ ಪವಿತ್ರ ಚರಿತ್ರೆಯೇ ಆ ಆಯುಧ. ' ಒಂದು ವೇಳೆ ಅಂಥ ಅತ್ಯಾಚಾರದ ಸಂದರ್ಭ ಬಂದರೆ ಹೆಣ್ಣು ಸತ್ತಾಳು; ಸೋಲಲಿಕ್ಕಿಲ್ಲ. ಆದರೆ ಒಬ್ಬ ಹುಡಿಗೆಯನ್ನು ಹೆಡಮುರಿಗೆ ಕಟ್ಟಿಹಾಕಿ ಬಾಯಿಗೆ ಬಟ್ಟೆ ತುರುಕಿದರೆ ಆಕೆಗೆ ಬಿಡಿಸಿಕೊಳ್ಳಲು ಕಸು ವಿಲ್ಲದೆ ಹೋಗುತ್ತದೆ. ಅಂಥ ಹುಡುಗಿಗೆ ನಾನು ತಿಳಿದಷ್ಟು ಸುಲಭವಲ್ಲ ಸಾಯುವುದು ಎಂದು ಹೇಳುತ್ತಾರೆ. ಮಾನ ಕಾಪಾಡಿಕೊಳ್ಳುವ ಇಷ್ಟ ಬಲವಾಗಿದ್ದರೆ ಎಷ್ಟೇ ಕಟ್ಟಿಹಾಕಿದರೂ ಆಕೆ ಆ ಕಟ್ಟುಗಳನ್ನೆಲ್ಲ ಹರಿಯ ಬಲ್ಲಳು ಎಂದು ಹೇಳಲು ನನಗೆ ಸಾಹಸ ಇದೆ. ಆ ದೃಢಸಂಕಲ್ಪವೇ ಆಕೆಗೆ ಸಾಯಲು ಬಲವನ್ನು ನೀಡುತ್ತದೆ. ಆದರೆ ಇಂಥ ಸಾಮರ್ಥ್ಯ ಸುಮ್ಮನೆ ಬಾರದು. ಆದಕ್ಕೆ ತಕ್ಕ ಶಿಕ್ಷಣ ಬೇಕು.'

ಇದೆಲ್ಲ ಬರೀ ಕನಸು. ಎಷ್ಟಾದರೂ ಹೆಣ್ಣು ಅಬಲೆ ಎನ್ನುವವರಿದಾರೆ. ಅವರನ್ನು ಕಂಡು ಗಾಂಧೀಜಿ ಕೆರಳಿಬಿಡುತ್ತಾರೆ. ' ಅಬಲೆಯೆ? ನಮ್ಮ ನಾಡಿನ ಹಳ್ಳಿಗಳಿಗೆ ಬನ್ನಿ; ತೋರಿಸುತ್ತೇನೆ ಹೆಣ್ಣು ಅಬಲೆಯೋ ಸಬಲೆಯೋ? ಗಂಡಸಿಗಿಂತ ಹೆಂಗುಸು ಹೆಚ್ಚು ಶಕ್ತಿವಂತಳು. ಅಲ್ಲಿ ಯಾವ ಹೆಂಗುಸಾದರೂ ನಿಮಗೆ ಹೇಳಿಯಾಳು : ಹೆಣ್ಣಿಗೆ ಬೇಡ ಎನಿಸಿದರೆ ಹೆಣ್ಣು ಹೊಟ್ಟೆಯಲ್ಲಿ ಹುಟ್ಟಿದ ಯಾವ ಗಂಡಸೂ ಆಕೆಯ ಮೇಲೆ ಕೈ ಮಾಡಲಾರ. ನನ್ನ ದಾಂಪತ್ಯಾನುಭವದಿಂದ ಈ ಮಾತು ಹೇಳುತ್ತೇನೆ. ನನ್ನ ಅನುಭವ ಕೇವಲ ವೈಯಕ್ತಿಕವಲ್ಲ. ಅಂಥ ಉದಾಹರಣೆ ಬೇರೆ ಇಲ್ಲವೇ ಇಲ್ಲ. ಮಾನದ ಸೂರೆಗಿಂತ ಸಾವೇ ಲೇಸು ಎಂಬ ಮನೋಬಲ ವಿದ್ದರೆ ಎಂಥ ರಾವಣನೂ ಹೆಣ್ಣನ್ನು ಕೆಡಿಸಲಾರ. ಊಹುಂ; ಇದು ಇಬ್ಬರ ಆಟ.'

ಅದು ಇಬ್ಬರ ಆಟ. ಗಂಡು ಹೆಣ್ಣು ಮನಸಿನಿಂದ ಕೂಡದೆ ಅವರ ಮೈ ಕಲೆತರೆ ತಾನೆ ಏನು? ಹೆಣ್ಣಿನ ಮನಸ್ಸು ಇಲ್ಲದೆಯೆ—ಆಕೆಯ ಮನಸ್ಸಿಗೆ ವಿರೋಧವಾಗಿಯೂ ಕೂಡ, ಆಕೆಯ ಮೈಯನ್ನು ಬಳಸಲು ಸಾಧ್ಯವಿದೆ. ಇದರಿಂದ ಗಂಡಿಗೊಂದು ನೀತಿ ಹೆಣ್ಣಿಗೊಂದು ನೀತಿ ಆಗಿದೆ. ಇವನಿಗೆ ಇಲ್ಲದ ಅವಮಾನ ಆಕೆಗೆ ಇದೆ ಎಂಬ ದುಷ್ಟ ನೀತಿಯೊಂದು ಪ್ರಚಾರದಲ್ಲಿದೆ. ಈ ನೀತಿ ಗಂಡು ಹೆಣ್ಣಿಗೆ ಎರೆದ ಮಂಕುಬೂದಿ. ಗಾಂಧೀಜೀ ಈ ನೀತಿಯನ್ನು ತುಚ್ಛವಾಗಿ ಕಾಣುತ್ತಾರೆ. ಅದು ಅಸತ್ಯ, ಮೋಸ. ಯಾರು ಯಾರಿಗೆ ಅವಮಾನ ಮಾಡಬಲ್ಲರು? ಗಂಡಿಗೇ ಆಗಲಿ ಹೆಣ್ಣಿಗೇ ಆಗಲಿ ಇನ್ನೊಬ್ಬರು ಮಾಡಿದುದು ಅವಮಾನವಾದೀತೇ? ನಮಗೆ ನಾವು ಮಾಡಿಕೊಂಡುದೇ ಅವಮಾನ.

'ಅವರಿಗೆ ಸಮ್ಮತವಲ್ಲದುದರಲ್ಲಿ ಯಾರ ಮಾನಮರ್ಯಾದೆಯೂ ಹೋಗದು. ಒಬ್ಬ ಪಶು ಹೆಂಗುಸಿಗೆ ಮೈಮೇಲೆ ಎಚ್ಚರ ತಪ್ಪಿಸಿ ಆಕೆಯ ಮೈಯನ್ನು ಕೂಡಿದರೆ—ಆ ಅತ್ಯಾಚಾರದಿಂದ ಆಕೆಗೆ ಮಾನಗೇಡೇ? ಕುಟಿಲೆಯಾದ ಹೆಂಗುಸು ಒಬ್ಬಳು ಗಂಡುಸಿಗೆ ಮದ್ದು ಉಣಿಸಿ, ಮಾಟ ಮಾಡಿ ಅವನಿಗೆ ಬುದ್ಧಿ ಕಳೆದು ತನ್ನ ಮನಸಿಗೆ ಬಂದಂತೆ ಅವನನ್ನು ಆಡಿಸಿದರೆ ಅವನ ಮಾನಕ್ಕೆ ಲೋಪವೇ? ಇವನಿಗೆ ಹೋಗದ ಮಾನ ಆಕೆಗೆ ಏನು ಹೋಯಿತು?'

ಡಾಕ್ಟರ್ ಮಾಡ್ ರಾಯಡನ್ ಗಾಂಧೀಜಿಗೆ ಸ್ತ್ರೀಲೋಕದ ಕೃತಜ್ಞತೆಯನ್ನು ಸಲ್ಲಿಸುತ್ತ ಹೇಳಿದ ಮಾತು ತುಂಬ ಮನೋಹರವಾಗಿದೆ. 'ಮಹಾತ್ಮನಿಂದ ನಾನು ನಿರೀಕ್ಷಿಸುವ ಹಿತ ಹೆಣ್ಣಿಗಾಗಿ, ಹೆಣ್ಣಾಗಿ. ಪ್ರಪಂಚದಲ್ಲಿ ಸಾವಿಗಿಂತ ಘೋರವಾದವು ಇವೆ. ಅವಮಾನ ಅಂಥ ಘೋರವೇ ಸರಿ. ಆದರೆ ಇನ್ನೊಬ್ಬರು ಮಾಡಿದ ಕೃತ್ಯದಲ್ಲಿಲ್ಲ ಅವಮಾನ; ನಾವು ಮಾಡಿದುದರಲ್ಲಿ ಇದೆ. ಇಂಥ ಉತ್ತರ ಕೊಡಲು ಗಾಂಧೀಜಿಯಲ್ಲದೆ ಬೇರೆ ಯಾರಿಗೆ ಎದೆ ಇದೆ? ಮಾನಿನೀ ಪ್ರಪಂಚವೆಲ್ಲ ಅದಕ್ಕಾಗಿ ಅವರಿಗೆ ಗೌರವದ ಆರತಿಯನ್ನು ಬೆಳಗಬೇಕು.'

---

## ಕಸ್ತೂರಬಾ

ಮಹಾಪುರುಷರ ಸಂಗ ಹೆಜ್ಜೇನು ಸವಿದಂತೆ ಎಂದು ಹೇಳಿದಾಗ ಸರ್ವಜ್ಞಮೂರ್ತಿ ತನ್ನ ಬಿರುದನ್ನು ಮರೆತಿರಬೇಕು. ಇಲ್ಲವೆ, ಎಲ್ಲ ಬಲ್ಲವರಿಲ್ಲ ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡಿರಬೇಕು. ತಿಳಿದವನು ಹಾಗೆ ಹೇಳಬಹುದೇ ತಾನು?

ಶ್ರೀರಾಮಚಂದ್ರನಿಗಿಂತ ಸಜ್ಜನ ಉಂಟೆ? ಅಂಥವನ ಕೈಹಿಡಿದು ಸೀತಾದೇವಿ ಪಟ್ಟ ಸುಖವೇನು? ಹದಿನಾಲ್ಕು ವರ್ಷ ವನವಾಸ, ಅದರಲ್ಲಿ ರಾಕ್ಷಸಪೀಡೆ, ಅಶೋಕವನದ ಶೋಕ–ಇದನ್ನೆಲ್ಲ ಮೀರಿಸಿ ಅಗ್ನಿಪರೀಕ್ಷೆ. ಅಲ್ಲಿಗಾದರೂ ಮುಗಿಯಿತೆ? ಮುಂದೆ ಉತ್ತರ ಕಾಂಡದ ಭೀಷಣ. ಗುಡಿಯೊಳಗಿನ ದೇವರಿಗೆ ತೆಂಗಿನಕಾಯಿ ಒಡೆದು ಕರ್ಪೂರ ಬೆಳಗಿ ಒಂದು ಗಳಿಗೆ ಧ್ಯಾನದಲ್ಲಿ ಶಾಂತಿ ಪಡೆದು ಹೊರಟುಹೋಗುವ ಜನಕ್ಕೆ ಅಡವಿಯ ಕಗ್ಗತ್ತಲೆಯಲ್ಲಿ ಹಣತೆಯ ದೀಪದ ಬೆಳಕಿನಲ್ಲಿ ಬಾವಲಿ ಹುಳುಹುಪ್ಪಟೆಗಳ ಹಾರಾಟದಲ್ಲಿ ಆ ದೇವರಲ್ಲದೆ ಬೇರೆ ಜೊತೆಯಿಲ್ಲದೆ ಬದುಕಬೇಕಾದ ಪೂಜಾರಿಯ ಭವಣೆಯೇನು ತಿಳಿದೀತು.

ಮಹಾಪುರುಷರ ಸಂಗ ಶುಶ್ರೂಷೆ ತಂತಿಯ ಮೇಲೆ ನಡೆದಂತೆ. ತೂಕ ತಪ್ಪಿದರೆ ಮುಗಿಯಿತು. ಅದು ಅಸಿಧಾರಾ ವ್ರತ; ಅಲ್ಲ, ಅಗ್ನಿಪರೀಕ್ಷೆಯೇ ಸರಿ. ಆದರಲ್ಲೂ ಎಲ್ಲ ಸಾಧುಸಂತರದೂ ಒಂದು ತೂಕವಾದರೆ

ಗಾಂಧೀಜಿಯದೇ ಒಂದು ತೂಕ. ತಮ್ಮ ಸಹವಾಸದಲ್ಲಿರುವವರೆಲ್ಲ ಉತ್ತಮ ಜಾತಿಯ ಜನರಾಗಬೇಕೆಂದು ಅವರಿಗೆ ತುಂಬಾ ಆಸೆ. ಆ ಆಸೆ ಅನೇಕ ಸಲ ಸುತ್ತಲಿನವರಿಗೆ ಪ್ರಾಣಸಂಕಟವಾಗುವುದುಂಟು. ಬಂಗಾರಕ್ಕೆ ಬಣ್ಣ ಕೊಡಲು ಪುಟಕ್ಕೆ ಹಾಕುವಂತೆ ಸಂಗಾತಿಗಳನ್ನು ಬಾಪು ಪುಟಕ್ಕೆ ಹಾಕುತ್ತಾರೆ. ಆ ಸಂಕಟದಲ್ಲಿ ಸಿದ್ಧಿಯಿದೆ, ಆ ಪುಟದಲ್ಲಿ ಶುದ್ಧಿ ಇದೆ.

ಬಾಪೂಜಿಯ ಪಟ್ಟ ಶಿಷ್ಯ ಮಹದೇವ ದೇಸಾಯಿಗೊಮ್ಮೆ ಈ ಪರೀಕ್ಷೆಯನ್ನು ತಡೆದುಕೊಳ್ಳುವುದು ಬಹಳ ಜಗಿಯಾಯಿತು. ಆ ಸಂದರ್ಭ ಆ ದುಃಖ 'ಪರ್ಧಾಯಾತ್ರೆ' ಯಲ್ಲಿ ಹೇಳಿದೆ. ಮಹದೇವ ಭಾಯಿಗೇ ಇಂಥ ಅನುಭವ ಬಂದರೆ ಹಗಲಿರುಳೂ ಈ ಮುಳ್ಳು ಪಾಲಕ್ಕಿಯ ಸೇವೆ * ಮಾಡುವ ಕಸ್ತೂರಬಾಗೆ ಹೇಗಿರಬೇಡ!

ಕಸ್ತೂರಬಾನನ್ನು ನೋಡಿದರೆ ಆಕೆ ಈ ಮಹಾ ಸಾಹಸ ಮಾಡಿದ ಧೀರೆ ಎನಿಸುವದೇ ಇಲ್ಲ. ಆ ಮೋರೆಯಲ್ಲಿ ಅಂಥ ಅಟ್ಟಹಾಸದ ಗುರುತೇ ಇಲ್ಲ. ಸರಲವಾದ ಮುಖಮುದ್ರೆ, ವಾತ್ಸಲ್ಯತುಂಬಿದ ಕಣ್ಣು. ವಯಸಿನಿಂದ, ವಯಸಿಗೆ ತಕ್ಕ ಅನುಭವದಿಂದ ಬಂದ ಒಂದು ಅಪೂರ್ವ ಶಾಂತಿ ಆ ಮೋರೆಯಲ್ಲಿ ಕಾಣುತ್ತದೆ. ಲಂಕೆಯಲ್ಲಿ ಅಗ್ನಿಪಾವನಳಾಗಿ ತುಂಬಿದ ಮನಸಿನಿಂದ ಹಿಗ್ಗಿದ ಎದೆಯಿಂದ ರಾಮನ ಬಳಿಗೆ ನಡೆದುಬಂದ ಸೀತಾದೇವಿಯ ಕಣ್ಣಿನ ಮಿಂಚಿನ ಗೊಂಚಲು ಇಲ್ಲಿ ಕಾಣುವದಿಲ್ಲ. ವಾಲ್ಮೀಕಿ

---

* ನಮ್ಮ ಕಡೆ ವೈಷ್ಣವ ದೇವಾಲಯಗಳಲ್ಲಿ ಒಂದು ಸಂಪ್ರದಾಯವಿದೆ. ದೇವರಿಗೆ ಒಂದು ಪಾಲಕ್ಕಿ ಮಾಡಿಸಿ ಅದರ ತುಂಬ ಉಕ್ಕಿನ ಮುಳ್ಳು ನೆಡಿಸುತ್ತಾರೆ. ಅಂಗುಲಕ್ಕೊಂದರಂತೆ ನೂರಾರು ಮುಳ್ಳು ಮೊನೆಯಾಗಿ ಅದರ ತುಂಬ ಹರಡಿರುತ್ತವೆ. ಜಾತ್ರೆಯಲ್ಲಿ ಆ ದೇವರ ದಾಸನು ನೇಮನಿಷ್ಠೆಗಳಿಂದ ದೇವರನ್ನು ಪೂಜಿಸಿ ಆ ಮುಳ್ಳು ಪಾಲಕ್ಕಿಯಲ್ಲಿ ಮಲಗಬೇಕು. ಹಾಗೆ ಮುಳ್ಳು ಹಾಸಿಗೆಯ ಮೇಲೆ ಮಲಗಿದ ಆ ಭಕ್ತನನ್ನು ಊರೆಲ್ಲ ಮನೆಮನೆಗೆ ಹೊತ್ತುಕೊಂಡು ಹೋಗಿ ದರ್ಶನ ಮಾಡಿಸಬೇಕು. ಬೆಳಗ್ಗೆ ಅವನು ಬದುಕಿದ್ದರೆ ಅದೊಂದು ಪುನರ್ಜನ್ಮ. ಮುನ್ನಾದಿನ ಅವನ ಹೆಂಡತಿಯ ಬಳೆ ಒಡೆಯಲಾಗುತ್ತದೆ. ಮರುದಿನ ಬೆಳಗ್ಗೆ ಅವಳಿಗೆ ಮತ್ತೆ ಬಳೆಯ ಅಲಂಕಾರ.

ಮುನಿಯ ಆಶ್ರಮದಲ್ಲಿ ಲವಕುಶರೊಡನೆ ಉಳಿದ ಮುನಿಕುಮಾರರೊಡನೆ ರಾಮಾಯಣವನ್ನು ಹಾಡುತ್ತ ಅವರ ನಡುವೆ ಕುಳಿತ ಸೀತೆಯ ತುಂಬು ತಾಯ್ತನದ ನೋಟ ನೆನಪಾಗುತ್ತದೆ. ಆಶ್ರಮದಲ್ಲಿ ತನ್ನ ಮೊಮ್ಮಗ ನೊಡನೆ ಉಳಿದ ಮಕ್ಕಳೊಡನೆ ನಗುತ್ತ ನಲಿದಾಡುತ್ತ ನೂಲುತೆಗೆವಾಗ ಆ ನೋಟವನ್ನು ನೋಡಿದರೆ ರಾಮಾಯಣದ ಈ ಚಿತ್ರ ಮತ್ತೆ ಮತ್ತೆ ನೆನಪಿನಲ್ಲಿ ಮೂಡಿಬರುತ್ತದೆ.

ಹೌದು. ಸೀತೆಯಂತೆ ಚಂದ್ರಮತಿಯಂತೆ ಕಸ್ತೂರಬಾ ಕಷ್ಟದಲ್ಲೂ ಸುಖದಲ್ಲೂ ಗಂಡನನ್ನು ನೆರಳಿನಂತೆ ಹಿಂಬಾಲಿಸಿದಾಳೆ. ಹೆಣ್ಣಿನ ನಿಜವಾದ ರೀತಿ ಅದೇ. ಗಂಡಾನೆ ಕೆಸರಿನಲ್ಲಿ ಹೊಕ್ಕರೂ ಅದರ ಹೆಣ್ಣು ಅದನ್ನು ಬಿಡದು; ಬೆನ್ನು ಅಂಟಿಯೇ ಇರುತ್ತದೆ. ಚಂದ್ರ ರಾಹುಗ್ರಸ್ತನಾದರೆ ಚಿಕ್ಕೆ ದೂರ ಸರಿದಾವೆ? ವನವಾಸಕ್ಕೆ ಹೋಗುವವನ್ನ ಸೀತೆ ಕೇಳಿದ ಳಂತೆ ರಾಮನನ್ನು: 'ಯಾವಾಗಲೂ ನಿನ್ನ ಪಾಲಿನದರಲ್ಲಿ ಅರ್ಧಪಾಲು ಕೊಟ್ಟಿದೀಯೆ. ಈ ಕಷ್ಟದಲ್ಲೇಕೆ ಬೇಡ?' ಕಸ್ತೂರಬಾ ತನ್ನ ಅರ್ಧ ಪಾಲಿನ ಕಷ್ಟವನ್ನು ಸಂತೋಷದಿಂದ ಹೊತ್ತಿದಾಳೆ; ಹೊತ್ತು ತನ್ನ ಬಾಳನ್ನು ಹಸನುಮಾಡಿಕೊಂಡಿದಾಳೆ, ಹದಮಾಡಿಕೊಂಡಿದಾಳೆ. ಅದರ ಫಲವಾಗಿ ಅಖಂಡ ಶಾಂತಿಯಲ್ಲಿ ಮೀಯುತ್ತಿದಾಳೆ.

ಶ್ರೀರಾಮ ಹರಿಶ್ಚಂದ್ರರಿಬ್ಬರೂ ಸತ್ಯಸಂಧರು. ಅವರ ಸತ್ಯ ಸಾಧ ನೆಯ ಹಾದಿಯಲ್ಲಿ ದುಃಖದ ಸುರಿಮಳೆಯಾಯಿತು. ಅವರ ಕಷ್ಟ ಪರಂ ಪರೆಗೆ ವಿಧಿಯೂ ಹಗೆಗಳೂ ಕಾರಣರಾದರು. ಆದರೆ ಗಾಂಧೀಜಿಯ ಸತ್ಯ ಶೋಧನೆಯಲ್ಲಿ ವಿಧಿ ಕೊಟ್ಟ ಕಷ್ಟ ಹತ್ತಾದರೆ ತಾವೇ ತಂದುಕೊಂಡದ್ದು ಇಪ್ಪತ್ತು. ಪರದುಃಖವನ್ನು ತನ್ನ ದುಃಖವೆಂದು ತಿಳಿಯುವ ವೈಷ್ಣವ ಧರ್ಮಕ್ಕೆ ಇದು ಸಹಜ. 'ಪೀಡ ಪರಾಯಿ ಜೋ ಜಾಣೇರೇ ತೇನ ವೈಷ್ಣವ ಜನ ಕಹಿಯೆ'– ಇತರರ ಸಂಕಟವನ್ನು ತಿಳಿಯ ಬಲ್ಲವನೇ ವೈಷ್ಣವ–ಎಂಬ ಗೀತೆಯಲ್ಲಿ ಆ ಧರ್ಮಸೂತ್ರವಿದೆ. ಆ ಹಾಡು ಗಾಂಧೀ ಜಿಗೆ ತುಂಬಾ ಇಷ್ಟವಾದುದು.

ವ್ಯವಹಾರದಲ್ಲಿ ಕುಶಲಿಗಳಾಗಿ 'ತಾನುಂಟೋ ಮೂರು ಲೋಕ

ವುಂಟೋ' ಎಂದು ಬಾಳಿನ ಗುಡ್ಡವನ್ನೇರಿ ಹೋಗುವ ಜನರಿಗೆ ಗಾಂಧೀಜಿಯ 'ಬೀದಿಯಲ್ಲಿ ಹೋಗುವ ಮಾರಿ ಬಾಗಿಲು ಹೊಕ್ಕು ಹೋಗು' ಎಂದು ಕರೆವ ಪ್ರವೃತ್ತಿ ವಿಚಿತ್ರವಾಗಿ ಕಾಣಬಹುದು. ಇಲ್ಲದ ಒಣ ರಗಳೆಯಾಗಿ ಕಾಣಬಹುದು. ಕಸ್ತೂರಬಾಗೆ ಮಾತ್ರ ತನ್ನ ಬಾಳಿನ ಕಲ್ಲಿನಲ್ಲಿ ಮುಗ್ಧ ಮನೋಹರ ಜೀವನದ ದಿವ್ಯ ಮೂರ್ತಿಯನ್ನು ಕೊನರಿಸುವ ಶಿಲ್ಪಕಲೆಯಾಯಿತು.

ಗಾಂಧೀಜೀ ಆಕೆಯನ್ನು ಕಾಡಿದಷ್ಟು ಯಾರೂ ತನ್ನ ಹೆಂಡತಿಯನ್ನು ಪೀಡಿಸಲಿಕ್ಕಿಲ್ಲ. ಯಾವ ಗಳಿಗೆಯಲ್ಲಿ ಏನು ಅನಾಹುತವಾದೀತೋ, ಎಲ್ಲಿ ದಾಂಪತ್ಯಜೀವನ ಮುರಿದೀತೋ ಎಂಬ ಹೆದರಿಕೆ ಕಸ್ತೂರಬಾಗೆ ಬಹಳಕಾಲ ಇದ್ದಿರಬೇಕು. ಗಾಂಧೀಜಿಗೆ ತನ್ನಂತೆ ತನ್ನವರು ಆಗಬೇಕೆಂಬ ಹಟ ಬಹಳ. ತನ್ನ ಸಿದ್ಧಾಂತಗಳನ್ನು ತನ್ನವರೇ ತನ್ನ ಮನೆಯವರೇ ಅನುಸರಿಸದೆ ಹೋದರೆ ಜಗತ್ತಿಗೆ ಹೇಗೆ ಅವನ್ನು ಉಪದೇಶಮಾಡುವದು?

ಸತ್ಯಾಗ್ರಹಾಶ್ರಮವನ್ನು ಹೂಡುವಾಗ ಗಂಡಹೆಂಡಿರ ನಡುವೆ ದೊಡ್ಡದೊಂದು ಗೊಂದಲವೇ ಆಯಿತು. ಆಶ್ರಮದಲ್ಲಿ ಅಸ್ಪೃಶ್ಯತೆಯನ್ನು ಪಾಲಿಸಬಾರದೆಂದು ಗಾಂಧೀಜಿಯ ನಿರ್ಧಾರ. ಆ ಸಂಕಲ್ಪ ಬರೀ ಗಾಳಿ ಗೋಪುರವಾಗಬಾರದು. ತಾವು ಮಾಡಿದ ಯಾವ ಸಂಕಲ್ಪವೂ ಆಡಿದ ಯಾವ ಮಾತೂ ರೂಪುಗೊಳ್ಳದೆ ವ್ಯರ್ಥವಾಗಿ ಜೊಳ್ಳಾಗಿ ಹೋಗುವದು ಗಾಂಧೀಜಿಯ ಲೆಕ್ಕದಲ್ಲಿಲ್ಲ. ಅಂಥ ಮಾತು ಆಡದೆ ಬಿಟ್ಟಾರು, ಅಂಥ ವಿಚಾರದ ವೇಗವನ್ನು ತಡೆದುಕೊಂಡಾರು. ಅಸ್ಪೃಶ್ಯತೆಯ ಬಗ್ಗೆ ಅವರು ನಿರ್ಧಾರ ಮಾಡಿದುದೇ ತಡ ತಮ್ಮ ವ್ಯವಹಾರದಲ್ಲಿ ಅದನ್ನು ಹರಿಯಿಸಿದರು. ಆಶ್ರಮದಲ್ಲಿ ಹರಿಜನರ ಕುಟುಂಬವೊಂದನ್ನು ತಮ್ಮ ಜೊತೆಗೆ ಇರಲು ತಂದಿಟ್ಟರು. ಕಸ್ತೂರಬಾಗೆ ಇದು ಸರಿ ಕಾಣಲಿಲ್ಲ. ಎಷ್ಟಾದರೂ ಹೆಣ್ಣು. ಧರ್ಮ ಸಂಪ್ರದಾಯಗಳನ್ನು ಮುರಿಯುವುದೇ ಹೆಣ್ಣಿನ ಮನಸಿಗೆ–ಅದರಲ್ಲೂ ಇಪ್ಪತ್ತೈದು ಮೂವತ್ತು ವರ್ಷಗಳ ಕೆಳಗೆ–ಒಪ್ಪದ ಮಾತು; ಹೋಗಲಿ, ಮುರಿದರೂ ಅದಕ್ಕೊಂದು ಹದ ಬೇಡವೆ? ಮುಟ್ಟಬಾರದ ಹೇಸಿ ಜನರನ್ನು ಮುಟ್ಟಿದರೆ ಮುಟ್ಟಲಿ ಎಂದರೆ ಅವರನ್ನು ಮನೆ

ಯೊಳಗೇ ಸೇರಿಸುವುದೇ? ಕಸ್ತೂರಬಾ ಗಂಡನ ಮಾತನ್ನು ಬಲವಾಗಿ ವಿರೋಧಿಸಿದಳು. ಇಬ್ಬರ ನಡುವೆ ದಾಟಲಾರದ ಹೊಳೆಯೊಂದು ಹರಿದಂತಾಯಿತು. ಕಸ್ತೂರಬಾನ ಕಣ್ಣೀರಾಗಲಿ ದಾಂಪತ್ಯದಲ್ಲಿ ಸುಮಾರು ಬಹುದಾದ ದೀರ್ಘ ವಿರಸವಾಗಲಿ ಗಾಂಧೀಜಿಯ ಮನಸ್ಸನ್ನು ಅಲುಗಾಡಿಸಲಿಲ್ಲ. ತಮ್ಮ ಸಿದ್ಧಾಂತಕ್ಕಾಗಿ ಎಂಥ ಬಲಿದಾನವನ್ನಾದರೂ ಕೊಡುವ ಸಾಧಕ ಜಾತಿ ಇವರದು. ಹೆಂಡತಿಯ ಮೇಲಿನ ಪ್ರೇಮ ತಾವು ಆರಿಸಿಕೊಂಡ ಕರ್ತವ್ಯಕ್ಕೆ ಅಡ್ಡಿ ಬಂದರೆ ಅದು ಅಲ್ಪಗುಣ. ಕ್ಲೈಬ್ಯವಾದೀತು. ಗಾಂಧೀಜೀ ಹೆಂಡತಿಗೆ ಹೇಳಿದರು: 'ಆಶ್ರಮದಲ್ಲಿರುವವರು ಹೀಗೆಯೇ ನಡೆಯಬೇಕು ಎಂದು ಕೆಲವು ನಿಯಮಗಳನ್ನು ಮಾಡಲಾಗಿದೆ. ಅವು ಯಾರಿಗೂ ತಪ್ಪಿದ್ದಲ್ಲ. ನಿನಗೆ ಅದರಂತೆ ನಡೆಯುವುದಾಗದಿದ್ದರೆ ಬೇರೆಯಾಗಿ ಇರು. ಬೇರೆ ಮನೆಮಾಡಿ ಅನುಕೂಲ ಮಾಡಿಕೊಡುತ್ತೇನೆ.'

ಕಸ್ತೂರಬಾ ಸಂತೋಷದಿಂದ ಆಶ್ರಮನಿಯಮಗಳಿಗೆ ಒಪ್ಪಿಕೊಂಡಳು. ತನಗೆ ಎಲ್ಲಕ್ಕಿಂತ ಹಿರಿದಾದ ಧರ್ಮ ಪತಿಸೇವೆ. ಧರ್ಮಶಾಸ್ತ್ರ ವಿವೇಚನೆ ಮಾಡುವ ಯೋಗ್ಯತೆ ತನ್ನದೆ? ಧರ್ಮಾಧರ್ಮದ ಹೊಣೆ ಗಂಡನಿಗೇ ಇರಲಿ. ತನಗೆ ಪತಿಸೇವೆಯೊಂದು ಸಾಕು ಎಂದುಕೊಂಡಳೇನೋ. ಮನಸ್ಸನ್ನು ಒಗ್ಗಿಸಿಕೊಂಡಳು. ಹರಿಜನರ ಹುಡುಗಿ 'ಲಕ್ಷ್ಮಿ' ಆಕೆಗೆ ಮಗಳಾದಳು.

ಈ ರೀತಿಯ ವಿರಸ ಗಾಂಧೀಜಿಯ ದಾಂಪತ್ಯಜೀವನದಲ್ಲಿ ಮೊದಲಿನಿಂದಲೂ ಇದೆ. ಎಳೆತನದಿಂದಲೂ ಅವರು ಭಾರ್ಯಾಸಕ್ತರು. ಹೆಂಡತಿಯ ಮೇಲೆ ಅವರಿಗೆ ತುಂಬಾ ಪ್ರೇಮ. ಆಕೆಯನ್ನು ಆದರ್ಶ ಸ್ತ್ರೀಯಾಗಿ ಜಗತ್ತಿಗೊಂದು ಮೇಲ್ಪಂಕ್ತಿಯಾಗಿ ಮಾಡುವ ಬಯಕೆಯಿಂದ ಆಕೆಯನ್ನು ನಾನಾ ನಿರ್ಬಂಧಗಳಿಗೆ ಗುರಿಮಾಡಿದಾರೆ. ಒಂದು ಸಲ ಆಕೆಯನ್ನು ತೌರುಮನೆಗೆ ದೂಡಿಬಿಟ್ಟರು. ಕಡುತರ ಕಷ್ಟಗಳ ಪಾಲು ಮಾಡಿದ ಮೇಲೆಯೇ ಆಕೆಯನ್ನು ಹಿಂದಿರುಗಿ ಕರೆಯಿಸಿದುದು.

ಮೊದಲು ಗಂಡನಂತೆ ಅಧಿಕಾರ ನಡೆಸಿದವರು ಮುಂದೆ ಕಸ್ತೂರ ಬಾಗೆ ಗಾಂಧೀಜೀ ಮಣಿದುಹೋದರು. ಗಂಡಿನ ಅಧಿಕಾರಕ್ಕೆ ಹೆಣ್ಣು ಒಳಗಾಗದಿದ್ದರೆ ನಮ್ಮ ಸಮಾಜದಲ್ಲಿ ಪರಿಣಾಮವುಂಟೆ? ಅದರಲ್ಲೂ ಗಂಡನಿಗೆ ಹೆಂಡತಿಯ ಮೇಲೆ ಸರ್ವಾಧಿಕಾರ ತಾನೆ. ಮಾತುಮಾತಿನಲ್ಲೂ ಗಾಂಧೀಜೀ ಗೆದ್ದರು; ಕಸ್ತೂರಬಾ ಸೋತಳು. ಆದರೆ ಇವರು ಗೆದ್ದರೂ ಸೋತರು; ಆಕೆ ಸೋತರೂ ಗೆದ್ದಳು. ಹೆಣ್ಣು ಗೆಲ್ಲುವ ದಾರಿ ಸೋಲಿನದು, ಒಲವಿನದು. ಅದು ಇದಿರಾಳಿಯನ್ನು ಕಾಲ ಕೆಳಗೆ ತುಳಿದು ಒರಸಿ ಹಾಕುವ ಹಿಂಸೆಯ ಹಾದಿಯಲ್ಲ. ಮೇಲೆತ್ತಿ ಎದೆಗವಚಿ ಲಾಲಿಸುವ ಅಹಿಂಸೆಯ ಒಲವಿನ ದಾರಿ. ಆ ಸೋಲಿನಲ್ಲಿ ಗೆಲವಿನ ಮಂತ್ರವಿದೆ.

ಒಂದು ಸಲ ಗಾಂಧೀಜೀ ಕಸ್ತೂರಬಾನನ್ನು ಬಹಿರಂಗವಾಗಿ ಪೂರಾ ನಾಚಿಕೆಗೆ ಈಡು ಮಾಡಿದರು. ಅಪಮಾನದ ನೀರಿನಲ್ಲಿ ಅದ್ದಿ ಬಿಟ್ಟರು. ಸತ್ಯಾಗ್ರಹಧರ್ಮದ ನಿಯಮಗಳಲ್ಲಿ ಅಸಂಗ್ರಹ ಒಂದು ಮುಖ್ಯ ವ್ರತ. ನಾಳಿನ ಚಿಂತೆಯಿಲ್ಲದೆ ಈ ದಿನ ಬಾಳಬೇಕು. ನಾಳಿನದು ದೇವರಿಗೆ ಸೇರಿದ ಭಾರ. ಆಶ್ರಮದಲ್ಲಿ ಯಾರೂ ಒಂದು ಬಿಡಿಕಾಸನ್ನೂ ಸಂಗ್ರಹಬುದ್ಧಿಯಿಂದ ತೆಗೆದಿಡಬಾರದು. ಕಸ್ತೂರಬಾ ಒಂದು ಸಲ ಎರಡೋ ಮೂರೋ ರೂಪಾಯಿ ಯಾವಾಗಲಾದರೂ ಪ್ರಸಂಗಬಿದ್ದಾಗ ಉಪಯೋಗಕ್ಕೆ ಇರಲಿ ಎಂದು ತೆಗೆದು ಇಟ್ಟಿದ್ದರು. ಇದು ಗಂಡನಿಗೆ ತಿಳಿಯಿತು. ತನ್ನ ಸಹಧರ್ಮಚಾರಿಣಿಯೇ ಹೀಗೆ ಮಾಡಿದುದು ಗಾಂಧೀ ಜಿಗೆ ತುಂಬಾ ನೋವಾಯಿತು. ತಮ್ಮಲ್ಲಿ ಅಸಂಗ್ರಹ ಬುದ್ಧಿ ಪೂರ್ಣವಾಗಿ ಬೆಳೆದಿದ್ದರೆ ಆಕೆಗೆ ಈ ಬುದ್ಧಿ ಬರುತ್ತಿತ್ತೇ? ಆಕೆ ಮಾಡಿದ ವ್ರತಭಂಗ ತಮ್ಮ ಅಪೂರ್ಣತೆಯ ಕುರುಹು. ಆ ದಿನ ಸಂಜೆಗೆ ಪ್ರಾರ್ಥನೆಯ ಹೊತ್ತಿ ನಲ್ಲಿ ಎಲ್ಲರ ಇದಿರಿನಲ್ಲಿ ಗಾಂಧೀಜೀ ದುಃಖ ತುಂಬಿದ ಎದೆಯಿಂದ ಕಸ್ತೂರಬಾನ ತಪ್ಪನ್ನು ವಿವರಿಸಿ ಆಕೆಯನ್ನು ದಂಡಿಸಿದರು. ಆಶ್ರಮ ವಾಸಿಗಳೆಲ್ಲ ಚಿಕ್ಕವರು. ಆಕೆಯನ್ನು ತಾಯಿ ಎಂದು ತಿಳಿದು ನಡೆದು ಕೊಂಡವರು. ಅವರಿದಿರಿನಲ್ಲಿ ಈ ಅಪಮಾನದ ಶಿಕ್ಷೆ. ಹೇಗಿರಬೇಕು ಆಕೆಯ ಮನಸ್ಸು!

ಇನ್ನೊಂದು ಸಲ ಯಾರೋ ಬೇನೆ ಬಿದ್ದರು. ರೋಗಿಗೆ ಸರಿಯಾದ ಆರೈಕೆ ನಡೆಯಲಿಲ್ಲವೆಂದು ಗಾಂಧೀಜಿಗೆ ಅನಿಸಿತು. ಹೆಂಡತಿಯನ್ನು ಕೇಳಿದರು. ಆಕೆಗೆ ಆ ಮನುಷ್ಯ ಬೇನೆಬಿದ್ದ ಸುದ್ದಿಯೇ ಗೊತ್ತಿರಲಿಲ್ಲ. ಆಶ್ರಮದ ಯಜಮಾನಿ ಆಕೆ. ಆಕೆ ಈ ಸುದ್ದಿ ತಿಳಿದುಕೊಳ್ಳದಿದ್ದುದು ಅವರಿಗೆ ಸರಿಕಾಣಲಿಲ್ಲ. ಗಾಂಧೀಜಿಯ ಸತ್ಯದೃಷ್ಟಿಯ ಒರೆಗಲ್ಲು ಬಹಳ ತೀಕ್ಷ್ಣವಾದುದು. ಸಾಮಾನ್ಯಜನರಿಗೆ ಅವರ ಸತ್ಯಪಕ್ಷಪಾತದಲ್ಲಿ ಕೊಂಚ ವೈಚಿತ್ರ್ಯ ಕಂಡುಬರುತ್ತದೆ. ನಾವು ಫಲಾಪೇಕ್ಷಿಗಳು. ನಮ್ಮ ಕೆಲಸ ಹಣ್ಣಾದರೆ ಸಾಕು, ಯಾವ ದಾರಿಯಾದರೇನು ಎಂಬ ಮನೋವೃತ್ತಿ ನಮ್ಮದು. ಅವರಿಗೆ ಹಾಗಲ್ಲ. ಕೆಲಸ ಆಗಲಿ ಬಿಡಲಿ, ಹಿಡಿದ ಹಾದಿ ಸತ್ಯವಾಗಿರಬೇಕು. ಕಸ್ತೂರಬಾ ತನ್ನ ಕೆಲಸದಲ್ಲಿ ಅಶ್ರದ್ಧೆ ತೋರಿಸಿದಳೆಂದು ಅವರಿಗೆ ಅನಿಸಿತು. ತನ್ನ ಮಗ ಬೇನೆ ಬಿದ್ದಿದ್ದರೆ ಆಕೆಗೆ ತಿಳಿಯದೆ ಇರುತ್ತಿತ್ತೆ? ಆಕೆಗೆ ಇನ್ನೂ ಸಮದೃಷ್ಟಿ ಸಮನಿಸಿಲ್ಲ. ಆಕೆಗೆ ತನ್ನ ತಪ್ಪನ್ನು ತಿಳಿಸಿಕೊಡಬೇಕು ಎನಿಸಿತು ಗಾಂಧೀಜಿಗೆ. ಆ ದಿನ ಸಂಜೆಗೆ ಪ್ರಾರ್ಥನೆಯ ಹೊತ್ತಿನಲ್ಲಿ ಬಹಿರಂಗವಾಗಿ ಆ ಕೆಲಸ ಮಾಡಿದರು. 'ನಿನ್ನ ಮಗ ದೇವದಾಸ ಕಾಯಿಲೆ ಬಿದ್ದಿದ್ದರೆ ನಿನಗೆ ಕೂಡಲೆ ಗೊತ್ತಾಗುತ್ತಿತ್ತು; ಉಳಿದವರು ಕಾಯಿಲೆ ಬಿದ್ದರೆ ನಿನಗೆ ಸುದ್ದಿ ಕೂಡಾ ಗೊತ್ತಾಗಬಾರದೆಂದರೆ ಏನು?'

ಬರೀ ಅವಮಾನವಾದರೆ ಹೋಗಲಿ; ದುಡಿತದಲ್ಲೂ ಅಷ್ಟೇ. ಗಾಂಧೀಜೀ ಆಕೆಗೆ ಕೊಟ್ಟ ಕಷ್ಟ ಹೆಂಡತಿಯ ಮೇಲೆ ಪ್ರೀತಿಯುಳ್ಳ ಯಾವ ಗಂಡನೂ ತನ್ನ ಹೆಂಡತಿಗೆ ಕೊಟ್ಟಿರಲಾರ. ಇಷ್ಟು ದೊಡ್ಡ ಮಹಾತ್ಮನ ಹೆಂಡತಿಯಾಗಿಯೂ ಕಸ್ತೂರಬಾಗೆ ಅಡಿಗೆ, ಮನೆಕೆಲಸಗಳು ತಪ್ಪಿಲ್ಲ. ಸೇವಾಗ್ರಾಮಕ್ಕೆ ಬಂದ ಮೇಲೆ ಗಾಂಧೀಜಿಯ ಪರಿವಾರ ಕಡಮೆಯಾಗಿದೆ. ಅತಿಥಿಗಳೂ ಕಡಮೆ. ಬಂದವರಿಗೆಲ್ಲ ವರ್ಧಾದಲ್ಲೇ ವಸತಿ. ಅಲ್ಲಿಂದ ಸೇವಾಗ್ರಾಮಕ್ಕೆ ದರ್ಶನಾರ್ಥವಾಗಿ ಬಂದು ಕೆಲಸ ಮುಗಿಸಿಕೊಂಡು ವರ್ಧಾಕ್ಕೆ ಹಿಂದಿರುಗುತ್ತಾರೆ. ಸಾಬರಮತಿಯಲ್ಲಿದ್ದಾಗ ಪರಿವಾರ ತುಂಬಾ ದೊಡ್ಡದು. ಬಂದು ಹೋಗುವ ಜನವೂ

ಬಹಳ. ಈ ದೊಡ್ಡ ಸೇನೆಯ ಸಮಾರಾಧನೆ ಕಸ್ತೂರಬಾಗೆ ಸೇರಿದ ಕೆಲಸ. ಹಗಲೆಲ್ಲ ಕಸ್ತೂರಬಾ ರೊಟ್ಟಿ ಸುಡುತ್ತ ಅಡಿಗೆಯ ಮನೆಯಲ್ಲೇ ಕೊಳೆಯಬೇಕಾಗುತ್ತಿತ್ತು. ಏನೋ ಮೈಯ ಕಷ್ಟ ಸಹಿಸಿದರೂ ಸಹಿಸ ಬಹುದು ಎಂದುಕೊಂಡರೆ ಅಲ್ಲಿಗೆ ಮುಗಿಯಬೇಕಲ್ಲ ಈ ಕತೆ. ಮನೆಯ ಪಾಯಖಾನೆಗಳನ್ನು ಗುಡಿಸಬೇಕು. ತಾವು ತಮ್ಮ ಹೆಂಡತಿ ಅವನ್ನು ಗುಡಿಸಿ ಮೇಲ್ಪಂಕ್ತಿ ಹಾಕದಿದ್ದರೆ ಜೊತೆಗಾರರು ಹೇಗೆ ಆ ಕೆಲಸಕ್ಕೆ ಒಪ್ಪಿಯಾರು? ಅವರನ್ನು ಕೇಳುವುದು ಹೇಗೆ? ಕಸ್ತೂರಬಾ ಸುಲಭ ವಾಗಿ ಇದಕ್ಕೆ ಒಪ್ಪಲಿಲ್ಲ. ಒಪ್ಪಿಕೊಂಡಾಗಲೂ ಆ ಕೆಲಸವನ್ನು ಹೀನ ವೆಂದು ತಿಳಿದು ಮಾಡುತ್ತಿದ್ದರು. ಆದರೆ ಗಾಂಧೀಜಿಯ ಪವಿತ್ರಜೀವನದ ಸೆಕೆ ತಗಲಿದರೆ ಅಂಥ ಅಭಿಮಾನವು ಎಷ್ಟು ದಿನ ಉಳಿದೀತು?

ದಕ್ಷಿಣ ಆಫ್ರಿಕದಲ್ಲಿ ಇಂಥದು ಒಂದು ವಿರಸಸರಸ ನಡೆಯಿತು. ಆ ವಿರಸದ ಕೆಸರಿನಲ್ಲೂ ಹುಟ್ಟಿಬಂದದ್ದು ಕೊನೆಗೆ ಸರಸದ ಕಮಲವೇ. ಗಾಂಧೀಜೀ ಒಂಟಿಯಾಗಿ ಸಂಸಾರ ಮಾಡುವ ನಾಗರಿಕ ಜಾತಿ. ನಾಲ್ಕು ಜನ ಕಲೆತು ಬದುಕಬೇಕು ಎಂಬ ಹಳೆಯಕಾಲದ ಅವಿಭಕ್ತ ಕುಟುಂಬ ಪದ್ಧತಿಯವರು. ಅವರ ಜೀವನವೆಲ್ಲ ಆಶ್ರಮಗಳಲ್ಲೋ ಅದೇ ಜಾತಿಯ ಬೇರೆ ಸಂಸ್ಥೆಗಳಲ್ಲಿಯೋ ಕಳೆದಿದೆ. ದರ್ಬಾನ್‌ನಲ್ಲಿ ವಕೀಲರಾಗಿದ್ದಾಗಲೂ ಗಾಂಧೀಜಿಗೆ ಈ ಸಾಮೂಹಿಕ ಜೀವನದ ಚಪಲ ಇತ್ತು. ಅವರು ದೊಡ್ಡ ಬ್ಯಾರಿಸ್ಟರ್. ಅವರ ಕೆಲಸಕ್ಕೆ ಹಲವರು ಗುಮಾಸ್ತರು ಬೇಕಾಗಿತ್ತು. ಅವರಿಗೆಲ್ಲ ಗಾಂಧೀಜಿಯ ಮನೆಯಲ್ಲಿಯೆ ವಾಸ. ಆ ಗುಮಾಸ್ತರೆಲ್ಲ ಹಿಂದೂಗಳಲ್ಲ. ಹಿಂದೂಗಳಲ್ಲಿಯೂ ಒಂದು ಜಾತಿಯವರಲ್ಲ. ಆಗ ಗಾಂಧೀ ಜಿಯ ಬದುಕು ಎಲ್ಲಾ ಇಂಗ್ಲಿಷ್ ಪದ್ಧತಿಯಂತೆ. ಪ್ರತಿಯೊಂದು ಕೋಣೆಗೂ ಆ ಪದ್ಧತಿಯಲ್ಲಿ ಬಚ್ಚಲುಬೇಕು. ಅದಕ್ಕೆ ಅನುಕೂಲ ಇಲ್ಲದೆ ಕೋಣೆಗಳಲ್ಲಿ ಕೆಲವು ಪಾತ್ರೆಗಳನ್ನು ಇಟ್ಟಿದ್ದರು. ಪಳಗಿಹೋದ ಗುಮಾ ಸ್ತೆಗಳು ತಮ್ಮ ಕೋಣೆಯ ಪಾತ್ರೆ ತಾವೇ ಚೊಕ್ಕಟ ಮಾಡುತ್ತಿದ್ದರು. ಉಳಿದವನ್ನು ಗಾಂಧೀಜಿಯೋ ಕಸ್ತೂರಬಾನೋ ತೆಗೆದು ತೊಳೆಯುವ ರೂಢಿ. ಆಳುಗಳನ್ನು ಇಡುವುದು ಗಾಂಧೀಜಿಗೆ ಅಭ್ಯಾಸವಿಲ್ಲ. ಅದು

ಅವರಿಗೆ ಒಪ್ಪಿಗೆಯೂ ಅಲ್ಲ. ಒಂದು ಸಲ ಒಬ್ಬ ಕಿರಸ್ತಾನ ಗುಮಾಸ್ತ ಬಂದ ಹೊಸದಾಗಿ. ಅವನಿಗೆ ಇವರ ಮನೆಯ ಆಚಾರ ತಿಳಿಯದು. ಅವನ ಕೋಣೆಯ ಪಾತ್ರೆಗಳನ್ನು ತೊಳೆಯುವುದು ಈ ದಂಪತಿಗಳ ಪಾಲಿಗೆ ಬಿತ್ತು. ಆತ ಮೊದಲು ಪಂಚಮವರ್ಣದವನು. ಅವನ ಪಾತ್ರೆ ತಾವಾಗಲಿ ತನ್ನ ಗಂಡನಾಗಲಿ ತೊಳೆಯುವುದು ಕಸ್ತೂರಬಾಗೆ ಸಹಿಸಲಿಲ್ಲ. ಆದರೂ ಮಾಡಲೇಬೇಕು. ಮನೆಯಲ್ಲಿ ಆಳುಕಾಳಿದ್ದರೆ ತಾನೆ. ಆ ಪಾತ್ರೆ ಕೈಯಲ್ಲಿ ಹಿಡಿದು ಮೆಟ್ಟಲು ಇಳಿಯುವಾಗ ಗಾಂಧೀಜೀ ಅಲ್ಲಿ ಬಂದರು. 'ಕಣ್ಣು ಕೆಂಪೇರಿತ್ತು ಆಕೆಗೆ. ಕೆನ್ನೆಯ ಮೇಲೆ ಮುತ್ತಿನ ಸರದಹಾಗೆ ಕಣ್ಣೀರು ಹನಿಹನಿಯಾಗಿ ಉದುರುತ್ತಿತ್ತು.' ಕೋಪದಿಂದ ಆಕೆ ಗಂಡನನ್ನು ಆಕ್ಷೇಪಿಸಿದರು.

ಗಾಂಧೀಜಿಗೆ ತಮ್ಮ ಹೆಂಡತಿ ತಮ್ಮ ಹಾದಿಯಲ್ಲಿ ಸಂತೋಷವಾಗಿ ಬರಬೇಕು. ಹೀಗೆಲ್ಲ ಅರೆಬರೆ ಮನಸ್ಸಿನಿಂದ ಮಾಡಬಾರದು ಎಂದು ಅಭಿಪ್ರಾಯ. ತಮ್ಮ ಹೆಂಡತಿ ಒಳ್ಳೆಯವಳಾಗಬೇಕೆಂಬ ಆಸೆ. ಆಕೆಗೆ ಬುದ್ಧಿಕಲಿಸದಿದ್ದರೆ ಹೇಗೆ? ಅಭಿಮಾನದಲ್ಲಿ ಈ ಕಾಠಿನ್ಯ. ಹೆಂಡತಿಯ ಮೇಲೆ ತುಂಬ ಕನಿಕರ. ಆದರೆ ಆ ಕನಿಕರದಲ್ಲಿಯೂ ತುಂಬಾ ನೈಷ್ಠುರ್ಯ.

'ಇಂಥ ಹುಚ್ಚಾಟ ನನ್ನ ಮನೆಯಲ್ಲಿ ಸಹಿಸಲಾರೆ' ಎಂದರು ಗದರಿಸುತ್ತ.

ಈ ಮಾತು ಅಂಬಿನಂತೆ ಆಕೆಯನ್ನು ಚುಚ್ಚಿದವು.

ಆಕೆಯೂ ಗಟ್ಟಿಯಾಗಿಯೇ ಒದಲು ಹೇಳಿದರು. 'ನಿಮ್ಮ ಮನೆಯಲ್ಲಿ ನೀವೇ ಇದ್ದುಕೊಳ್ಳಿ. ನಾನೆಲ್ಲಾದರೂ ಹೊರಟು ಹೋಗುತ್ತೇನೆ.' ಗಾಂಧೀಜೀ ಆಗ ಮೈಮರೆತರು. ಅವರ 'ದಯೆಯೆಲ್ಲ ಬತ್ತಿ ಹೋಯಿತು. ಆ ದಿಕ್ಕಿಲ್ಲದ ಹೆಂಗುಸನ್ನು ರಟ್ಟೆ ಹಿಡಿದು ಬೀದಿಯ ಬಾಗಿಲಿಗೆ ಎಳೆದು ತಂದರು. ಬಾಗಿಲು ತೆರೆದು ಹೊರಗೆ ದಬ್ಬಬೇಕು. ಆಕೆಯ ಕೆನ್ನೆಗುಂಟ ಕಣ್ಣೀರು ಧಾರೆಯಾಗಿ ಹರಿಯಿತು. 'ನಿಮಗೇನು ನಾಚಿಕೆ ಇಲ್ಲವೆ? ಮೈಮೇಲೆ ಎಚ್ಚರ ಕೊಂಚವೂ ಬೇಡವೆ? ಈ ದೇಶದಲ್ಲಿ ನಾನು ಎಲ್ಲಿ ಹೋಗಲಿ? ಇಲ್ಲೇನು ನನ್ನ ತಂದೆತಾಯಿ ಇದಾರೆಯೆ? ಬಂಧುಬಳಗ

ಇದಾರೆಯೆ? ನಿಮ್ಮ ಕೈಹಿಡಿದದ್ದಕ್ಕೆ ಸಾರ್ಥಕ ಆಯಿತು. ನೀವು ಕೊಟ್ಟ ಕಷ್ಟ ಎಲ್ಲ ಸೈರಿಸಿಕೊಂಡು ನೀವು ಹೊಡೆದ ಹೊಡೆತಗಳನ್ನೆಲ್ಲ ತಿನ್ನ ಬೇಕಲ್ಲವೆ ಮದುವೆಯಾದದ್ದಕ್ಕೆ. ದಮ್ಮಯ್ಯ, ಪುಣ್ಯ ಬಂದೀತು ನಿಮಗೆ–ಬಾಗಿಲು ಮುಚ್ಚಿ ಮರ್ಯಾದೆ ಉಳಿಸಿಕೊಳ್ಳಿ. ಬೀದಿ ಜನ ನಮ್ಮ ಜಗಳ ನೋಡಿಗೀಡಿಯಾರು' ಎಂದು ಅಳುತ್ತ ಆಕೆ ಅಂದರು.

ಮುಖದಲ್ಲಿ ಗಾಂಭೀರ್ಯ ತೋರಿಸಿದರೂ ಒಳಗೆ ತುಂಬಾ ನಾಚಿಕೆ. ಬಾಗಿಲು ಮುಚ್ಚಿದರು. ಹೆಂಡತಿಗೆ ಗಂಡನನ್ನು ಬಿಟ್ಟು ಹೋಗುವುದು ಸಾಧ್ಯವಿರದಿದ್ದರೆ ಗಂಡನಿಗೂ ಹೆಂಡತಿಯನ್ನು ಬಿಡುವುದು ಸಾಧ್ಯವಿರ ಲಿಲ್ಲ. ಇಬ್ಬರ ನಡುವೆ ಎಷ್ಟೋ ವಿರಸ ಮೂಳಿಯುತ್ತಿದ್ದವು. ಆದರೆ ಕೊನೆಗೆ ಎಲ್ಲಾ ಸರಸ–ಸಮಾಧಾನ. ಅಸಾಧಾರಣ ಸಹನೆಯಿಂದ ಆಕೆಯೇ ಕಡೆಗೆ ಗೆದ್ದಿದಾಳೆ.

ತಾವು ಆಕೆಯನ್ನು ಪೀಡಿಸಿದ್ದ ಹಾಗೆ ಈಗ ಆಕೆ ತಮ್ಮನ್ನು ಪೀಡಿಸಿ ದರೆ ಏನೂ ತಪ್ಪಲ್ಲ; ತಮಗೆ ಆ ಶಿಕ್ಷೆ ಸಮ್ಮತ ಎನ್ನುತ್ತಾರೆ ಬಾಪೂ. 'ಆದರೆ ಇಬ್ಬರೂ ಪಳಗಿದ ಗೆಳೆಯರು. ಇಬ್ಬರಿಗೂ ಕಾಮಭಾವನೆ ಇಲ್ಲ. ಕಸ್ತೂರಬಾ ಅಂತೂ ಅನಾಸಕ್ತಳಾಗಿ ಕಾಯಿಲೆಗಳಲ್ಲಿ'–ಗಾಂಧೀಜಿಗೆ ಕಾಯಿಲೆ ಆದಾಗ–'ತುಂಬಾ ಶ್ರದ್ಧೆಯಿಂದ ಆರೈಕೆ ಮಾಡಿದಾಳೆ. ದಾಂಪತ್ಯದಲ್ಲಿ ಸಮಾಧಾನ, ಶಾಂತಿ, ಸಂತೋಷಗಳು ಬೆಳೆದಿವೆ.'

ಕಸ್ತೂರಬಾನ ಬಾಳೆಲ್ಲ ಇಂಥ ವಿರಸದಿಂದಲೇ ತುಂಬಿಹೋಗ ಲಿಲ್ಲ. ಗಂಡನ ಸತ್ಯಶೋಧನೆಯಲ್ಲಿ ಸಂತೋಷದಲ್ಲಿ ಪಾಲುಗಾತಿಯಾಗಿ ತನ್ನ ಬಾಳನ್ನು ಬೆಳಗಿಸಿಕೊಂಡಿದಾಳೆ. ತಾನು ತನ್ನವರು ಎಂಬ ಸಂಕುಚಿತ ಭಾವನೆಯನ್ನು ಬಹಳ ದಿನದ ಹಿಂದೆಯೇ ಕಳೆದುಕೊಂಡಿದಾಳೆ. ಪವಾ ಹಾರಿ ಬಾಬಾ ಎಂಬ ಸಾಧುವಿನ ಕತೆಯಲ್ಲಿ ಒಂದು ವಿಲಕ್ಷಣ ಘಟನೆ ಬರುತ್ತದೆ. ಆತನಿಗೆ ಒಂದು ದಿನ ಹಾವು ಕಚ್ಚಿತು. ಆಗ ಆ ಸಾಧು ಇದು ದೇವರು ಕಳಿಸಿದ ಸಂದೇಶ, ಇದು ಆ ಸಂದೇಶ ತಂದ ದೂತ ಎಂದು ಹೇಳಿದನಂತೆ. ಕಸ್ತೂರಬಾ ಕೂಡ ಹಾಗೆಯೇ ಗಾಂಧೀಜೀ ಕೊಟ್ಟ ಎಲ್ಲ ಕಷ್ಟವನ್ನೂ ಹಸಾದವೆಂದು ಸ್ವೀಕರಿಸಿದಳು. ಹಾಗೆ ಮಾಡಿ ಗಾಂಧೀಜಿಯ

ಮನ ಒಲಿಸಿದಳು, ಅವರಿಂದ ಮನ್ನಣೆ ಪಡೆದಳು. ಗಾಂಧೀಜೀ ಆಕೆಯನ್ನು ಗೌರವಿಸಿದ ಹಾಗೆ ಯಾರೂ ತಮ್ಮ ಹೆಂಡತಿಯನ್ನು ಮನ್ನಿಸಿರಲಾರರು. ಆಕೆ ತಮ್ಮ ಗುರು ಎಂದರು. ಅಹಿಂಸೆಯನ್ನು ತಮಗೆ ಕಲಿಸಿದ್ದು ಆಕೆಯ ಮೂಕ ತಪಸ್ಸು ಎಂದು ಸಾರಿ ಹೇಳಿದರು.

ಆಕೆಯ ತಪಸ್ಸು ಹಿಂದಿನ ಯಾವ ಹೆಸರಾದ ಪತಿವ್ರತೆಯ ತಪಸ್ಸಿಗೂ ಕಡಮೆಯಾಗಿಲ್ಲ. ಗಂಡನ ಜೊತೆಯಲ್ಲಿ ಹೆಜ್ಜೆಗೆ ಸರಿಯಾಗಿ ಹೆಜ್ಜೆ ಹಾಕುತ್ತ ಧರ್ಮದ ಹಾದಿಯಲ್ಲಿ ಸಹಧರ್ಮಚಾರಿಣಿಯಂತೆ ನಡೆದಿದ್ದಾಳೆ. ದಾರಿಯಲ್ಲಿ ಕಾಲು ನೋವಾಗಿರಬಹುದು. ಗಂಡನ ಗಾಳಿಗಾಲಿಗೆ ಸರಿಯಾಗಿ ಓಡಲಾರದೆ ನಿಂತು ನಿಂತು ಹಾದಿ ನಡೆದಿದ್ದಾಳು. ನಡೆವಾಗ ನೋವಿನಿಂದ ಬೇಸತ್ತು ಕಣ್ಣೀರ ಹೊಳೆ ಹರಿಸಿದ್ದಾಳು. ಆದರೆ ಹಿಡಿದ ಕೈ ಬಿಡದೆ ಗಾಂಧೀಜಿಯನ್ನು ಅನುಸರಿಸಿ ಬಂದಿದಾಳೆ. ಹೆಂಗಸಿಗೆ ಮನೆಯೆಂದರೆ ತುಂಬ ಪ್ರೀತಿ. ಆಕೆ ಮನೆಯ ಒಡತಿ; ಗೃಹಿಣಿಯೆಂದು ಹೆಸರಲ್ಲವೆ? ಗಾಂಧೀಜೀ ತಮ್ಮ ಮನೆಯನ್ನೇ ಮುರಿದರು; ಮುರಿದು ಆಶ್ರಮ ಮಾಡಿದರು. ಬ್ರಹ್ಮಚರ್ಯದ ವ್ರತ ತೊಟ್ಟು ತಮ್ಮ ಪತಿಪತ್ನೀ ಸಂಬಂಧವನ್ನೇ ಅಳಿಸಿದರು. ಹಾಗೆ ಮಾಡುವಾಗ ಕಸ್ತೂರಬಾನನ್ನು ಕೇಳಲೇ ಇಲ್ಲ. ರಾಮನೊಡನೆ ವನವಾಸಕ್ಕೆ ಹೋಗಬೇಕಾದರೆ ಲಕ್ಷ್ಮಣನು ಊರ್ಮಿಳೆಯನ್ನು ಕೇಳಿದನೆ, ಆಕೆಗೆ ಹೇಳಿದನೆ? ತಮ್ಮ ಸತ್ಯಶೋಧನೆಗೆ ಬ್ರಹ್ಮಚರ್ಯ ಅಗತ್ಯವೆಂದು ಹೊಳೆದ ಕೂಡಲೆ ಆ ನಿಯಮವನ್ನು ಹಿಡಿದರು. ಅಸ್ಪೃಶ್ಯತೆಯ ಮಾತೂ ಅಷ್ಟೆ. ತಮ್ಮ ಸತ್ಯಾಗ್ರಹ ಯುದ್ಧದಲ್ಲಿ ಕಸ್ತೂರಬಾ ಕೂಡ ಸೆರೆಮನೆಗೆ ಹೋಗಬೇಕು ಎನಿಸಿತು. ಕಸ್ತೂರಬಾ ಇದು ಯಾವುದರಲ್ಲೂ ಹಿಂಜರಿದಿಲ್ಲ. ಧೀರೆಯಂತೆ ಎಲ್ಲವನ್ನೂ ಸಾಧಿಸಿದಾಳೆ. ತನ್ನ ಸಾಮಾನ್ಯ ಜೀವನವನ್ನು ವೈರಾಗ್ಯದಿಂದ ಹದಗೊಳಿಸಿ ಸತ್ಯದಿಂದ ಹೊಸದಾಗಿ ಭವ್ಯವಾಗಿ ಕಟ್ಟಿಕೊಂಡಿದಾಳೆ. ಹಿಂದಿನ ಸೀತೆ ಚಂದ್ರಮತಿಯರಿಗಿಂತ ಇಂದಿನ ಈ ತಪಸ್ವಿನಿ ಯಾವುದರಲ್ಲಿ ಕಡಮೆ?

ಕಸ್ತೂರಬಾ ಅವರಿಗಿಂತ ಒಂದು ತೂಕ ಹೆಚ್ಚೆಂದರೆ ತಪ್ಪಾಗಲಾರದು. ಹೇಗೆಂದರೆ ಸೀತಾ ಚಂದ್ರಮತಿಯರ ಯೋಗ್ಯತೆಗೆ ಎಳ್ಳಷ್ಟು

ಕುಂದಕವಾಗುವದಿಲ್ಲ. ಅವರಿಗೆ ಒದಗಿದ ಪರೀಕ್ಷೆಗಿಂತ ಈಕೆಯು ಪಾಲಿಗೆ ಬಂದುದು ಹೆಚ್ಚು ವಿಷಮವಾದುದು, ಹೆಚ್ಚು ಕಠಿನವಾದುದು ಎಂದು ಅದರ ಭಾವ. ಶ್ರೀರಾಮ ಹರಿಶ್ಚಂದ್ರರಿಗೆ ತಮ್ಮ ಸತ್ಯ ಮಾರ್ಗದಲ್ಲಿ ನಡೆವಾಗ ತಮ್ಮ ದಾಂಪತ್ಯಜೀವನವನ್ನು ತಲೆ ಕೆಳಮಾಡಬೇಕಾದ ಅವಶ್ಯಕತೆ ಇರಲಿಲ್ಲ. ನಡುವೆ ಒದಗಿಬಂದ ಕುತ್ತು ಕಳೆದಮೇಲೆ ಮತ್ತೆ ಅವರ ಬಾಳು ಮೊದಲಿನ ನೆಲೆಗೇ ಬಂದು ನಿಂತಿತು. ಗಾಂಧೀಜಿಯದು ಹಾಗಲ್ಲ. ಇವರ ಸತ್ಯಮಾರ್ಗದಲ್ಲಿ ಮೊದಲಿನ ತಳವನ್ನು ಪೂರಾ ಕಿತ್ತಬೇಕಾಯಿತು. ಬುದ್ಧದೇವನಂತೆ ತಮ್ಮ ಮೊದಲಿನ ಬಾಳನ್ನು ಗಾಂಧೀಜೀ ತ್ಯಜಿಸಿಬಿಟ್ಟರು. ಜಗದ್ಧಿತದ ಹಾದಿ ಹಿಡಿದರು. ಈ ಗುರಿಯನ್ನು ಬೆನ್ನುಹತ್ತಿ ನಡೆದವರೆಲ್ಲ ತಪ್ಪದೆ ಸನ್ಯಾಸಿಗಳಾಗಿದಾರೆ. ಬುದ್ಧ ಭಗವಾನನು ಹರೆಯದ ಹೆಂಡತಿಯನ್ನು ಆಕೆಯ ತಪ್ಪು ಏನೂ ಇಲ್ಲದೆಯೆ ಆಕೆಗೆ ಹೇಳದೆ ಕೇಳದೆ ನಡುರಾತ್ರಿಯಲ್ಲಿ ಬಿಟ್ಟುಹೋದ. ರಾಮಾನುಜಾಚಾರ್ಯರು ತಿಳಿಯದೆ ಮಾಡಿದ ಸಣ್ಣ ತಪ್ಪಿಗಾಗಿ ಹೆಂಡತಿಯನ್ನು ಬಿಟ್ಟು ಸಂನ್ಯಾಸಿಯಾದರು. ದಾಸರು ಭಕ್ತರು ಎಲ್ಲರೂ ಅಷ್ಟೆ. ಗಾಂಧೀಜೀ ಸಂನ್ಯಾಸಿಯಾಗಿದ್ದೂ ದಾಂಪತ್ಯಜೀವನವನ್ನು ನಡೆಸಿದಾರೆ. ಬುದ್ಧದೇವನ ವೈರಾಗ್ಯದಾಹ ಇವರಿಗೆ ಇಲ್ಲದೆ ಇಲ್ಲ. ಆಚಾರ್ಯರ ಪತ್ನಿ ಮಾಡಿದಂಥ ಮಹಾಪರಾಧಗಳನ್ನು* ಕಸ್ತೂರಬಾ ಮಾಡದೆ ಇಲ್ಲ. ದಾಸರಿಗೆ ಇದ್ದ ದೇವರ ದರ್ಶನದ ಹಂಬಲ ಇವರಿಗೂ ಇದೆ. ಆದರೆ ಇವರ ಹೆಂಡತಿ ಉಳಿದಕಡೆ ನಡೆದಂತೆ ಇವರಿಗೆ 'ದಂಡಿಗೆ ಬೆತ್ತಹಿಡಿಸಿದ' ಳಿಲ್ಲ. ಕಸ್ತೂರಬಾ ಕೊಂಚ ಎಚ್ಚರ ತಪ್ಪಿದ್ದರೆ ಹಕ್ಕಿ ಹಾರಿಹೋಗಬಹುದಾಗಿತ್ತು. ಆಕೆ ಆ ತೂಕ ಕಾಯ್ದುಕೊಂಡಳು. ಹಕ್ಕಿ ಗೂಡುಬಿಟ್ಟು ಹಾರಿತು. ಆದರೆ ಜೊತೆ ಬಿಟ್ಟು ಹೋಗಲಿಲ್ಲ. ಗಾಂಧೀಜಿಯದು ಎಷ್ಟೋ ದೊಡ್ಡ ಜೀವವಾದರೂ ಕಸ್ತೂರಬಾನವನ್ನು ಇರದಿದ್ದರೆ ಈ ಸೊಬಗಿನ ಪವಾಡ ನಡೆಯುತಿತ್ತೋ ಇಲ್ಲವೋ!

ಈ ಮಾತು ಚೆನ್ನಾಗಿ ಅರ್ಥವಾಗಲು ಒಂದು ಸಂಗತಿ ಹೇಳಬಹುದು. ಗಾಂಧೀಜೀ ೧೯೩೦ರಲ್ಲಿ ಎರವಡಾ ಸೆರೆಮನೆಯಲ್ಲಿದ್ದರು. ಕಸ್ತೂರಬಾ

* ಯತಿರಾಜ ರಾಮಾನುಜ. ( ಮ. ಗ್ರಂ. ಭಾಂಡಾರ, ಧಾರವಾಡ )

ಸತ್ಯಾಗ್ರಹವನ್ನು ಪ್ರಚಾರಮಾಡುತ್ತ ನಾಡಿನ ನಾಲ್ಕೂ ಮೂಲೆಗಳನ್ನು ಸುತ್ತುತ್ತಿದ್ದಳು. ಆಕೆಯ ಆರೋಗ್ಯವೂ ಸರಿಯಾಗಿರಲಿಲ್ಲ. ಆಕೆಗೆ ತನ್ನ ಸೀರೆಗಾಗಿ ನೂಲು ನೂತುಕೊಳ್ಳಲು ಸಾಕಷ್ಟು ವೇಳೆ ಸಿಗುತ್ತಿರಲಿಲ್ಲ. ಗಾಂಧೀಜೀ ಇದನ್ನು ಊಹಿಸಿಕೊಂಡರು. ಆಕೆಗಾಗಿ ತಾವು ನೂತು ಆ ದಾರವನ್ನು ಕಳಿಸಿದರು ಸೀರೆ ಮಾಡಿಸಿಕೊಳ್ಳೆಂದು. ಸೆರೆಮನೆಯ ಅಧಿಕಾರಿಗಳು ಈ ಒಲವಿನ ಕಾಣಿಕೆಯನ್ನು ಕಸ್ತೂರಬಾಗೆ ಕಳಿಸಲು ಒಪ್ಪಲಿಲ್ಲ. ಗಾಂಧೀಜೀ ಬಹಳ ಹೇಳಿದರು. ಈ ನೂಲನ್ನು ಯಾವ ಸಭೆಗೂ ಒಯ್ಯುವುದಿಲ್ಲ, ಇದರಿಂದ ಯಾವ ವಿಧವಾದ ರಾಜಕೀಯ ಲಾಭವನ್ನೂ ಹೊಂದುವುದಿಲ್ಲ, ಕಸ್ತೂರಬಾಗೆ ಸೀರೆ ಮಾಡಿಸಿಕೊಡುವ ಸುದ್ದಿ ಕೂಡಾ ಯಾರಿಗೂ ತಿಳಿಯದಂತೆ ನೋಡಿಕೊಳ್ಳುತ್ತೇವೆ ಎಂತ.

ಗಾಂಧೀಜಿಯ ಒಲವಿನ ಕಾಣಿಕೆಯ ಸಂಗತಿ ಹಾಗೆ ಮುಚ್ಚಿ ಮರೆತು ಹೋಗುವದು ಸೆರೆಮನೆಯ ಅಧಿಕಾರಿಗಳಿಗೆ ಸರಿ ತೋರಲಿಲ್ಲ ವೇನೊ. ನೂಲನ್ನು ಕಳಿಸದೆ ತಡೆದರು. ಸುದ್ದಿಯೇನೋ ನಾಲಗೆ ಕುದುರೆಯ ರೆಕ್ಕೆಗಳಮೇಲೇರಿ ಸಾವಿರ ಹಳ್ಳಿಗೂ ಮುಟ್ಟಿತು.

ಸಾಧಾರಣವಾಗಿ ಕಸ್ತೂರಬಾ ವಿಷಯವಾಗಿ ಗಾಂಧೀಜೀ ಮಾತಾಡುವುದಿಲ್ಲ. ಎಲ್ಲಿಯಾದರೂ ಒಂದುಸಲ ಆ ತುಂಬು ಪ್ರೀತಿ ತುಳುಕುತ್ತದೆ. ಅದು ಹಾಗೆ ಚಿಮ್ಮಿದಾಗ ಎಷ್ಟು ಸೊಬಗು! ಉಪ್ಪಿನ ಸತ್ಯಾಗ್ರಹದಲ್ಲಿ ಗಾಂಧೀಜೀ ಸೆರೆ ಆದಾಗ ಕಸ್ತೂರಬಾ ಹತ್ತಿರ ಇರಲಿಲ್ಲ. ದೇಶಾಟನದಲ್ಲಿ ಇದ್ದರು. ಜೈಲಿಗೆ ಹೋಗುವಾಗ ಯಾರೋ ಗಾಂಧೀಜಿಯನ್ನು ಕೇಳಿದರು: ಕಸ್ತೂರಬಾಗೆ ಏನು ಹೇಳಬೇಕು? ಅವರು ನಗುತ್ತ ಹೇಳಿದರು. 'ಆಕೆಗೇನು ಹೇಳುವುದು? ಆಕೆ ಧೀರಸತಿ.'

ಕಾಮಿನೀ ಕಾಂಚನವನ್ನು ಬಿಡುವುದು ಎಂದರೆ ಅದನ್ನು ಬಿಟ್ಟು ಓಡುವದಲ್ಲ. ಮನಸಿನಿಂದ ಅದರ ಆಸೆಯನ್ನು ಕಿತ್ತೊಗೆಯುವುದು ಎನ್ನುತ್ತಿದ್ದರಂತೆ ರಾಮಕೃಷ್ಣ ಪರಮಹಂಸರು. ಅವರ ಬಾಳಿನಲ್ಲಿ ಆ ಸತ್ಯ ಕೊಂಚಮಟ್ಟಿಗೆ ಅನುಭವಕ್ಕೆ ಬಂತು. ಅದೇ ಹಾದಿಯಲ್ಲೇ ನಡೆದು ಗಾಂಧೀಜೀ–ಕಸ್ತೂರಬಾ ಇಬ್ಬರೂ ಹೊಸದೊಂದು ಬೆಳಕು ತೋರು

ತ್ತಿದಾರೆ. ರಾಮಕೃಷ್ಣ ಪರಮಹಂಸರು ಸನ್ಯಾಸದಲ್ಲಿ ಔದಾರ್ಯ ಬೆರಸಿ, ಶಾರದಾಮಣಿದೇವಿಗೆ ತಮ್ಮ ಸಾನ್ನಿಧ್ಯದಲ್ಲಿ ತಾವು ಕೊಟ್ಟು ಅಲ್ಲಿಯ ತನಕ ಜಗತ್ತು ನೋಡದ ಕೇಳದ ಒಂದು ಸೊಬಗನ್ನು ತೋರಿದರು. ಗಾಂಧೀಜೀ–ಕಸ್ತೂರಬಾ ದಂಪತಿಗಳು ದಾಂಪತ್ಯವನ್ನು ಕಾಮದ ಕೆಸರಿನಿಂದ ಎತ್ತಿ ವೈರಾಗ್ಯದ ತಳಹದಿಯ ಮೇಲೆ ನಿಲ್ಲಿಸಿ ನಿಜವಾದ ಧರ್ಮ ಪ್ರೇಮಗಳಿಂದ ಕಟ್ಟಿ ಹಿಂದೆಂದೂ ಕಾಣದ ಹೊಸ ಸೊಬಗನ್ನು ಬೀರುತ್ತಿದಾರೆ.



## ವಿಶ್ವಕುಟುಂಬಿ

ಬಾಪೂ ವಿಶ್ವಕುಟುಂಬಿ. ಎಲ್ಲವೂ ಬೇಕು. ಎಲ್ಲರೂ ಬೇಕು. ಅವರ ವ್ಯವಹಾರ ನಿತ್ಯ ಶತಾವಧಾನ ಇದ್ದಂತೆ. ಹತ್ತೂ ದಿಕ್ಕಿಗೆ ದಶರಥ ಚಕ್ರವರ್ತಿ ತನ್ನ ರಥ ಓಡಿಸುತ್ತಿದ್ದನಂತೆ. ಅದೂ ಒಂದು ಪರಾಕ್ರಮವೇ. ಬಾಪೂ ಕೋಟಿ ದಿಕ್ಕಿನಲ್ಲಿ ತಮ್ಮ ಮನಸ್ಸನ್ನು ಹರಿಸುತ್ತಾರೆ. ಕುಲಕೋಟಿ ಮಾತಿನಲ್ಲಿ ತೊಡಗುತ್ತಾರೆ. ಕೋಟಿ ಸಂಬಂಧ ಬೆಳೆಸುತ್ತಾರೆ. ಬೆಳಗ್ಗೆ ಗಾಳೀಸವಾರಿಗೆ ಹೊರಟರೆ ಹತ್ತು ಜನ ಹಿಂದೆಯೆ ಇರುತ್ತಾರೆ. ದಿನವೂ ಪ್ರಪಂಚದ ಮೂಲೆಮೂಲೆಗಳಿಂದ ಜನ ನೋಡಲು ಬರುತ್ತಾರೆ. ಒಬ್ಬೊಬ್ಬರದು ಒಂದು ದುಃಖ. ಒಬ್ಬೊಬ್ಬನದು ಒಂದು ಸಮಸ್ಯೆ. ಎಲ್ಲರಿಗೂ ಸಮಾಧಾನ ಬೇಕು.

ಚೀನಾ ದೇಶದ ಪ್ರತಿನಿಧಿಯಾಗಿ ಅಧ್ಯಕ್ಷ ತೈ ಚಿ ತೌ ಮೊನ್ನೆ ತಾನೆ ಸೇವಾಗ್ರಾಮಕ್ಕೆ ಬಂದಿದ್ದರು. ಗಾಂಧೀಜೀ ಅವರಿಗೂ ಅವರ ಜೊತೆಗಾರರಿಗೂ ಖಾದೀ–ಅಹಿಂಸೆಗಳ ಸಂದೇಶವನ್ನೇ ಹೇಳಿದರು. ಹೊರಟು ಬರುವಾಗ ತೈ ಚಿ ತೌ ಗಾಂಧೀಜಿಯ ದೀರ್ಘಾಯುವನ್ನು ಕೋರಿದರು.

'ಚೀಣದ ಯೋಗಕ್ಷೇಮಕ್ಕಾಗಿ, ಹಿಂದುಸ್ಥಾನದ ಯೋಗಕ್ಷೇಮಕ್ಕಾಗಿ–ಅಷ್ಟೇಕೆ ಇಡೀ ಮಾನವಕೋಟಿಯ ಯೋಗಕ್ಷೇಮಕ್ಕಾಗಿ

ನಿಮಗೆ ದೀರ್ಘಾಯುವಿರಲಿ ಎಂದು ಬೇಡುತ್ತೇನೆ, ನಿಮ್ಮ ಮತ್ತು ನಿಮ್ಮ ಕುಟುಂಬದ ಯೋಗಕ್ಷೇಮಕ್ಕಾಗಿ ಬೇಡುತ್ತೇನೆ' ಎಂದರು.

ಗಾಂಧೀಜೀ ನಗುತ್ತ 'ನನ್ನ ಕುಟುಂಬ ದೊಡ್ಡದು. ೩೫ ಕೋಟಿ ಜನರದು' ಎಂದರು.

ಶ್ರೈ ಚಿ ತೌ ಮುಂದುವರಿಸಿದರು. 'ಏಕೆ ಇಡೀ ಮಾನವ ಜಾತಿಯೇ ನಿಮ್ಮ ಕುಟುಂಬ' ಎಂದರು.

'ನಿಜ. ಈ ೩೫ ಕೋಟಿ ಕುಟುಂಬದ ಯೋಗಕ್ಷೇಮವನ್ನು ನಾನು ಹೊರಬಲ್ಲೆನಾದರೆ ನೀವು ಹೇಳಿದ ಹಾಗೂ ಅಂದೇನು' ಎಂದರು ಗಾಂಧೀಜೀ.

ಸರೋಜಿನೀದೇವಿ ಒಂದು ಕಡೆ ಹೇಳಿದಾರೆ. 'ನಮ್ಮ ದೇಶದಲ್ಲಿ ಇಬ್ಬರು ಮಹಾತ್ಮರಿದಾರೆ. ಒಬ್ಬರು ರಮಣ ಮಹರ್ಷಿ, ಇನ್ನೊಬ್ಬರು ಗಾಂಧೀಜೀ. ಅವರು ಎಲ್ಲರಿಗೂ ಶಾಂತಿ ಕೊಡುತ್ತಾರೆ. ಇವರು ಯಾರನ್ನೂ ಶಾಂತವಾಗಿ ಕೂಡಗೊಡುವುದಿಲ್ಲ. ಇಬ್ಬರದೂ ಒಂದೇ ಉದ್ದೇಶ.'

ಮಹರ್ಷಿ ಅವಧೂತ ಮಾರ್ಗದ ಅದ್ವೈತಯೋಗಿ. ಗಾಂಧೀಜೀ ಅನಾಸಕ್ತಿ ಮಾರ್ಗದ ಕರ್ಮಯೋಗಿ. ಅವರಿಗೆ ಮನಸ್ಸು ಹಗೆ. ಮನಸ್ಸಿನಿಂದಲೆ ಬಂಧನ, ಮನಸ್ಸಿನಿಂದಲೆ ಮೋಕ್ಷ. ಮನಸ್ಸನ್ನು ನಾಶಗೊಳಿಸುವ ವಿಚಾರ ಮಾರ್ಗ ಮಹರ್ಷಿಯದು. ಗಾಂಧೀಜಿಗೆ ಆಸಕ್ತಿ ಹಗೆ. ಕರ್ಮದಲ್ಲಿ ಆಸಕ್ತರಾದರೆ ಬಂಧನ. ಅನಾಸಕ್ತರಾದರೆ ಮೋಕ್ಷ. ಆಸಕ್ತಿಯನ್ನು ನಾಶಗೊಳಿಸುವ ನಿಷ್ಕಾಮಯೋಗ ಇವರದು. ಇಬ್ಬರ ಹಾದಿಗೂ ಗಾವುದ ಗಾವುದ ಅಂತರವಿದ್ದಂತೆ ಕಂಡರೂ ಅಂತರವಿಲ್ಲ. ಇಬ್ಬರ ಗುರಿಯೂ ಒಂದೇ. ಅವರಿಗೆ ಜಗತ್ತು ಸುಳ್ಳಾದುದರಿಂದ ಮನಸ್ಸು ಬಂಧನ. ಇವರಿಗೆ ಜಗತ್ತು ಸತ್ಯವಾದುದರಿಂದ ಆಸಕ್ತಿ ಬಂಧನ. ಇಬ್ಬರೂ ಮಾಡುವುದು ಒಂದೇ ತಮಗೆ ಬಂಧನವಾದುದನ್ನು ಕಳೆಯುವುದು.

ಆಸಕ್ತನಾದವನಿಗೆ ತನ್ನ ಮನೆ ಮಕ್ಕಳ ಚಿಂತೆ. ಉದಾರಚರಿತರಾದ

ಅನಾಸಕ್ತರಿಗೆ ಪ್ರಪಂಚವೆಲ್ಲ ಅವರ ಕುಟುಂಬವೇ.* ಎಲ್ಲರ ಪಾಪ ಪುಣ್ಯವೂ ಅವರದೇ. ಗಾಂಧೀಜಿಯ ದಿನಚರಿಯಲ್ಲಿ ಒಂದು ನಿಮಿಷವಾದರೂ ವಿರಾಮವಿಲ್ಲ. ಸದಾ ಯಂತ್ರ ತಿರುಗುತ್ತಲೇ ಇರುತ್ತದೆ.† ಇದೆಲ್ಲ ಗದ್ದಲದ ನಡುವೆ ಅವರ ಧ್ಯಾನ–ಈಶ್ವರಪ್ರಣಿಧಾನಗಳು ನಡೆದೇ ಇರುತ್ತವೆ. 'ಒಂದು ಗಳಿಗೆಯೂ ದೇವರನ್ನು ಬಿಟ್ಟಿರಲಾರದ' ಜೀವ ಅವರದು.

ಯಾವ ಕೆಲಸವನ್ನು ಮಾಡಿದರೂ ಅದನ್ನು ಸರ್ವಾಂಗ ಪರಿಪೂರ್ಣತೆಯ ದೃಷ್ಟಿಯಿಂದ ಮಾಡುತ್ತಾರೆ. ಪರ್ಣಕುಟಿಯಲ್ಲಿ ಒಂದು ಕಣವಾದರೂ ಧೂಳು ಇದ್ದೀತೇ? ಯಾರೂ ಎದುರಿಗಿಲ್ಲದಿದ್ದರೆ ತಾವೇ ಗುಡಿಸುತ್ತಾರೆ. ಅವರು ಕಾಗದಗಳನ್ನು ಮಡಿಸುವುದೂ ಹರಿಯುವುದೂ ಒಂದು ಸೊಗಸು. ಪತ್ರ ಬಂದರೆ ಅದರಲ್ಲಿ ಬರೆಯದೆ ಉಳಿದ ಬಿಳಿಯ ಕಾಗದ ಹರಿದು ಉಪಯೋಗಿಸುತ್ತಾರೆ. ಒಂದೇ ಮಗ್ಗಲು ಬರೆದ ಕಾಗದದ ಹಿಮ್ಮಗ್ಗಲಿಗೆ ಬರೆಯುತ್ತಾರೆ. ಗುಂಡು ಸೂಜಿಗಳನ್ನು ಜೋಪಾನ ಮಾಡುತ್ತಾರೆ. ಅವರು ಬರೆದ ಕೆಲವು ಮುಖ್ಯವಾದ ಬರೆಹಗಳು ಹಾಗೆ ಹಿಮ್ಮಗ್ಗಲಿಗೆ ಬರೆಯಲ್ಪಟ್ಟಿವೆ. ತಮಗೆ ಬಂದ ಲಕೋಟೆಗಳನ್ನು ಕತ್ತರಿಸಿ ತಿರುವಿಹಾಕಿ ಅವನ್ನೇ ಮತ್ತೆ ಲಕೋಟೆಗಳಾಗಿ ಮಾಡುತ್ತಾರೆ.

ಬಾಪೂಗೆ ದಿನವೂ ಬರುವ ಕಾಗದ ಪತ್ರ ಒಂದು ಹೊರೆ. ಸಾವಿರ ಕಡೆಯಿಂದ ಕಾಗದ. ಈಗಂತೂ ಗಾಂಧೀಜಿಗಾಗಿಯೇ ಸೇವಾಗ್ರಾಮದಲ್ಲಿ ಒಂದು ಅಂಚೆಮನೆಯಾಗಿದೆ. ಸಾವಿರ ತರದ ಕಾಗದ ಬರುತ್ತವೆ. ಒಬ್ಬರು ಹರಿಜನ ಸೇವೆಯಲ್ಲಿ ಸಲಹೆ ಕೇಳುತ್ತಾರೆ. ಒಬ್ಬರು ಬ್ರಹ್ಮಚರ್ಯ

---

* ಅಯಂ ನಿಜೋ ಪರೋ ಗಣನಾ ಲಘುಚೇತಸಾಂ ।
ಉದಾರಚರಿತಾನಾಂತು ವಸುಧೈವ ಕುಟುಂಬಕಂ ॥
ಭವಭೂತಿ : ಉತ್ತರರಾಮಚರಿತೆ.

ತನ್ನ ತಾನರಿದಂಗೆ ಭಿನ್ನಭಾವನೆಯಿಲ್ಲ ।
ತನ್ನವರಿಲ್ಲ ಪರರಿಲ್ಲ ತ್ರೈಭುವನ ।
ತನ್ನೊಳಗಿಹುದು ಸರ್ವಜ್ಞ ॥

† ವರ್ಧಾಯಾತ್ರೆ: 'ಆಶ್ರಮದಲ್ಲಿ–ಗಾಂಧೀಜಿ ಒಂದುದಿನ' ಎಂಬ ಭಾಗಗಳನ್ನು ಓದಿದರೆ ಆ ಚಿತ್ರ ಕಣ್ಣಿಗೆ ಕಟ್ಟುತ್ತದೆ.

ಪಾಲನೆಯಲ್ಲಿ ತಮ್ಮ ಕಷ್ಟ ತಿಳಿಸುತ್ತಾರೆ. ತಮ್ಮ ಆಧ್ಯಾತ್ಮ ಜೀವನದ ಅಂತರಂಗವನ್ನು ಬಿಚ್ಚಿಟ್ಟು ಬೆಳಕು ಕೋರುವವರು ಕೆಲವರು. ರಾಜ ಕಾರಣದಲ್ಲಿ, ವ್ಯವಹಾರದಲ್ಲಿ ಅವರ ಹಿತವಚನ ಬೇಡಿದವರು ಕೆಲವರು. ಯಾರ ಮೇಲೋ ದೂರು ಹೇಳುವವರು ಕೆಲವರಾದರೆ ಇವರನ್ನೇ ನಿಂದಿ ಸುವವರು ಕೆಲವರು. ಇವರ ಸಿದ್ಧಾಂತ ವಿಮರ್ಶೆ ಮಾಡುವವರು ಒಬ್ಬರು. ಕಾಂಗ್ರೆಸ್ಸಿನ ನೀತಿಖಂಡನೆ ಮಾಡುವವರು ಹಲವರು. ಇವರೆಲ್ಲರಿಗೂ ಸರಿ ಯಾಗಿ ಹದವಾಗಿ ಉತ್ತರಬರೆಯಬೇಕು. ಸಂದರ್ಭಕ್ಕೆ ತಕ್ಕಂತೆ ಹಿತ ವಚನವೋ ಮೆಚ್ಚುಗೆಯ ಮಾತೋ, ಬುದ್ಧಿವಾದವೋ ವ್ಯವಹಾರದ ಉತ್ತರವೋ ಬರೆಯಬೇಕು.

ಏನೇ ಬರೆಯಲಿ ಅದರಲ್ಲಿ ಒಂದು ಬಗೆಯ ಸಲಿಗೆ ಇದೆ; ಆತ್ಮೀ ಯತೆ ಇದೆ. ಆ ಸಲಿಗೆಗೆ ಸೋತು ಹೋಗದವರಿಲ್ಲ. ಎಂಥ ನಾಲ್ಕು ಸಾಲಿನ ಕಾಗದವೇ ಆಗಲಿ ಅದರಲ್ಲಿ ಆ ಆದರ ಹೊಳೆಯುತ್ತದೆ. ಆ ನುಡಿ, ಆ ಸಂಬೋಧನೆ, ಆ ಉತ್ತರ—ಎಲ್ಲದರಲ್ಲೂ ಒಂದು ಕಲೆ ಇದೆ. ಆ ಕಲೆ ರಾಜಕಾರಣಿಗಳ ಬೆಡಗಲ್ಲ; ವ್ಯಾಪಾರಿಗಳ ಲೌಕಿಕ ಮರ್ಯಾದೆಯಲ್ಲ. ಆ ಕಲೆ ಉದಾರಚರಿತೆಯದು; ವಿಶ್ವಕುಟುಂಬದ ಭಾವನೆಯ ಫಲ.

ಒಬ್ಬ ದೇಶಸೇವಕನನ್ನು ದೂರದ ಉತ್ಕಲದೇಶಕ್ಕೆ ಕಳಿಸಿದಾರೆ. ಅಲ್ಲಿ ಪ್ರಾಂತಿಭೇದಿ ಉಪದ್ರವ ಪಕ್ರಿಸಿದೆ. ಅವನಿಗೆ ನಾಲ್ಕು ಹಿತವಚನ ಹೇಳಿ ಸಂತಯಿಸಬೇಕು. 'ಪ್ರಾಂತಿಭೇದಿ ಉಪದ್ರವಕ್ಕೆ ಹೆದರಬೇಡ. ಸರಿ ಯಾದ ನೇಮದಿಂದ ಜೋಕೆಯಾಗಿರು. ಮನುಷ್ಯ ಪ್ರಯತ್ನಕ್ಕೆ ಸಾಧ್ಯ ವಾದಷ್ಟು ಜಾಗರೂಕತೆ ಮಾಡಿಯೂ ಕೂಡ ಒಂದು ವೇಳೆ ಅನಿಷ್ಟವೇ ಪ್ರಾಪ್ತವಾದರೆ ನಾವು ಮಾಡುವುದಾದರೂ ಏನು? ಈ ಲೋಕದಲ್ಲಿ ವಿಪತ್ತೇ ಇಲ್ಲದ ತಾವು ಉಂಟೆ? ನೋಡು. ನಿನ್ನ ಮನಸ್ಸಿಗೆ ಸರಿತೋರಿ ದಂತೆ ಮಾಡು.'

ಇನ್ನೊಬ್ಬ ಸಾಧಕ. ತನ್ನನ್ನು ತಾನು ಗೆಲ್ಲಲು ಪ್ರಯತ್ನ ಮಾಡುವ ಆಧ್ಯಾತ್ಮಜೀವಿ. ಅವನಿಗೆ ಬರೆದರು.

'ನಮ್ಮೊಳಗಿನ ರಾಗದ್ವೇಷಗಳ ಹತ್ತು ತಲೆಯ ಹುಳು ರಾವಣ ನನ್ನು ನಾವು ಶ್ರೀರಾಮನ ಬಲದಿಂದ ಗೆಲ್ಲಬೇಕು. ಶ್ರೀರಾಮನನ್ನು

ಸಂಪೂರ್ಣವಾಗಿ ನಂಬಿ ಆವನ ಅನುಗ್ರಹಕ್ಕೆ ಕೈಯೊಡ್ಡಿ ಪ್ರಸನ್ನರಾದರೆ ನಮಗೆ ಗೆಲವು ಖಂಡಿತ. ಮುಖ್ಯವಾಗಿ ಆತ್ಮವಿಶ್ವಾಸ ಧೈರ್ಯಗಳನ್ನು ಕಳೆದುಕೊಳ್ಳಬಾರದು. ಆಹಾರ ನಿಯಮ ಬೆಳೆಸು. ನಾಲಗೆಯ ಚಪಲಕ್ಕೆ ಸೋಲಬೇಡ.'

ಮತ್ತೊಬ್ಬರು ವ್ರತಹಿಡಿದು ನೂಲುತ್ತಿದಾರೆ. ದಿನವೂ ಮಾಡಿದರೂ ಅವರಿಗೆ ಸಮಾಧಾನವಿಲ್ಲ.

'ಬರೀ ನೂತರೆ ಸಾಲದಯ್ಯ. ಯಜ್ಞಕರ್ಮ ಎಂದು ತಿಳಿದು ನೂಲುವುದಕ್ಕೂ ವಿನೋದಕ್ಕಾಗಿ ನೂಲುವುದಕ್ಕೂ ಹಸ್ತಿಮಶಕಾಂತರ. ನೂಲುವಾಗ ಮೌನವ್ರತ ಹಿಡಿಯುವುದು ಒಳ್ಳೆಯದು. ಹಾಗೆ ಮಾಡಿ ನೋಡು. ಆದರಿಂದ ಮನಶ್ಶಾಂತಿ ಸಿಗುತ್ತದೆ. ದಿನವೂ ಒಂದು ಗೊತ್ತಾದ ಹೊತ್ತಿಗೆ ನೂಲುವ ಪದ್ಧತಿ ಇಟ್ಟುಕೊಂಡರೆ ಇತರ ಕೆಲಸಗಳಲ್ಲೂ ಒಂದು ಕ್ರಮ, ಒಂದು ಹದ ಬರುತ್ತದೆ. ಬಾಳು ಹಸನಾಗಿ ಒಂದು ಕ್ರಮಕ್ಕೆ ಹೊಂದಿಕೊಳ್ಳುತ್ತದೆ.'

ಖಾದೀ ಸೇವಕ ಒಬ್ಬನಿಗೆ ತನ್ನ ಮನೆಯವರೆಲ್ಲ ಖಾದೀ ಉಡಲಿ ಎಂಬ ಬಯಕೆ. ಅವನ ತಾಯಿ ಅವನಿಗೆ ಮಣಿಯಲಿಲ್ಲ. ಏನು ಮಾಡ ಬೇಕು. ಬಾಪೂ ಅವನಿಗೆ ಬರೆದರು:

'ನಿಮ್ಮ ತಾಯಿಗೆ ಇಷ್ಟವಿಲ್ಲದೆ ಇದ್ದರೆ ಖಾದೀ ಉಡು ಎಂದು ಆಕೆಯನ್ನು ಬಲವಂತ ಮಾಡಬೇಡ. ನಿನಗೆ ಖಾದಿಯಲ್ಲಿ ಇರುವ ಶ್ರದ್ಧೆ ನಿಜವಾದುದೂ ಬಲವಾದುದೂ ಆದರೆ ಅದರ ಪ್ರಭಾವ ತಾನೇ ಆ ಕೆಲಸ ಮಾಡೀತು!'

ಇನ್ನೊಬ್ಬರಿಗೆ ಕೋಮುವಾರು ಕಲಹಗಳ ವಿಷಯ.

'ಕೋಮುವಾರು ಕಲಹಗಳಿಗೆ ನನ್ನ ರಾಮಬಾಣೌಷಧಿ ಗೊತ್ತೇ ಇದೆಯಲ್ಲ. ಎರಡು ಪಕ್ಷಗಳಲ್ಲಿ ಯಾವುದಾದರೂ ಒಂದು ಪಕ್ಷ ದ್ವೇಷ ಬುದ್ಧಿಯನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟು, ಇನ್ನೊಂದು ಪಂಗಡ ದವರು ಮಾಡಿದ ಅನ್ಯಾಯವನ್ನು ಸಮಾಧಾನದಿಂದ ಸೈರಿಸಿಕೊಂಡರೆ ಕೊನೆಗೆ ಇಬ್ಬರ ನಡುವೆ ಗೆಳೆತನ ಬೆಳೆದೀತು. ಅನ್ಯಾಯ ಕಡೆಯಾಗಿ

ಎರಡೂ ಕಡೆಯವರು ಧೀರರಾದಾರು. ಈಗಂತೂ ಇಬ್ಬರೂ ಶುದ್ಧ ಹೇಡಿಗಳಾಗಿದ್ದಾರೆ.'

ಇವು ಒಂದೇ ದಿನ ಬರೆದ ಕೆಲವು ಕಾಗದ. ಎಲ್ಲದರಲ್ಲೂ ಆ ವಾತ್ಸಲ್ಯದ ಕೈವಾಡ. ಈ ತೆರದ ಅಂತಃಕರಣ ಅವರದೇ ಸೊತ್ತು. ಹೊಸಬರು ಹಳಬರು ಎನ್ನದೆ ಈ ಧಾರಾಳವನ್ನು ತೋರಿಸುತ್ತಾರೆ. ಅಂತಲೇ ಅವರನ್ನು ಬಾಪು ಎಂದು ಕರೆಯುವುದು. ಬಾಪು ಎಂದರೆ ತಂದೆ. ಗಾಂಧೀಜಿಯ ನಡತೆಯಲ್ಲಿ ಆ ಗೌರವಕ್ಕೆ ಅವರು ನಿಜವಾಗಿ ತಕ್ಕವರು ಎಂದು ತಿಳಿದು ಬರುತ್ತದೆ. ಗಾಂಧೀಜೀ ಅವರಿಗೆ ತುಂಬಾ ಬೇಕಾದವರು. ವಲ್ಲಭಭಾಯಿಯನ್ನು ಕಂಡರೆ ಅವರಿಗೆ ತುಂಬಾ ಪಕ್ಷಪಾತ. ರಾಜಗೋಪಾಲಾಚಾರ್ಯರ ಮೇಲೆ ಬಹಳ ವಿಶ್ವಾಸ. ಹೀಗೆ ಜನ ಲೆಕ್ಕ ಹಾಕುವುದು ಉಂಟು. ಬಾಪೂವನ್ನು ಕೊಂಚಮಟ್ಟಿಗಾದರೂ ಬಲ್ಲವರಿಗೆ ಆ ವಿಶ್ವಾಸದ ಗುಟ್ಟು ಗೊತ್ತಾಗುತ್ತದೆ. ತಮ್ಮ ಹಾದಿಯಲ್ಲಿ ಇರುವವರೆಗೆ ಎಲ್ಲರ ಮೇಲೂ ಅವರಿಗೆ ಅಭಿಮಾನ. ಬೇರೆ ದಾರಿ ಹಿಡಿದರೆ ಆ ಅಭಿಮಾನಕ್ಕೆ ಬೇಲಿ ಹಾಕುತ್ತಾರೆ. ವಲ್ಲಭಭಾಯಿಯನ್ನು ಜನ ಹುಚ್ಚಾಪಚ್ಚಾ ಟೀಕಿಸಿದಾಗ 'ವಲ್ಲಭಭಾಯಿಯ ಗೌರವವೇ ನನ್ನ ಗೌರವ. ಆತ ಕೆಳಕ್ಕೆ ಬಿದ್ದರೆ ನಾನೂ ಬಿದ್ದ ಹಾಗೆಯೆ' ಎಂದರು. ಜನಜಂಗುಳಿ ಹೋ ಎಂದಿತು. ಅದೇ ಭಾಯಿ ಅಹಿಂಸೆಯನ್ನು ಒಪ್ಪದೆ ರಾಜ್ಯತಂತ್ರದಲ್ಲಿ ಕೊಂಚ ಹಿಂಸೆಯೂ ಬೇಕು ಎಂದಾಗ–'ಭಾಯಿಗೆ ಹುಚ್ಚು ಹಿಡಿದಿದೆ' ಎಂದರು. ಸರದಾರರನ್ನೂ ರಾಜಗೋಪಾಲಾಚಾರ್ಯರನ್ನೂ ಕಟುವಾಗಿ ಟೀಕಿಸಿದರು. ೨೦ ವರ್ಷಗಳ ಗೆಳೆತನ ಅದು. ಅದಕ್ಕೆ ಎಷ್ಟು ಬೇಕು ಮಾತು. ರೋಮ್ ಚಕ್ರವರ್ತಿ ಸೀಜರ್‌ನನ್ನು ದುಷ್ಟರು ಇರಿದು ಕೊಂದರು. ಆ ಗುಂಪಿನಲ್ಲಿ ಚಕ್ರವರ್ತಿಯ ಬಲಗೈಯಾದ ಬ್ರೂಟಸ್ ಕೂಡ ಇದ್ದ. ಅವನೂ ಇರಿದ. ಆಗ ಸೀಜರ್ ಏನೆನ್ನಬೇಕು? 'ಬ್ರೂಟಸ್! ನೀನೂ ಕೂಡ' ಎಂದ. ಅಷ್ಟೆ. ಜಗತ್ತಿನ ಎಲ್ಲ ಕಟುತ್ವವೂ ಆ ಮಿದುವಾದ ಮಾತಿನಲ್ಲಿ ಇದೆ.

ಬಾಪೂವಿನ ಕುಟುಂಬಭಾವನೆ ಸಂಕುಚಿತವಾದದ್ದಲ್ಲ. ಅವರಿಗೆ ನಾಲ್ಕು ಜನ ಮಕ್ಕಳಿದ್ದಾರೆ. ಸೊಸೆಯರೂ ಇದ್ದಾರೆ. ಆದರೆ ಇವರ

ಸೇವಾಗ್ರಾಮದ ಕುಟುಂಬದಲ್ಲಿ ಕಸ್ತೂರಬಾನನ್ನು ಬಿಟ್ಟರೆ ಇವರ ಮನೆ ತನದವರು ಯಾರೂ ಇಲ್ಲ. ರಾಜಕೀಯ ಪ್ರಪಂಚದಲ್ಲಿ ಹತ್ತಾರು ನಾಯಕರ ಹೆಸರು ಅವರ ಶಿಷ್ಯಕೋಟಿಯಲ್ಲಿ ಪ್ರಧಾನವಾಗಿ ಬರುತ್ತವೆ. ಆದರೆ ಬುದ್ಧನನ್ನು ಆನಂದವು ಅನುಸರಿಸಿದಂತೆ, ಶ್ರೀರಾಮನನ್ನು ಲಕ್ಷ್ಮಣ ಅನುಸರಿಸಿದಂತೆ, ರಾಮಾನುಜಾಚಾರ್ಯರನ್ನು ಕೂರೇಶ ಸೇವಿಸಿದಂತೆ ಬಾಪುವನ್ನು ಅನುಸರಿಸುವವರು ಆ ಪಟ್ಟಿಯಲ್ಲಿ ಬರುವುದಿಲ್ಲ. ಬಾಪುವಿನ ಅಭಿಮಾನ ಎಷ್ಟು ಮಿದುವೋ ಅಷ್ಟು ಕಠಿನ. ಒಂದು ಸಮಯದಲ್ಲಿ ಹೂವಿನ ಹಾಗೆ ಇದ್ದವರು ಮತ್ತೊಂದು ಹೊತ್ತಿನಲ್ಲಿ ವಜ್ರದಂತೆ ಕಠಿನವಾಗಿ ಬಿಡುತ್ತಾರೆ. ತಮ್ಮ ಹಿರಿಯ ಮಗ ಹೀರಾಲಾಲನ ಬಗ್ಗೆ ಅವರು ತೋರಿದ ರೀತಿ ಸಾಲದೆ? ಕಸ್ತೂರಬಾನನ್ನೇ ಬೇರೆ ಇದ್ದುಬಿಡು ಎಂದು ಹೇಳಲಿಲ್ಲವೇ? ಅಂಥವರು ಡಾಕ್ಟರ್ ಪಟ್ಟಾಭಿ ಸೀತಾರಾಮಯ್ಯ ಕಾಂಗ್ರೆಸ್ ಅಧ್ಯಕ್ಷ ಪದವಿಯ ಪೋಟಿಯಲ್ಲಿ ಸೋತಾಗ 'ಪಟ್ಟಾಭಿಯಲ್ಲ ಸೋತದ್ದು; ನಾನು' ಎಂದು ಆ ಅವಮಾನವನ್ನು ತಮ್ಮ ತಲೆಯ ಮೇಲೆ ಹೊತ್ತರು. ಇದಕ್ಕೆಲ್ಲ ಕಾರಣ ಅವರಿಗೆ ಸತ್ಯದಲ್ಲಿ ಇರುವ ಆಸಕ್ತಿ. ಉಳಿದುದರಲ್ಲಿ ಇರುವ ಅನಾಸಕ್ತಿ. ದೇಹ-ರಕ್ತ ಅಲ್ಲ ಅವರ ಕುಟುಂಬದ ಭಾವನೆಯ ಆಧಾರ. ಸತ್ಯ-ಅಹಿಂಸೆ.

ಈ ಭಾವನೆಗೆ ಹೊಸತು-ಹಳದು ಎಂಬ ಭೇದವಿಲ್ಲ. ಹಿರಿದು ಕಿರಿದು ಎಂಬ ತೂಕವಿಲ್ಲ. ಕಳೆದ ವರ್ಷ ಬಾಪು ಗಡಿನಾಡಿಗೆ ಹೋಗಿದ್ದರು. ಆಬಟಾಬಾದಿನಲ್ಲಿ ತಂಗಿದ್ದರು. 'ಪ್ರವಾಸದಲ್ಲಿ ಪತ್ರವ್ಯವಹಾರ ಸರಿಯಾಗಿ ಸಾಗುವುದಿಲ್ಲ. ಎಷ್ಟೋ ಪತ್ರ ಉತ್ತರ ಕೊಡದೆ ನಿಂತು ಹೋಗುತ್ತವೆ. ಬಾಪೂಜಿಯ ಪ್ರವಾಸದ ಗದ್ದಲ-ಅವಸರಗಳನ್ನು ನೋಡಿದರೆ ಗೊತ್ತಾಗುತ್ತದೆ ವಿರಾಮಕ್ಕೆ ಪ್ರಪಂಚದಲ್ಲಿ ಏನು ಬೆಲೆ ಎಂಬುದು. ಅವರಿಗೆ ಅರವತ್ತು ತುಂಬಿದಾಗ-ಹುಟ್ಟಿದ ಹಬ್ಬದ ದಿನ-ಸಂಯುಕ್ತ ಪ್ರಾಂತದಲ್ಲಿ ಅವರು ಪ್ರವಾಸ ಮಾಡುತ್ತಿದ್ದರು. ಆ ದಿನ ಬೆಳಗಿನ ಜಾವ ೩ ಗಂಟೆಗೆ ಫೈಜಾಬಾದ್ ಬಿಟ್ಟರು. ೫ ಗಂಟೆಗೆ ಜಾನ್‌ಪುರ. ೬ ಗಂಟೆಗೆ ದಾರಿಯಲ್ಲೇ ಮೋಟಾರಿನಲ್ಲಿ ಫಲಾಹಾರ. ಒಕ್ಕೆ ಒಂದು ಕಡೆ ಹೆಂಗಸರ

ಸಭೆ. ಮತ್ತೆ ಜಾನ್‌ಪುರದಲ್ಲಿ ದೊಡ್ಡ ಸಭೆ, ಮಾನಪತ್ರ. ೮ ಗಂಟೆಗೆ ಅಲ್ಲಿಂದ ಕಾಶಿಗೆ. ನಡುವೆ ಹಾದಿಯಲ್ಲಿ ಒಂದು ಕಡೆ ನಿಧಿ ಸ್ವೀಕಾರಕ್ಕಾಗಿ ಮೂರು ನಿಮಿಷ ಕಾರ್ ನಿಲ್ಲಿಸಿದರು. ದಾರಿಯುದ್ದಕ್ಕೂ ಕಾಗದಗಳನ್ನು ಓದುತ್ತ ಕೂತಿದ್ದವರು ಹಾಗೆಯೆ ಮೂಗಿನ ಮೇಲೆ ಕನ್ನಡಕ ಇಟ್ಟೇ ನಿದ್ದೆಹೋಗಿದ್ದರು. ಜನ ತುಂಬ ಗದ್ದಲ ಮಾಡಿದರು ಆದರೂ ಏಳಲಿಲ್ಲ. ಸರಿ, ನಿಧಿ ತೆಗೆದುಕೊಂಡು ಮುಂದೆ ಬಾರಾಗಾಂವ್‌ಗೆ. ಅದನ್ನು ಮುಗಿಸಿ ಹತ್ತು ಗಂಟೆಗೆ ಕಾಶಿ ಮುಟ್ಟಿದರು. ಲೆಕ್ಕವಿಲ್ಲದಷ್ಟು ತಂತಿ, ಕಾಗದ ಅಲ್ಲಿಗೆ ಬಂದಿದ್ದವು. ಸಾವಿರಾರು ಜನ ದರ್ಶನಕ್ಕೆ ಮಾತಿಗೆ ಕಾದಿದ್ದರು. ಬಿಡುವೇ ಇಲ್ಲ. ಸಂಭಾಷಣೆ ಆಯಿತು. ಸೂತು ಆಯಿತು. ೩ ಗಂಟೆಗೆ ಗಾಜೀಪುರಕ್ಕೆ. ನಡುವೆ ಗೋಮತಿ ನದಿಯನ್ನು ದಾಟಿದರು. ಕಾರಿನಲ್ಲೇ ಕಸ್ತೂರಬಾ; ಕಸ್ತೂರಬಾ ಜೊತೆಗೇ ಊಟದ ಪೆಟ್ಟಿಗೆ. ಸಂಜೆ ಆದ ಮೇಲೆ ಬಾಪು ಊಟ ಮಾಡರು. ೫ ಗಂಟೆಗೆ ದಾರಿಯಲ್ಲಿ ಕಾರಿನಲ್ಲೇ–ನಿಲ್ಲಿಸಿ ಅಲ್ಲ, ಹೋಗುವಾಗಲೇ–ಊಟ. ಅಷ್ಟು ಹೊತ್ತಿಗೆ ಸೈದಾಪುರ. ಅಲ್ಲಿಂದ ಗಾಜೀಪುರಕ್ಕೆ ಹೊರಟರೆ ಊರಿಗೆ ೩ ಮೈಲು ದೂರದಲ್ಲಿ ಪೆಟ್ರೋಲು ಮುಗಿಯಿತು. ಗಾಡಿ ನಡೆಸುವವನಿಗೆ ಮುಂದಾಲೋಚನೆ ಇಲ್ಲದೆ ಅಲ್ಲಿಂದ ಬಾಪೂ ನಡೆದೇ ಹೊರಟರು. ಗಾಜೀಪುರದ ಸಭೆ ತಪ್ಪಿಸುವುದು ಹೇಗೆ? ದಾರಿಯಲ್ಲಿ ಒಂದು ಒಂಟೆತ್ತಿನ ಗಾಡಿ ಸಿಕ್ಕಿತು. ಅದರಲ್ಲಿ ಪ್ರಯಾಣ ಸಾಗಿತು. ಅಂತೂ ಇಂತೂ ತಡವಾಗಿ ಆ ಊರು ಮುಟ್ಟಿದರು. ಆ ಪ್ರವಾಸಕ್ಕೆ ಶ್ರೀ ಪ್ರಕಾಶರು ಕಾರ್ಯದರ್ಶಿ. ಅವರು ತುಂಬಾ ನಾಚಿಕೆಪಟ್ಟು ಈ ಜಯಂತೀ ಪ್ರಯಾಣವನ್ನು ವರ್ಣಿಸಿದಾರೆ.

ಇಂಥ ಗಡಿಬಿಡಿಯಲ್ಲಿ ಪತ್ರವ್ಯವಹಾರ ಸಾಗದು. ಒಂದು ನೆಲೆ ಮುಟ್ಟಿದ ಮೇಲೆ ಅವಕ್ಕೆಲ್ಲ ಉತ್ತರ ಕೊಡುತ್ತಾರೆ. ಅಬಟಾಬಾದಿಗೆ ಹೋದ ಮೇಲೆ ಒಬ್ಬರಿಗೆ ಬಾಪೂಜಿ ಕಾಗದ ಬರೆದರು. ಇವರು ಆ ಪ್ರವಾಸದಲ್ಲಿ ಮೂರು ನಾಲ್ಕು ಪತ್ರ ಅವರಿಗೆ ಬರೆದಿದ್ದರು. ಬಾಪೂಜಿಯ ಪತ್ರಕ್ಕೆ ಏನು ಉತ್ತರ ಬರೆಯಬೇಕು ಎಂದು ಯೋಚಿಸುತ್ತಿದ್ದಾಗ ಮರುದಿನವೇ ಮತ್ತೊಂದು ಕಾಗದ.

'ನಿನ್ನ ಕಾಗದ ಇನ್ನೂ ಎರಡು ಗಂಟೆನಲ್ಲಿತ್ತು. ಆದಕ್ಕೆ ಇದು ಉತ್ತರ.......ನಿನಗೆ ಇನ್ನೂ ಸಂದೇಹಗಳಿದ್ದರೆ, ಏನಾದರೂ ಉಳಿದಿದ್ದರೆ, ಅರ್ಥವಾಗದೆ ಇದ್ದರೆ ಕಾಗದ ಬರೆ. ನಿನ್ನ ಈ ಎರಡೂ ಕಾಗದದಲ್ಲಿ ಪ್ರಸ್ತಾಪ ಮಾಡಿರುವ ವಿಷಯಕ್ಕೆ ಆಗಲೇ ಉತ್ತರ ಬರೆದಿದೇನೆ ಎಂದು ಅನಿಸುತ್ತಿದೆ.....'

ಈ ಕಾಗದ ಬಂದದ್ದು ಕೀರ ಹೊಸಬರಿಗೆ. ಈ ಆದರವನ್ನು ಪಡೆಯುವ ಯಾವ ಯೋಗ್ಯತೆಯೂ ಇವರಿಗೆ ಇರಲಿಲ್ಲ. ಇದರಲ್ಲಿ ಏನೋ ಓಲೆಗೆ ಮಾರೋಲೆ ಬರೆಯಬೇಕೆಂಬ ಕಾಟಾಚಾರವಿಲ್ಲ. ಬರೆದವರಿಗೆ ಉತ್ತರ ಬರೆಯುವ ವ್ಯವಹಾರದ ಶಿಷ್ಟಾಚಾರವೂ ಅಲ್ಲ. ಅದರಲ್ಲಿ ಈ ಜೀವ ತನ್ನದು ಎಂಬ ಭಾವ ಇದೆ. ಅಂತಃಕರಣ ಮೂಡಿಬರುತ್ತದೆ. ಭಗವಾನ್ ಶ್ರೀಕೃಷ್ಣ ತನ್ನ ಹದಿನಾರು ಸಾವಿರ ಗೊಲ್ಲ ಗೆಳತಿಯರನ್ನು ಸಮನಾಗಿ ನಡೆಸಿಕೊಂಡನೋ ಇಲ್ಲವೋ! ಬಾಪು ತಮ್ಮ ಸಾವಿರಾರು ಜನ ಗೆಳೆಯರಿಗೆ, ಪರಿಚಿತರಿಗೆ ಒಂದೇ ಸಮನಾದ ಶ್ರದ್ಧೆ ವಿಶ್ವಾಸ ತೋರಿಸುತ್ತಾರೆ. ಆ ಸಹನೆಗೆ, ಔದಾರ್ಯಕ್ಕೆ ಪರಿಚಿತರು ಅಪರಿಚಿತರು ಎಂಬ ಭೇದವೂ ಇಲ್ಲ. ನೆರಳುಕೊಡುವ ಮರಕ್ಕೆ, ನೀರು ಕೊಡುವ ಹೊಳೆಗೆ, ತನ್ನ ನೆರಳಿನಲ್ಲಿ ಕೂತುಕೊಳ್ಳುವವರು ತನ್ನ ನೀರು ಕುಡಿಯುವವರು ಯಾರು ಎಂಬ ಚಿಂತೆ ಉಂಟೆ? ಎಲ್ಲರಿಗೂ ಒಂದೇ.

ಕೆಲವು ದಿನ ಹರಿಜನ ಸೇವೆಯ ಬಗ್ಗೆ ಸದಾವಿಚಾರ ಮಾಡುತ್ತಿದ್ದರು. ಆಗ ಬರೆದ ಪತ್ರಗಳಲ್ಲಿ ಆ ಮಾತು ಇದ್ದೇ ಇರುತ್ತಿತ್ತು.

'ಹರಿಜನರಿಗಾಗಿಯೇ ಬದುಕುವುದು ಬಲು ಕಷ್ಟ. ಅವರಿಗಾಗಿಯೇ ಮಡಿಯುವುದಂತೂ ತುಂಬಾ ಕಷ್ಟ. ಅದಕ್ಕೆ ಬಹಳ ಹೆಚ್ಚಿನ ಯೋಗ್ಯತೆ ಬೇಕು. ಸತ್ಯನಾರಾಯಣ ಇದುರಿನಲ್ಲಿ ನಾವೆಲ್ಲರೂ ಹೇಡಿಗಳೇ. ಎಷ್ಟು ಸೂಕ್ಷ್ಮ ಪರೀಕ್ಷೆ ಅವನದು! ಅವನ ಪಾದಕ್ಕೆ ಒಪ್ಪಿಸುವ ಬಲಿ ಅಪಾಪವಾಗಿರಬೇಕು. ಉತ್ತಮೋತ್ತಮವಾದುದನ್ನೆ, ಕೇವಲ ಪುಣ್ಯ ಜೀವಿಗಳನ್ನೇ ಅವನು ಸ್ವೀಕರಿಸುವುದು. ಅಂಥವರನ್ನು ಎಲ್ಲಿ ತರಲಿ? ಒಂದೇ ಒಂದು ಪಾಪವಿಚಾರ ತಲೆಯಲ್ಲಿ ಬಂದರೂ ಆ ಜೀವ ನಿವೇದನಕ್ಕೆ ಸಲ್ಲದಾಗುತ್ತದೆ.

ಆದರೂ ನಾನು ಹೇಗೆ ಅವನನ್ನು ಬಿಡಲಿ? ಕವಿಗಳಲ್ಲಿ ಕವಿಯಾದ ಅವನಿಗೆ ತುಂಬಾ ಮತ್ಸರ. ಇನ್ನೊಬ್ಬ ಕವಿಯು ಪೂಜೆಮಾಡಲು ಯಾರನ್ನೂ ಬಿಡ ನಲ್ಲ. ಎಲ್ಲಿ ಹೋಗಲಿ; ಇದೆಲ್ಲ ಯಾರಿಗೆ ಹೇಳಿಕೊಳ್ಳಲಿ?'

ಬಾಪೂಜಿಗೆ ತೀರ ಹತ್ತಿರನಿಂತು ತಮ್ಮ ಬಾಳಗುಡಿಯಲ್ಲಿ ಬಾಪೂಜಿ ಯನ್ನೂ ಪ್ರತಿಷ್ಠಿಸಿಕೊಂಡವರೊಡನೆ ಅವರು ಮಾಡುವ ಪತ್ರವ್ಯವಹಾರ ಕಾವ್ಯಮಯವಾಗಿರುತ್ತದೆ. ಅಂಥವನ್ನೆಲ್ಲ ಯಾರಾದರೂ ಕಲೆಹಾಕಿ ಪ್ರಕಟಿಸಿದರೆ ಅದರ ಸವಿಸೊಬಗು ಜನರಿಗೆ ತಿಳಿದೀತು. ಫೈಜಪುರದ ಕಾಂಗ್ರೆಸ್ಸಿನ ಸ್ವಯಂಸೇವಿಕಾ ದಳದ ನಾಯಕಿ ಪ್ರೇಮಾ ಕಂಟಕ್ ಸತ್ಯಾಗ್ರಹಾಶ್ರಮದಲ್ಲಿದ್ದಾಕೆ. ಆಕೆಗೆ ಬಾಪೂಜೀ ಬರೆದ ಕಾಗದಗಳನ್ನೆಲ್ಲ ಒಂದು ಸಂಪುಟವಾಗಿ ಸೇರಿಸಿ ಆಕೆ ಪ್ರಕಟಿಸಿದಾಳೆ.† ದೊಡ್ಡವರೆಲ್ಲ ಹಾಗೆ ಮಾಡಿದರೆ ಆ ಸಾಹಿತ್ಯವೂ ಒಂದು ರೂಪಕ್ಕೆ ಬಂದೀತು.

ರಾಜಕೋಟೆಯ ಪ್ರಕರಣ ನಡೆದಾಗ ಬಾಪೂಜೀ ಕೆಲವು ಕಾಗದ ಮಹದೇವ ದೇಸಾಯಿಗೆ ಬರೆದಿದ್ದರು. ಅದರಲ್ಲಿ ಕೆಲವನ್ನು ಅವರು ಹರಿಜನದಲ್ಲಿ ಪ್ರಕಟಿಸಿದರು.

ಮೊದಲನೆಯದು ರಾಜಕೋಟೆಗೆ ಹೊರಟಾಗ.

'ನೀನು ಗಾಬರಿಯಾಗಬೇಡ. ಈ ಪ್ರವಾಸದಲ್ಲಿ ನೀನು ಜೊತೆಗೆ ಇಲ್ಲವಲ್ಲ ಎನಿಸುತ್ತದೆ. ದೇವರು ಕರೆದುಕೊಂಡು ಹೋಗುತ್ತಿದಾನೆ ಎಂದು ರಾಜಕೋಟೆಗೆ ಹೋಗುತ್ತಿದೇನೆ. ಅಂತರಂಗದಲ್ಲಿ ಆನಂದ ಉತ್ಸಾಹಗಳಿವೆ. ಯಾರು ಬಲ್ಲರು? ಇದೆಲ್ಲ ಬರಿಯ ಬಿಸಿಲುಗುದುರೆಯೋ ಏನೋ! ನನಗೆ ಇಷ್ಟುಮಾತ್ರ ಗೊತ್ತು. ರಾಜಕೋಟೆಯಿಂದ ಆಶಾ ಭಂಗವಾಗಿ ಹಿಂದಿರುಗಲಾರೆ.'

ಮಾರನೆಯ ದಿನ: ದಾರಿಯಲ್ಲಿ.

'ದೇವರ ಲೀಲೆ ಎಷ್ಟು ಅಗಮ್ಯ, ಅಗಾಧ! ರಾಜಕೋಟೆಯ ಪ್ರಯಾಣ ನನಗೇ ಅಚ್ಚರಿಯಾಗಿದೆ. ಏಕೆ ಹೋಗುತ್ತಿದೇನೋ ಎಲ್ಲಿಗೆ

† ಆ ಪುಸ್ತಕದ ಹೆಸರು 'ಪ್ರಸಾದ ದೀಕ್ಷಾ' ಎಂದು. ಇದರ ಕನ್ನಡ ಭಾಷಾಂತರ ಸಿದ್ಧವಾಗುತ್ತಿದೆ.

ಹೋಗುತ್ತಿದೇನೋ ನನಗೇ ತಿಳಿಯದು. ಕಾರಣವೇನೋ? ನಾನು ಈ ವಿಷಯವಾಗಿ ಏನೂ ಯೋಚನೆ ಮಾಡಿಲ್ಲ. ಯೋಚನೆಯಾದರೂ ಏಕೆ? ದೇವರೇ ದಾರಿ ತೋರಿಸುವಾಗ ನಾನೇನು ಯೋಚನೆಮಾಡಲಿ? ಯೋಚನೆಯಾದರೂ ಏಕೆ ಮಾಡಲಿ? ದೇವರು ದಾರಿತೋರುವಾಗ ನಮ್ಮ ಯೋಚನೆಯೂ ಅದಕ್ಕೆ ಒಂದು ಆತಂಕ ಆದೀತು.

ಯೋಚನೆ ವಿಚಾರ ನಿಲ್ಲಿಸಲು ಕಷ್ಟವೇ ಆಗುವುದಿಲ್ಲ. ಅದಕ್ಕಾಗಿ ಪ್ರಯತ್ನ ಕೂಡಾ ಬೇಕಾಗಿಲ್ಲ, ವಿಚಾರ ಬರುವುದೇ ಇಲ್ಲ. ಹಾಗೆಂದರೆ ಮನಸ್ಸು ಶೂನ್ಯವಾಗಿದೆ ಎಂದಲ್ಲ. ಈ ಪ್ರಯಾಣದ ಉದ್ದೇಶದ ವಿಚಾರವೇ ಬರುವುದಿಲ್ಲ.'

೧೯೩೭ರಲ್ಲಿ ಬಾಪೂಜಿ ತುಂಬಾ ಬೇನೆಬಿದ್ದರು. ಮೂರು ನಾಲ್ಕು ತಿಂಗಳು ಮೈಸೂರು ದೇಶದಲ್ಲಿ ವಿಶ್ರಾಂತಿಪಡೆಯಬೇಕಾಯಿತು. ಆಗ ಅವರು ಬರೆದ ಕೆಲವು ಕಾಗದ ಬಹಳ ಚೆನ್ನಾಗಿವೆ. ಸಾಬರಮತಿ ಆಶ್ರಮದ ಹೆಂಗುಸರಿಗೆ ವಾರಕ್ಕೊಂದು ಕಾಗದ ಬರೆವ ರೂಢಿ ಇಟ್ಟಿದ್ದರು. ಒಂದು ಕಾಗದ ಹೀಗಿತ್ತು.

'ನನ್ನ ಗಾಡಿಯ ಚಕ್ರ ಕೆಸರಿನಲ್ಲಿ ಹೂತು ಹೋಗಿದೆ. ಈಹೊತ್ತೇನೋ ಕೆಸರಿನಲ್ಲಿ ಇದೆ. ನಾಳೆ ಸರಿ ಮಾಡಲು ಕೂಡ ಬಾರದ ಹಾಗೆ ಚೂರು ಚೂರು ಆಗಬಹುದು. ಹಾಗೆ ಆದರೆ ಏನು ಗತಿ? ಗೀತೆಯಲ್ಲಿ ಹೇಳಿಲ್ಲವೆ: ಹುಟ್ಟಿದವರೆಲ್ಲ ಸಾಯಲೇಬೇಕು. ಸತ್ತವರೆಲ್ಲ ಹುಟ್ಟಬೇಕು.† ಪ್ರತಿಯೊಬ್ಬನೂ ಇಲ್ಲಿಗೆ ಬರುವುದು; ತನ್ನ ಪಾಲಿನ ಋಣ ಎಷ್ಟೋ ತೀರಿಸುವುದು; ಮುಂದೆ ಸಾಗುವುದು; ಇಷ್ಟೇ. ಹೊಟ್ಟೆಯೊಳಗೆ ಕಾಮ ಕ್ರೋಧ ಇಲ್ಲದೆ ಯಾರಿಗೂ ರೋಗರುಜಿನ ಬಾರದೆಂದು ನನಗೆ ಖಂಡಿತವಾಗಿ ಅನಿಸುತ್ತಿದೆ. ಹಾಗೆಂದರೆ ಕಾಮಕ್ರೋಧ ಇಲ್ಲದವರಿಗೆ ಸಾವು ಇಲ್ಲ ಅಂತಲ್ಲ. ಕಾಮಕ್ರೋಧ ಇಲ್ಲದವರೂ ಸತ್ತೇ ಸಾಯುತ್ತಾರೆ. ಯಾರೂ ಕಡೆತನಕ ಬದುಕಲಾರರು. ಆದರೆ ಅಂಥವರು ಕಳಿತ ಹಣ್ಣು

† ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।
ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ ೨–೨೭ ॥

ಕೆಳಗೆ ಉದುರುವಂತೆ ಉದುರಿ ಹೋಗುತ್ತಾರೆ. ಅವರಿಗೆ ತಲೆನೋವು, ಬೇನೆ ಯಾವುದೂ ಇಲ್ಲದೆಯೆ ಹಾಗೆ ಹೊರಟುಹೋಗುತ್ತಾರೆ. ಅಂಥ ಸ್ಥಿತಿ ನನಗೆ ಬರಲಿ ಎಂದು ನಾನು ಬಯಸಿದ್ದೇನೆ. ಇನ್ನೂ ಆ ಬಯಕೆ ಇದೆ. ಆದರೆ ಯಾರು ಬಲ್ಲರು? ಯಾವ ಹೊತ್ತಿಗೆ ಏನಾಗುವುದೋ! ನನಗೆ ಕಾಮಕ್ರೋಧ ಇನ್ನೂ ಪೂರ್ಣವಾಗಿ ಅಳಿದಿಲ್ಲ. ಅವು ಅಳಿಯುವ ಕಾಲವೂ ಹತ್ತಿರ ಇದ್ದಹಾಗೆ ಇಲ್ಲ.'

ಬಾಪೂಜಿಯ ಮನಸ್ಸು ಮೆದುವಾಗಿ ಕೊನೆಯ ಗಳಿಗೆಯನ್ನು ಯೋಚಿಸುತ್ತಿದೆ. ಕೊನೆಯ ಕಾಲದಲ್ಲಿ ದೇವರನ್ನು ನೆನೆದು ದೇಹವನ್ನು ಬಿಟ್ಟವರಿಗೆ ಪರಾಗತಿ ಇದೆ‡ ಎಂಬುದು ಅವರಿಗೆ ಗೊತ್ತಿದೆ. ಅದಕ್ಕೆ ಬೇಕಾದ ಅಭ್ಯಾಸಬಲವೂ ಇದೆ. ಆದರೂ ಗಾಂಧೀಜಿಯ ವಿನಯಕ್ಕೆ, ಮಿದುವಾದ ಎದೆಗೆ–ಅದರಲ್ಲೂ ಆಶ್ರಮದ ಹೆಂಗುಸರಿಗೆ ಬರೆವಾಗ ಒಂದು ಮುಗ್ಧ ಮನೋಹರ ಭಾವ ಬಂದಿದೆ.

ಇದೇ ರೀತಿಯಲ್ಲಿ ಮನಸ್ಸು ಮುಂದೆ ಸಾಗಿ ಕರ್ಮವಿಚಾರದಲ್ಲಿ ಪ್ರವೇಶಿಸಿತು. ಮತ್ತೊಂದು ಕಾಗದದಲ್ಲಿ :

'ಯಜ್ಞ ಕರ್ಮ ಮಾಡದೆ ಊಟಮಾಡುವವನು ಅನ್ನವನ್ನು ಕದ್ದು ತಿಂದಹಾಗೆ ಎಂದು ಗೀತೆ ಹೇಳುತ್ತದೆ. ಆ ವಾಕ್ಯ ನನಗೆ ಅಸ್ವಸ್ಥಿಯನ ದೇನು? ಬದುಕಬೇಕೆಂದರೆ ನಾವು ನೂಲಲೇಬೇಕು, ಅಲ್ಲವೆ? ಅನ್ನ ನೀರು ನಿದ್ದೆಯನ್ನು ಪಶುಪಕ್ಷಿಗಳೂ ನಡೆಸುತ್ತವೆ. ನಮಗೆ ವಿಚಾರಮಾಡು ವುದು ಒಂದು ಹೆಚ್ಚಿನದು. ವಿಚಾರ ಕೂಡಾ ಮಾಡಬಾರದು ಎಂದು ವೈದ್ಯರು ಹೇಳುತ್ತಾರೆ. ನನಗೋ ವಿಚಾರ–ಆಚಾರ ಎರಡೂ ಒಂದೇ. ವಿಚಾರಮಾಡುವುದೂ ಅದನ್ನು ಕಾರ್ಯರೂಪವಾಗಿ ಮಾಡುವುದೂ ಎರಡೂ ಅಷ್ಟೆ. ಮಾಡದೆ ಇರಲು ಸಾಧ್ಯವಲ್ಲ. ಓದು ಬರೆಹ–ನೂಲುವುದು ಮೂರನ್ನೂ ಮಾಡುತ್ತೇನೆ. ಬಿಡಲಾರೆ; ಬಿಡುವುದಿಲ್ಲ. ಇದು ಸಾಧ್ಯ ವಿಲ್ಲದ 'ಸ್ಥಿತಿ ಬಂದರೆ, ಅಂಥ ಕೆಲಸ ಮಾಡಲಾರದ ಮೈಗೆ ಉಪವಾಸವೇ ಸರಿಯಾದ ಔಷಧ ಎನಿಸುತ್ತದೆ.'

---

‡ ಅಂತಕಾಲೇಚ ಮಾಮೇವ ಸ್ಮರನ್ ಮುಕ್ತ್ವಾ ಕಳೇಬರಂ ।
ಯಃಪ್ರಯಾತಿ ಸಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ೮–೫ ॥

ಹೀಗೆ ಇದೇ ರೀತಿ ಹೋದರೆ ಮನಸ್ಸಿಗೆ ಭಾರವಾಗುತ್ತದೆ. ಅದನ್ನು ತಿಳಿದು ಮುಂದಿನ ಕಾಗದದಲ್ಲಿ ಸ್ವಲ್ಪ ಉತ್ಸಾಹ ವಿನೋದ ತುಂಬಿದರು. ತಮ್ಮ ಹಾಗೆಯೆ ಕಾಯಿಲೆ ಆಗಿದ್ದ ಗೆಳೆಯನೊಬ್ಬನನ್ನು ನೆನೆದರು. ಮನಸ್ಸು ಆ ಮಟ್ಟಕ್ಕೆ ಹೊಂದಿಕೊಂಡಿತು. ಆತನಿಗೆ ನಾಲ್ಕು ಸಮಾಧಾನದ ಮಾತು ಬರೆದರು. ಆತನಿಗೆ ಕಾಯಿಲೆ ತಾವು ಸಮಾಧಾನ ಹೇಳುವವರು. ತಮಗೂ ಕಾಯಿಲೆಯೇ ಅಲ್ಲವೆ! ಆ ಮಾತು ಸೂಚಿಸಿ ನಗೆ ಹರಿಸಿದರು.

'ಇದೇ ಅಲ್ಲವೆ ತಮಾಷೆ! ಕಾಗೆ ಕೋಗಿಲೆಯನ್ನು ಕಪ್ಪು ಎಂದು ಜರಿಯುವುದು. ಆದರೆ ನೋಡು. ಸದಾ ಆರೋಗ್ಯವಾಗಿರಲು ನಮಗೆ ಸಾಧ್ಯವಿಲ್ಲದಿದ್ದರೂ ಸದಾ ನಗುತ್ತ ಇರಲು ಏನು ಅಡ್ಡಿ? ಇರಬಹುದಲ್ಲ. ಕೊನೆಯ ಹೊತ್ತು ಬಂದಾಗಲೂ ನಗುತ್ತ ಇರಬಹುದಲ್ಲವೆ? ನೀನೇನು ಅನ್ನುತ್ತೀ? ಅದೇ ಸರಿ ಅಲ್ಲವೇ?'

ಬಾಪೂಜಿಗೆ ನಗೆ ಅನಾಸಕ್ತಿಯ ಗುರುತು. ಮನಸ್ಸಿನ ಆರೋಗ್ಯದ ಗುರುತು. ಅದನ್ನು ಸಾಧಿಸಿದವರಿಗೆ ಆ ಶಾಂತಿ ಅಂಗೈನೆಲ್ಲೀಕಾಯಿ.

ಗಾಂಧೀಜಿಗೆ ೫೦ ತುಂಬಿದಾಗ ಅನೇಕರು ಅವರಿಗೆ ಕಾಗದ ಬರೆದು, ತಾರು ಕಳಿಸಿ ತಮ್ಮ ಶುಭಾಕಾಂಕ್ಷೆ ತಿಳಿಸಿದರು. ಅವರೆಲ್ಲ ಗಾಂಧೀ ಜಯಂತಿಯನ್ನು ಆಚರಿಸುವವರು. ಅವರಿಗೆ ಉತ್ತರವಾಗಿ 'ನವಜೀವನ' ದಲ್ಲಿ ಬಾಪು ಒಂದು ಪತ್ರ ಬರೆದರು.

ಸೋದರ ಸೋದರಿಯರೆ,

ನನ್ನ ಹುಟ್ಟಿದ ಹಬ್ಬದ ನಿಮಿತ್ತ ಅನೇಕ ಕಾಗದ, ತಂತಿ ಬಂದಿವೆ. ಎಲ್ಲರೂ ಶುಭ ಬಯಸಿದಾರೆ. ಈ ಒಲವನ್ನು ನಾನು ಹೇಗೆ ತಿರುಗಿ ಕೊಡಲಿ? ನನ್ನ ಕೃತಜ್ಞತೆಯನ್ನು ಹೇಗೆ ತಿಳಿಸಲಿ? ಕುರುಡು ಪ್ರೀತಿ ನನಗೆ ಸೇರದಾಗಲಿ, ವಿವೇಕಯುತವಾದ ಅಭಿಮಾನವನ್ನು ನಾನು ಮೆಚ್ಚು ತ್ತೇನೆ. ನಿಜ. ಆದುದರಿಂದ ಹಲವು ಕಡೆ ಆ ಅಭಿಮಾನವು ವ್ಯಾವಹಾರಿಕ ವಾಗಿ ಉಪಯುಕ್ತವಾದ ರೂಪವನ್ನು ಪಡೆದುದು ನನಗೆ ತುಂಬ ಸಂತೋಷವಾಗಿದೆ. ನನಗೆ ಹಿಂದುಸ್ತಾನದ ಬಡತನ ಬಹಳ ತೀಕ್ಷ್ಣವಾಗಿ

ಅನುಭವ ಆಗಿದೆ. ಅಂತಲೇ ಯಾರಾದರೂ ಹಣವನ್ನು ಹಾಳುಮಾಡಿ ವ್ಯರ್ಥವಾಗಿ ವೆಚ್ಚಮಾಡಿದರೆ ಬಡವರ ಪಾಲಿನಿಂದ ಅಷ್ಟು ದೋಚಿದ ಹಾಗಾಯಿತಲ್ಲ ಎನಿಸುತ್ತದೆ. ನನಗೆ ತಂತಿ ಕಳಿಸಲು ವೆಚ್ಚಮಾಡಿದ ಹಣವನ್ನೆಲ್ಲ ಖಾದೀ-ಸ್ವದೇಶಿ ಪದಾರ್ಥ ಕೊಳ್ಳಲು ಬಳಸಿದ್ದರೆ ಅನಾಥರಿಗೆ ನಾಲ್ಕು ತುತ್ತು ಅನ್ನ ಸಿಗುತ್ತಿರಲಿಲ್ಲವೆ; ಅರೆಬತ್ತಲೆಯಾಗಿ ಬದುಕುವವರಿಗೆ ಬಟ್ಟೆ ಆಗುತ್ತಿರಲಿಲ್ಲವೆ? ಅವರು ಈ ಉದಾರಿಗಳನ್ನು ಆಶೀರ್ವದಿಸುತ್ತಿರಲಿಲ್ಲವೆ? ಬಡವರ ಶಾಪ ದೇಶಗಳನ್ನು ನಿರ್ನಾಮಮಾಡಿದೆ; ಸಿಂಹಾಸನಗಳನ್ನು ಉರುಳಿಸಿದೆ; ಶ್ರೀಮಂತರನ್ನು ಬೀದಿಯ ತಿರುಪೆಗೆ ಎಳೆದಿದೆ. ಬಡವರ ಹರಕೆ ದೇಶಕೋಶಗಳಿಗೆ ಕಳೆಕೊಟ್ಟಿದೆ; ಅವರನ್ನು ಬೆಳೆಸಿವೆ.

ನನ್ನಮೇಲೆ ನಿಮಗೆಲ್ಲ ಪ್ರೀತಿ ಇದೆ. ಅದನ್ನು ತೋರಿಸಲು ನಿಜವಾದ ರೀತಿ ಎಂದರೆ ನಾನು ಮಾಡುವ ಕೆಲಸಗಳಲ್ಲಿ ನಿಮ್ಮ ಮನಸ್ಸಿಗೆ ಬಂದದ್ದನ್ನು ಅನುಸರಿಸುವುದು. ತಾನು ತುಳಿದ ದಾರಿಯನ್ನು ಹಿಡಿಯುವುದಕ್ಕಿಂತ ಹೆಚ್ಚಿನ ಆದರ ಏನು ತೋರಬಹುದು ಜನ? ಹಲವು ಜನ ತಂಗಿಯರು ತಾವೇ ತೆಗೆದ ನೂಲನ್ನು ಕಳಿಸಿದಾರೆ. ಹಲವರು ದಲಿತ ಜನರ ಸೇವೆಯ ವ್ರತ ಹಿಡಿಯುವೆವೆಂದು ಪ್ರತಿಜ್ಞೆ ಮಾಡಿದಾರೆ. ಅಹಮದಾಬಾದಿನ ಸ್ವದೇಶೀ ಸಂಗ್ರಹಾಲಯದವರು ಅನೇಕ ಕಷ್ಟನಷ್ಟಗಳನ್ನು ಅಸಡ್ಡೆ ಮಾಡಿ ಪದಾರ್ಥಗಳ ಬೆಲೆ ಇಳಿಸಿದಾರೆ. ಸೂರತ್ತಿನ ಸ್ವದೇಶೀ ಭಂಡಾರದವರೂ ಅಷ್ಟೆ. ಜಯಂತಿಗಳನ್ನು-ಹುಟ್ಟಿದ ಹಬ್ಬ-ಹೀಗೆ ಮಾಡುವುದು ವಿವೇಕಯುಕ್ತವಾದ ಅಭಿಮಾನದ ಗುರುತು. ಇಂಥ ಹುಟ್ಟಿದ ಹಬ್ಬ ಸದಾ ಬರಲಿ ಎನಿಸುತ್ತದೆ. ಅದರಿಂದ ಗಂಡು ಹೆಣ್ಣು ಇಬ್ಬರೂ ತಮ್ಮ ಬಾಳಿನಲ್ಲಿ ಮುಂದೆ ಮುಂದೆ ಹೆಜ್ಜೆ ಇಡಲು ಅನುಕೂಲವಾಗುತ್ತದೆ.

ಭಗಿನೀ ಸಮಾಜದವರು ಒಂದು ನಿಧಿಯನ್ನು ಕೊಡುತ್ತಾರಂತೆ. ಇದು ಒಂದು ದೊಡ್ಡ ಜವಾಬದಾರಿ. ಆ ಹಣವನ್ನು ಹೇಗೆ ಬಳಸಿದರೆ ಯೋಗ್ಯ ಎಂಬುದನ್ನು ಯೋಚಿಸಬೇಕಷ್ಟೆ.

ಏನೂ ಆಲೋಚನೆ ಮಾಡದೆಯೆ ಹಿಂದುಸ್ತಾನದ ಹೆಂಗಸರಿಗಾಗಿ ಆ ಹಣವನ್ನು ಬಳಸುತ್ತೇನೆ ಎಂದು ಹೇಳಿಬಿಡುತ್ತೇನೆ. ಇಷ್ಟು ಹೇಳಲು

ದೂರಾಲೋಚನೆ ಬೇಕಿಲ್ಲ. ಸಿಧಿಗಳನ್ನು ಹೇಗೆ ಬಳಸಬೇಕು ಎಂಬ ಪ್ರಶ್ನೆಗೆ ಉತ್ತಮವಾದ ಸಲಹೆಗಳನ್ನು ಕೊಟ್ಟರೆ, ಅಂಥ ಸೋದರ ಸೋದರಿಯರಿಗೆ ನಾನು ತುಂಬಾ ಕೃತಜ್ಞ.

ಎಲ್ಲರೂ ನನಗೆ ದೀರ್ಘಾಯುಸ್ಸನ್ನು ಕೋರಿದಾರೆ. ಸತ್ಯವನ್ನು ಶೋಧಿಸುತ್ತ, ಸತ್ಯವನ್ನೇ ಆಡುತ್ತ ಮಾಡುತ್ತ, ವಿಚಾರ ಮಾಡುತ್ತ ಈ ಬದುಕನ್ನು ಮುಕ್ತಾಯಗೊಳಿಸಬೇಕೆಂದು ನನಗೆ ಆಸೆ. ನನ್ನ ಈ ಆಸೆ ಸಫಲವಾಗುವಂತೆ ನಾಡು ನನ್ನನ್ನು ಹರಸಲಿ.

**ಮೋಹನದಾಸ ಕರಮಚಂದ ಗಾಂಧಿ.**

ಕೆಲವರು ತಮಗೆ ತೋಚಿದ ಪ್ರಶ್ನೆ ಕೇಳುತ್ತಾರೆ. ತಮಗೆ ಬಂದ ಕಷ್ಟ–ಸಮಸ್ಯೆಗಳನ್ನು ಅವರ ಮುಂದೆ ಇಟ್ಟು ಉತ್ತರ ಕೇಳುತ್ತಾರೆ. ಅವಕ್ಕೆಲ್ಲ ಉತ್ತರ ಕೊಡಬೇಕು. ಒಬ್ಬರು ದೇಶೀ ಸಂಸ್ಥಾನದ ಪ್ರಜೆ ಹೇಗೆ ನಡೆಯಬೇಕೆಂದು ಕೇಳಿದರು.

'ನನ್ನ ರಾಜಕೋಟೆಯ ಪ್ರಕಟನೆಯನ್ನು ಸಾವಧಾನವಾಗಿ ಓದಿ. ನಿಮ್ಮ ನಡತೆಗೆ ಒಂದು ಕ್ರಮ–ಒಂದು ಶಿಸ್ತು ಕೊಡಲು ಅದರಿಂದ ಸಹಾಯ ಆದೀತು.'

ಇನ್ನೊಂದರಲ್ಲಿ ಹಿಂದೂಸ್ತಾನಕ್ಕೆಲ್ಲ ಒಂದೇ ಲಿಪಿ ಆಗಬೇಕು ಎಂಬ ವಿಚಾರ. ನಮ್ಮ ನಾಡಿನ ಹತ್ತಾರು ನುಡಿ ಇವೆ. ಇದ್ದರೇನು? ಎಲ್ಲಕ್ಕೂ ಒಂದೇ ಲಿಪಿ ಸಾಲದೇ? ಲಿಪಿಗೆ ಲಿಪಿ ಭಾರ. ಅಲ್ಲದೆ ಏಕ ಲಿಪಿ ಆದರೆ ನಾಡಿನಲ್ಲಿ ಒಂದು ಐಕ್ಯತೆ ಬಂದೀತಲ್ಲವೆ. ಆಗಾಗ ಗಾಂಧೀಜೀ ಈ ವಿಷಯ ಬರೆಯುತ್ತಾರೆ.

ಒಂದೇ ಲಿಪಿಯ ದುಸ್ಸಾಧ್ಯ ಪ್ರಯತ್ನಕ್ಕಿಂತ ದಕ್ಷಿಣಭಾರತಕ್ಕೊಂದು ಲಿಪಿ, ಉತ್ತರ ಭಾರತಕ್ಕೊಂದು ಲಿಪಿ ಆದರೆ ಅನುಕೂಲವಲ್ಲವೆ ಎಂದು ಗಾಂಧೀಜಿಗೆ ಸೂಚಿಸಲಾಗಿತ್ತು. ಅದು ಸಹಜವೂ ಸುಲಭವೂ ಆದೀತೆಂದು ಆ ಸೂಚನೆ ಮಾಡಲಾಗಿತ್ತು. ಗಾಂಧೀಜಿಗೆ ಆ ಸೂಚನೆ ಸಮ್ಮತವಾಗಲಿಲ್ಲ.

'ದ್ರಾವಿಡ ಭಾಷೆಗಳೆಲ್ಲ ಸಂಸ್ಕೃತಕ್ಕೆ ದತ್ತು ಬಂದ ಪುತ್ರಿಯರು;

ಪಾಲಿತ ಪುತ್ರಿಯರು. ಇದು ನನ್ನ ಅಭಿಪ್ರಾಯ. ಕಾರಣ:–ಕನ್ನಡ, ಮಲೆಯಾಳಿ, ತೆಲಗುಗಳಲ್ಲಿ ನೂರಕ್ಕೆ ಐವತ್ತರಷ್ಟು–ಇನ್ನೂ ಹೆಚ್ಚು ಶಬ್ದಗಳು ಸಂಸ್ಕೃತದಿಂದ ಬಂದಿವೆ. ತಮಿಳಿನಲ್ಲೂ ಕಾಲು ಪಾಲಿಗಿಂತ ಕಡಮೆ ಇಲ್ಲ ಸಂಸ್ಕೃತ. ಈ ಅಕ್ಕತಂಗಿಯರು ಸಂಸ್ಕೃತದಿಂದ ಸಾಲಪಡೆದು ಒಲಗೊಳ್ಳುತ್ತಾರೆ. ನಿನಗೆ ಗೊತ್ತೇನು? ಮಲೆಯಾಳಿ ಅಥವಾ ಕನ್ನಡ ಮಾತು ಆಡಿದರೆ ನನಗೆ ತಕ್ಕಮಟ್ಟಿಗೆ ಅದರ ಅರ್ಥ ತಿಳಿಯುತ್ತದೆ. ಸಂಸ್ಕೃತದಿಂದ ನೇರಾಗಿ ಅದೇ ರೂಪದಿಂದಲೇ ಎಷ್ಟೋ ಪದಗಳು ಬಂದಿರುವುದೇ ಅದಕ್ಕೆ ಕಾರಣ. ತಮಿಳು ಲಿಪಿ ಕೂಡ ದೇವನಾಗರಿಯ ಅನುಕರಣ. ಇಷ್ಟೆಲ್ಲ ಇದ್ದರೂ ಈ ನಾಲ್ಕು ನುಡಿಗಳಾಗಲಿ, ಮತ್ತೆ ಯಾವುದೇ ಆಗಲಿ ದೇವನಾಗರಿ ಲಿಪಿಯನ್ನು ಬಳಸಲು ಒಪ್ಪಲಿಲ್ಲ ಎನ್ನೋಣ. ಒಪ್ಪದಿದ್ದರೆ ಅದಕ್ಕಾಗಿ ಕಾಯಲು ನನಗೆ ಸಾಕಷ್ಟು ಸಹನೆ ಇದೆ. ನಿರಂಕುಶಾಧಿಕಾರದ ಸರ್ವಾಧಿಕಾರಿಯ ದೇಶಗಳ ಮಾತುಬೇರೆ. ಉಳಿದ ಕಡೆ ಇಂಥ ಮಹತ್ತಾದ ಸುಧಾರಣೆ ಅಭಿಪ್ರಾಯ ಪರಿವರ್ತನದಿಂದಲೇ ಆಗಬೇಕಲ್ಲವೆ.'

ಆಚಾರ್ಯ ಕೃಪಾಲಾನಿ ತಮ್ಮ ಪ್ರಾಂತವಾದ ಸಿಂಧಕ್ಕೆ ಒಮ್ಮೆ ಹೋಗಿದ್ದರು. ಆಗ ಅವರ ತಂದೆಗೆ ಬಹಳ ಕಾಯಿಲೆ. ರೋಗಿಗೆ ಆರೈಕೆ ಮಾಡಲು ಬೇಕಾದಷ್ಟು ಜನ ಇದ್ದರು. ಕೃಪಾಲಾನಿ ಅಲ್ಲಿ ಇರಬೇಕಾದ ಆಗತ್ಯವಿರಲಿಲ್ಲ. ಆದರೂ ಮಗ ಮತ್ತೆ ಅಸಹಕಾರ ಚಳುವಳಿಗೆ ಸೇರಿಯಾನಲ್ಲ ಎಂಬ ಕಳವಳ ಮುದುಕನಿಗೆ. ಆರೈಕೆಗಾಗಿ ಇರು ಎಂದು ಮಗನಿಗೆ ಹೇಳಿದರು. ಅಲ್ಲಿಗೆ ಹೋಗುವ ಮುಂಚೆ ಮೀರತ್ತಿನಲ್ಲಿ ಕೃಪಾಲಾನಿ ಗಾಂಧೀ ಆಶ್ರಮವನ್ನು ಸ್ಥಾಪಿಸಿ ಚೆನ್ನಾಗಿ ನಡೆಸಿಕೊಂಡು ಬಂದಿದ್ದರು. ಈಗೇನು ಮಾಡಬೇಕು? ತಂದೆಯ ಮಾತು ಕೇಳಬೇಕೋ ಬೇಡವೋ?

ಈ ಧರ್ಮಸಂದೇಹ ಗಾಂಧೀಜಿಗೆ ತಿಳಿಸಿದರು ಗಾಂಧೀಜಿಯ ಉತ್ತರ ಪ್ರತಿಯೊಬ್ಬ ದೇಶಸೇವಕನೂ ಮನನ ಮಾಡಬೇಕಾದ ಉತ್ತರ. ಕ್ಲೈಬ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ಎಂದು ಅರ್ಜುನನಿಗೆ ಶ್ರೀಕೃಷ್ಣ ಹೇಳಿದ ಸಂದೇಶ ಅದು.

'ನನ್ನ ಅಭಿಪ್ರಾಯ ಹೀಗೆ. ನಮಗೆ ತಂದೆ ತಾಯಿ ಹೆಂಡತಿ ಮಕ್ಕಳು ಯಾರೂ ಇಲ್ಲ. ನಮ್ಮ ಬಂಧು ಬಳಗ ಎಲ್ಲವೂ ಹಿಂದುಸ್ತಾನ. ಮುಂದುಕರಾದವರೆಲ್ಲ—ಯಾರೇ ಆಗಲಿ—ನಮ್ಮ ಸೇವೆ ಬಯಸುತ್ತಾರೆ. ಆಚಾರ್ಯನ ತಂದೆಗೆ ಆರೈಕೆ ಮಾಡಲು ಬೇಕಾದಷ್ಟು ಜನ ಇದಾರೆ. ಸಾಧ್ಯವಾದಷ್ಟು ಸಮಯವಾಗಿ ಆ ಕೆಲಸವನ್ನು ಇತರರಿಗೆ ಬಿಟ್ಟುಕೊಟ್ಟು ಬರಬೇಕು. ಹಿಂದುಸ್ತಾನದ ಸೇವೆಯಲ್ಲಿ ತನ್ನ ತಂದೆಯ ಸೇವೆಯೂ ಅಡಕವಾಗಿದೆ. ಇದರಲ್ಲಿ ಅಂತರ್ಗತವಾಗಿ ಅದೂ ಬಂತು ಎಂಬ ನಂಬಿಗೆ ಇರಲಿ. ಅವರ ತಂದೆಗೆ ಬೇರೆ ಯಾರೂ ಆರೈಕೆ ಮಾಡುವವರಿಲ್ಲದೆ ಇದ್ದರೆ ಆಗ ತಂದೆಯ ಸೇವೆಯೇ ದೇಶಸೇವೆ ಆಗುತ್ತಿತ್ತು.'

ವೈಯುಕ್ತಿಕ ಪತ್ರಗಳಲ್ಲಿ ಈ ಸೊಬಗಾದರೆ ರಾಜಕೀಯ ಪತ್ರ ಒಂದು ಗಾಂಭೀರ್ಯ. ಒಂದು ಬಿಗಿ ಕಾಣಬರುತ್ತದೆ. ಅದರಲ್ಲಿನ ಔಚಿತ್ಯ ಚಾತುರ್ಯಗಳು ಮುಂದೆ ಬರಲಿರುವ ರಾಜಕಾರಣಿಗಳಿಗೆ ಮೇಲ್ಪಂಕ್ತಿಯಾಗಿವೆ. ಅವುಗಳಲ್ಲಿ ಬರುವ ಕೆಲವು ಪ್ರಯೋಗ ಕೆಲವು ಭಾವ ಸಾಹಿತ್ಯದ ಮೇಲ್ಮಟ್ಟಕ್ಕೆ ಸೇರಿದ ರಚನೆ. ಅಹಿಂಸಾಮಾರ್ಗಗಾಮಿಗೆ ವೀರರಸ ಎಂದರೆ ಏನು ಎಂಬುದು ಅದರಲ್ಲಿ ಕಾಣಬರುತ್ತದೆ. ವೀರತನ ಪರುಷವಾದ ಮಾತಿನಲ್ಲಿಲ್ಲ: ಮಿದುವಾದ ಮಾತಿನಲ್ಲೂ ಇದೆ. ಮಾತು ಮಿದುವೇ ಇರಬೇಕು ನಿಜವಾದ ಧೀರತೆಗೆ; ಭಾವ ದೃಢವಾಗಿದ್ದರೆ ಸಾಕು ಎಂದು ತಿಳಿಸುತ್ತದೆ ಆ ಸಾಹಿತ್ಯ. 'ಹಿಟ್ಟು ಬೇಡಲು ಮುಟ್ಟಿಯೆ?' 'ಸಹನೆಗೂ ಮಿತಿ ಇದೆ.' 'ಸತ್ಯಕ್ಕೆ ಸೋಲಿಲ್ಲ.' 'ಅಹಿಂಸೆಗೆ ಹಗೆಯಿಲ್ಲ'—ಮೊದಲಾದ ಪ್ರಯೋಗಗಳು ರಾಜಕೀಯ ಲೋಕದಲ್ಲಿ ಈಚೆಗೆ ಕವಿಸಮಯದಂತೆ ಆಗಿವೆ. ಗಾಂಧೀಜೀ ವೈಸರಾಯರಿಗೆ ಬರೆದ ಪತ್ರಗಳು, ಜನರಲ್ ಸ್ಮಟ್ಸ್‌ಗೆ ಬರೆದ ಕಾಗದಗಳು ಗಾಂಧೀ ಸಾಹಿತ್ಯದಲ್ಲಿ ಬಹಳ ದಿನ ಬಾಳುವಂಥವು. ಒಂದು ಕಡೆ ಅತ್ಯಂತ ವಿನಯ, ಇನ್ನೊಂದು ಕಡೆ ಅತ್ಯಂತ ದಾರ್ಢ್ಯ. ಹೀಗೆ ಎರಡೂ ಪ್ರವಾಹಗಳನ್ನು ಒಂದೇ ಹೊಳೆಯಲ್ಲಿ—ಗಂಗೆ ಯಮುನೆಯರಂತೆ—ಹರಿಯಬಿಡುವುದು ಅವರಿಗಲ್ಲದೆ ಇತರರಿಗೆ ಸಾಧ್ಯವಿಲ್ಲ. ಆ ಶಕ್ತಿ ಆ ಸತ್ಯಪರಾಕ್ರಮಕ್ಕೇ ಸಂದೀತು.

ಗಾಂಧೀಜೀ ಯಾರಿಗಾದರೂ ಕಾಗದ ಬರೆದಾರು. ಅವರು ಬರೆದ ಕಾಗದ ಓದಿ ಅರ್ಥ ಮಾಡಿಕೊಳ್ಳುವುದು ಮಾತ್ರ ಬಹು ಕಷ್ಟ, ಅಷ್ಟು ಡೊಂಕು ಅವರ ಕೈಬರಹ. ಶಾಸನದ ಅಕ್ಷರ ಬಿಡಿಸಿದ ಹಾಗೆ ಬಿಡಿಸ ಬೇಕು. ಸುಮ್ಮನೆ ಟಯಿಪು ಮಾಡಿದರಾಯಿತಲ್ಲ. ಅಲ್ಲದೆ ದಿನವೂ ಇಷ್ಟು ಪತ್ರವ್ಯವಹಾರ. ಬಾಪೂಗೆ ಅದು ಇಷ್ಟವಿಲ್ಲ. ಎಲ್ಲ ಕಾಗದಗಳನ್ನೂ ಕೈಯಿಂದ ತಯಾರು ಮಾಡಿದ ಕರಡು ಕಾಗದದ ಮೇಲೆ ತಾವೇ ಬರೆ ಯುತ್ತಾರೆ. ಆಶ್ರಮದಲ್ಲಿ ಟಯಿಪ್‌ರಯಿಟರ್ ಯಂತ್ರ ಇಲ್ಲ ಎಂದಲ್ಲ. ಇದೆ. ಹರಿಜನ ಪತ್ರಿಕೆಗೆ ಕಳಿಸುವ ವಿಷಯ, ಕೆಲವು ಪ್ರತ್ಯೇಕ ಸ್ಥಳ ಗಳಿಗೆ ಬರೆವ ಕಾಗದ ಟಯಿಪು ಆಗಬಹುದು. ಉಳಿದುದೆಲ್ಲ ಕೈಯಿಂದಲೇ. ಕೆಲವು ಸಲ ಕಾಗದಗಳನ್ನೋ ಇನ್ನೇನಾದರೂ ಮಹತ್ವದ ಬರೆವಣಿಗೆ ಯನ್ನೋ ನಕಲು ಮಾಡಿ ಇಡಬೇಕಾಗುತ್ತದೆ. ಆಗಲೂ ಟಯಿಪು ರಯಿಟರ್ ಬಳಸುವದಿಲ್ಲ. ಸುಶೀಲಾ ನಾಯರೋ ಅಮೃತಕುಮರಿಯೋ ನಕಲು ಮಾಡುತ್ತಾರೆ. ಗಾಂಧೀಜೀ ಒಂದು ಸಂಸ್ಥಾನದ ಪ್ರಜಾಮಂಡ ಲದ ಪರವಾಗಿ ಆ ಸಂಸ್ಥಾನದ ಪ್ರಧಾನರೊಡನೆ ಕಾಗದಪತ್ರ ನಡೆಸಿದ್ದರು. ಒಂದು ಸಲ ಪ್ರಜಾಮಂಡಲದ ಕಾರ್ಯದರ್ಶಿಗೆ ಆ ಓಲೆ ಮಾರೋಲೆಗಳ ನಕಲು ಕಳಿಸಬೇಕಾಗಿತ್ತು. ಅವೆರಡನ್ನೂ ರಾಜಕುಮಾರಿ ಪ್ರತಿಮಾಡಿ ಕಳಿಸಿದರು.

ಕಾಗದ ಪತ್ರ, ಲೇಖನ, ಪ್ರಕಟನೆ–ಬರೆದು ಬರೆದು ಬಾಪೂಜಿಗೆ ಒಂದೊಂದು ಸಲ ಕೈ ಸೋತುಹೋಗುತ್ತದೆ. ಅಷ್ಟಾದರೂ ಅವರು ಬರೆ ಯುವುದು ಬಿಡುವುದಿಲ್ಲ. ಕೂತು ಕೂತು ಸಾಕಾದರೆ ಎದ್ದು ನಿಂತು ಬರೆಯುತ್ತಿದ್ದರು. ಬೆಳಗಾವಿ ಕಾಂಗ್ರೆಸ್ಸಿನಲ್ಲಿ 'ಖಾದೀ ಅರಮನೆ'ಯಲ್ಲಿ ಒಂದು ಮೇಜು ಅದರಮೇಲೊಂದು ಜಾರುಮೇಜು. ನೋಡಿದವರೆಲ್ಲ ಇದೇಕೆ ಎಂದುಕೊಳ್ಳುತ್ತಿದ್ದರು. ಕೂತು ಸಾಕಾದರೆ ನಿಂತು ಬರೆಯಲಿಕ್ಕೆ ಇದು ಉಪಾಯ ಎಂಬುದು ಗಾಂಧೀಜೀ ಎದ್ದುನಿಂತು ಬರೆದಾಗ ಗೊತ್ತಾಯಿತು. ಆ ಕಾಂಗ್ರೆಸ್ಸಿಗೆ ಅವರೇ ಅಧ್ಯಕ್ಷರು. ಆ ಉತ್ಸವದಲ್ಲೂ ಇವರು ಬರೆಯಬೇಕು. ಆಗಲೂ ಕೆಲಸ ಸಿಲ್ಲಿಸುವಹಾಗೆ ಇಲ್ಲ. ಇನ್ನೊ ಬ್ಬರಿಗೆ ಒಪ್ಪಿಸುವಹಾಗೆ ಇಲ್ಲ.

ಬರೆದು ಬರೆದು ಕೈ ಸೋತರೆ ಎಡಗೈಯಿಂದ ಬರೆಯುತ್ತಾರೆ. ಅದೂ ಅವರಿಗೆ ರೂಢಿ ಇದೆ. ಎಡಗೈಯಲ್ಲೂ ಅಕ್ಷರ ಅದೇ ರೀತಿ, ಒಂದು ಸಲ ಹೀಗೊಂದು ಪತ್ರ ಬಂದಿತ್ತು.

'ಬಲಗೈ ಸೋತು ಹೋದುದರಿಂದ ಎಡಗೈಯಲ್ಲಿ ಬರೆಯುತ್ತಿದೇನೆ. ನೀನು ಸರಕಾರಕ್ಕೆ ಬರೆದ ಪತ್ರ ಸರಿಯಾಗಿದೆ. ನಾನೂ ಪ್ರಯತ್ನ ಮಾಡುತ್ತಿದೇನೆ.'

ವ್ರತನಿಯಮಗಳಿಂದ ಆ ಮೈಗೆ ಅಂಥ ಹದ ಬಂದಿದೆ. ಗಾಂಧೀಜಿಗೆ ಈ ಮೈ ಒಂದು ಯಂತ್ರ, ಒಂದು ಸಾಧನ.‡ ಹಾಗೆ ಪಳಗಿಸಿದಾರೆ ಮೈಯನ್ನು. ಪಳಗಿಸಿ ಅದರಲ್ಲಿ ಒಂದು ದಿವ್ಯ ತೇಜಸ್ಸನ್ನು ತುಂಬಿದಾರೆ. ಅವರ ಕರ್ಮಶೀಲತೆಯನ್ನು ನೋಡಿದರೆ ಮನುಷ್ಯನೇನು ಬರೀ ಕಲ್ಲು ಮಣ್ಣಿನ ಗೋಪುರವೆ? ಸುಮ್ಮನೆ ಹುಟ್ಟಿ ಸಾಯುವ ಹುಳವೆ? ಮರದ ಎಲೆಯೆ? ಎನಿಸುತ್ತದೆ. ಹಾಗಿದ್ದರೆ ಈ ಸಾವಿರ ಕಣ್ಣೇಕೆ, ಈ ಸತತ ಪರಿಶೀಲನೆ ಏಕೆ? ಈ ನಿಯಮಗಳ ಗೊಂದಲವೇಕೆ? ಮನುಷ್ಯ ನಿಜವಾಗಿ ಯೋಗಭ್ರಷ್ಟನಾದ ದೇವತೆ. ಕಡಲಿನಿಂದ ಸಿಡಿದು ಬಂದ ಹನಿ. ಈ ಮಣ್ಣುಮೈಯ ಸಂಸಾರ ಕಮಲಕ್ಕೆ ಹತ್ತಿದ ಕೆಸರಿನ ಹಾಗೆ. ಕೆಸರಿನಲ್ಲಿ ಹುಟ್ಟಿದರೇನು ಕಮಲಕ್ಕೆ ಬಾಧಕ? ಕಮಲ ಕಮಲವೇ— ಎನಿಸುತ್ತದೆ.



‡ ಅನೇಕ ದೋಷದುಷ್ಟಸ್ಯ ಕಾಯಸ್ಯೈಕೋ ಮಹಾ ಗುಣಂ ।
ಯೋ ಯಥಾ ವರ್ತಯತ್ಯೇನಂ ತಂ ತಥಾನುವರ್ತತೇ ॥
ಶ್ರೀಮಾನ್ ರಾ. ಅನಂತಕೃಷ್ಣಶರ್ಮರ ಕೃಪೆಯಿಂದ

## ಅನಾಸಕ್ತಿಯ ಕನಸು

ಹಿಂದೂ ಧರ್ಮದಲ್ಲಿ ಪ್ರಸ್ಥಾನತ್ರಯ ಎಂದು ಮೂಲಾಧಾರವಾದ ಧರ್ಮ ಗ್ರಂಥಗಳಿಗೆ ಹೆಸರು. ಪ್ರಸ್ಥಾನ ಎಂದರೆ ಶಾಸ್ತ್ರ. ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆಗಳೇ ಆ ಮೂರು. ವೇದವು ಪರಮ. ಹಾಗೆ ಕರೆದ ಹಿರಿಯರು ಹಿಂದೂ ಧರ್ಮಕ್ಕೆ ಸಂಬಂಧಿಸಿದ ದೊಡ್ಡದೊಂದು ಸತ್ಯವನ್ನೇ ಹೇಳಿ ನಮ್ಮ ಹಾದಿಯನ್ನು ಸುಲಭಗೊಳಿಸಿದಾರೆ. ಇಂದಿಗೂ ಆ ಮೂರನ್ನು ದಾಟಿ ನಮ್ಮ ಬುದ್ಧಿ ಹರಿದಿಲ್ಲ.

ಆ ಹಿರಿಯರು ಪಂಡಿತರು, ವೇದಾಭ್ಯಾಸಿಗಳು. ಸಹಜವಾಗಿಯೇ ಕಾವ್ಯರೀತಿಯ ಗೀತೆ ಅವರಿಗೆ ಅಷ್ಟು ಪ್ರಧಾನವಾಗಲಿಲ್ಲ. ಬ್ರಹ್ಮಸೂತ್ರಗಳಿಗೆ ಅಗ್ರ ತಾಂಬೂಲಕೊಟ್ಟು ಉಪನಿಷತ್ತು ಗೀತೆಗಳನ್ನು ಎರಡನೆಯ ಸಾಲಿನಲ್ಲಿ ನಿಲ್ಲಿಸಿದರು. ಸೃಷ್ಟಿರಹಸ್ಯದ ಶೋಧನೆಯಲ್ಲಿ ಅವರ ದೃಷ್ಟಿ ನಟ್ಟುಹೋಯಿತು. ಉಪನಿಷತ್ತಿನ ಭಾವಾನಂದವಾಗಲಿ ಗೀತೆಯ ಕರ್ಮ ಕೌಶಲವಾಗಲಿ ಅವರ ಮನಸಿಗೆ ಬರಲಿಲ್ಲ.

ಗಾಂಧೀಜಿಗೆ ಹಾಗಲ್ಲ. ಇವರಿಗೆ ಗೀತೆಯೇ ಸರ್ವಸ್ವ. ಇವರಿಗೆ ಅದು ಒಂದೇ ಪ್ರಸ್ಥಾನ. ಉಳಿದ ಎರಡರ ಕಡೆ ಇವರ ಗಮನ ಹರಿದಿಲ್ಲ. ಹಗಲೂ ಇರುಳೂ ಕರ್ಮದಲ್ಲಿ ತೊಡಗಿಕೊಂಡು ಕರ್ಮಬ್ರಹ್ಮವನ್ನು ನಂಬಿದ ಈ ಸೋಮಯಾಜಿಗೆ ಇದು ಸಹಜವೇ ಆಗಿದೆ. ಬೇಲಿಯೇ ಹೊಲವನ್ನು ಮೇಯುತ್ತಿರುವ ಕಾಲ ಇದು. ನಮ್ಮ ಸುಖಸಮೃದ್ಧಿಗಾಗಿ

ಹುಟ್ಟಿದ ಭೂಮಿಯೇ–ಪ್ರಕೃತಿಯೇ–ನಮ್ಮನ್ನು ನುಂಗಲು ಬರುತ್ತಿದೆ. ಜನಸಂದಣಿಯನ್ನು ಬಿಟ್ಟು ಗುಡ್ಡಗಾಡಿನಲ್ಲಿ ಏಕಾಂತ ಪಡೆಯ ಬಹುದಾದ ಕಾಲ ಕಳೆದುಹೋಯಿತು. ಜಗತ್ತು ಹಿಂದೆ ಎಂದೂ ಕಾಣದ ಅತಿ ವೇಗದಿಂದ ಸಾಗುತ್ತಿದೆ. ಈ ಗತಿಯಲ್ಲಿ ಎಲ್ಲಿಯೂ ಏಕಾಂತವಿಲ್ಲ. ಅಂತೇ ಕರ್ಮಯೋಗದ ಅಗತ್ಯ.

ಹೇಗಾದರೂ ಆಗಲಿ. ಗಾಂಧೀಜಿಗೆ ಗೀತೆ ಕಾಮಧೇನು ಇದ್ದ ಹಾಗೆ. ಅನೇಕರಿಗೆ ಅದು ಅವರ ಬಾಳಿನ ಒಗಟನ್ನು ಬಿಡಿಸಿದೆ. 'ಅನೇಕ ಸಾವಿರ ಜನಕ್ಕೆ ಅದೇ ನಿಜವಾದ ತಾಯಿ. ಅವರಿಗೆ ಕಷ್ಟಬಂದಾಗ ಅದೇ ಶಾಂತಿ–ಸಮಾಧಾನದ ಶ್ರೇಷ್ಠವಾದ ಅಮೃತವನ್ನು ಕರೆಯುತ್ತದೆ.' ಅಂತಲೇ ಅದನ್ನು ಗೀತಾಮೃತ ಎಂದು ಜನ ಕರೆದಿದಾರೆ. ಗಾಂಧೀಜಿಗೆ ಅನೇಕ ಕ್ಲಿಷ್ಟ ಸಂದರ್ಭಗಳಲ್ಲಿ ಗೀತೆಯೇ ಬೆಳಕು ತೋರಿದೆ. ಇವರಿಗೆ ಅದು ಅಮೂಲ್ಯವಾದ ಧರ್ಮಗ್ರಂಥ; ಬ್ರಹ್ಮಜ್ಞಾನದ ಉತ್ತಮೋತ್ತಮ ಶಾಸ್ತ್ರ.' ಸಂದೇಹ ಧರ್ಮಸಂಕಟಗಳು ಬಂದಾಗೆಲ್ಲ ಇವರು ಗೀತೆಯನ್ನೇ ಶರಣು ಹೋಗಿದಾರೆ. 'ಆಪತ್ತಿನಲ್ಲಿ ಎಂದೂ ಗೀತೆ ಕೈ ಬಿಟ್ಟಿಲ್ಲ.' ಕೈ ಹಿಡಿದಿದೆ. ದಾರಿ ತೋರಿದೆ. ಅದಕ್ಕೆ ಗೀತೆ ತಮ್ಮ 'ಆಧ್ಯಾತ್ಮ ನಿಘಂಟು' ಎನ್ನುತ್ತಾರೆ ಗಾಂಧೀಜೀ. 'ಗೀತೆ ಆಧ್ಯಾತ್ಮಿಕವಾದ ವಿದ್ಯಾನಿಧಾನ. ಆತ್ಮಸಂಬಂಧವಾದ ಸಮಸ್ತ ಸಮಸ್ಯೆಗಳನ್ನು ಪರಿಷ್ಕರಿಸುವ ಸಾಧನ ರಾಜ. ಅದು ಸೂತ್ರ ಗ್ರಂಥವಲ್ಲ. ಮಹತ್ತರವಾದ ಒಂದು ಧರ್ಮಕಾವ್ಯ. ಅದನ್ನು ಸೂಕ್ಷ್ಮವಾಗಿ ಓದಿದಹಾಗೆಲ್ಲ ಹೊಸಹೊಸತಾದ ಮನೋಹರವಾದ ಅರ್ಥ ಹೊಳೆಯುತ್ತವೆ ಅದರಲ್ಲಿ ತರ್ಕದ ಫಲವಾಗಲಿ ಮೊಂಡ ಸಿದ್ಧಾಂತವಾಗಲಿ ಇಲ್ಲ. ಯಾವ ಜಾತಿ ಮತ ಪಂಥಕ್ಕೂ ಒಳಗಾಗಿಲ್ಲ. ಅದರ ಸಂದೇಶವು ಸಂಕುಚಿತವಲ್ಲ. ಇಡೀ ವಿಶ್ವಕ್ಕೇ ಸಾರಲ್ಪಟ್ಟಿದೆ.' ಅದರ ಶ್ರುತಿ ವಿಶ್ವಶ್ರುತಿ.

ಕಾರ್ಲೈಲ್ ಪಂಡಿತ ತನ್ನ ಪುಸ್ತಕ ಒಂದರಲ್ಲಿ 'ನಿನಗೆ ಸಾಮ್ರಾಜ್ಯ ಬೇಕೋ ಷೇಕ್ಸ್‌ಪಿಯರ್ ಬೇಕೋ?' ಎಂದು ಇಂಗ್ಲಿಷು ಜನವನ್ನು ಕೇಳಿ, ಅದಕ್ಕೆ ತಾನೇ ಉತ್ತರ ಕೊಟ್ಟಿದಾನೆ. 'ಸಾಮ್ರಾಜ್ಯ ಬೇಡ.

ಷೇಕ್ಸ್‌ಪಿಯರೇ ಇರಲಿ.' ನಿಜ. ಸಾಮ್ರಾಜ್ಯವೇನು ಬರೀ ಮಣ್ಣು, ಹುಸಿ. ಷೇಕ್ಸ್‌ಪಿಯರನ ಸಾಹಿತ್ಯ ಅವರ ಸಂಸ್ಕೃತಿಯ ಸಾರ. ಅದನ್ನು ಕಾಪಾಡಿಕೊಂಡರೆ ಇಂಥವು ಹತ್ತು ಸಾಮ್ರಾಜ್ಯ ಕಟ್ಟಬಹುದು ಕಾಲಬಂದಾಗ. ಕಾರ್ಲೈಲನ ಪ್ರಶ್ನೆ ಚಿರಂತನ ಪ್ರಶ್ನೆ. ಆತನ ಉತ್ತರವೂ ಚಿರಕಾಲದ ಉತ್ತರ.

ಗಾಂಧೀಜಿಯೂ ಹಾಗೆಯೆ ಅಂದಾರು. ಇಡೀ ಜಗತ್ತು ಒಂದು ತೂಕ; ಗೀತೆ ಒಂದೇ ಒಂದು ತೂಕ. ಇದೇ ಇರಲಿ. ಅದರಲ್ಲಿ ಸಂದೇಹವೇ ಇಲ್ಲ. ಗೀತೆ ಇವರ ಕಂಠಸಾಲೆ, ತಾಯಿತ್ತು. ಮೊದಮೊದಲು ಸದಾ ಗೀತೆಯ ಪ್ರತಿ ಒಂದನ್ನು ಸಂಗಡಲೇ ಇಟ್ಟಿರುತ್ತಿದ್ದರು. ಇವರ ಆಶ್ರಮದ ದಿನದ ಪ್ರಾರ್ಥನೆಯಲ್ಲಿ ಗೀತಾ ಪಠನವು ಪ್ರಧಾನಾಂಗ. ಗೀತೆ ಜನ ಸಾಮಾನ್ಯಕ್ಕೆ ತಿಳಿಯಲಿ ಎಂದೇ ಸುಲಭವಾಗಿ ಬರೆಯಲ್ಪಟ್ಟಿದೆ. ಪಂಡಿತರು ಅದರಲ್ಲಿ ನಾನಾರೀತಿಯ ಗುಹ್ಯ ಸಿದ್ಧಾಂತಗಳನ್ನು ಕಂಡುಹಿಡಿದಿದಾರೆ. ಅವರ ಪಾಂಡಿತ್ಯವೇ ಅಂಥದು. 'ಕಂಡದುದರಲ್ಲೆಲ್ಲ ಗೂಢ ತತ್ವರಹಸ್ಯಗಳನ್ನು ಕಾಣಬಲ್ಲ' ಅದ್ಭುತ ಶಕ್ತಿ ಅವರದು. ಗಾಂಧೀಜೀ ಅಂಥ ಪಾಂಡಿತ್ಯಕ್ಕೆ ದೂರದಿಂದಲೇ ಕೈಮುಗಿಯುತ್ತಾರೆ. ಗೀತೆಯಲ್ಲಿ ಅಂಥ ಕ್ಲಿಷ್ಟವೇನು ಬಂತು? ಸುಲಿದ ಬಾಳೆಯಹಣ್ಣಿನಂಥ ಗ್ರಂಥ. 'ಅದರ ಸಂಸ್ಕೃತ ಭಾಷೆ ಸುಲಭ ಎಂದರೆ ನಂಬಲಾರದಷ್ಟು ಸುಲಭ. ಹಿಂದೂ ಧರ್ಮದಲ್ಲಿ ಅಲ್ಲಿ ಇಲ್ಲಿ ಸಿಕ್ಕಾಪಟ್ಟೆ ಕೆದರಿಬಿದ್ದಿರುವ ತತ್ವ ಸಮುದಾಯವನ್ನು ಭಗವದ್ಗೀತೆ ಬಹುರೂಪಗಳಲ್ಲಿ, ಅನೇಕ ಶಬ್ದಗಳಲ್ಲಿ, ಪುನರುಕ್ತಿಗೆ ಗುರಿಯಾಗಿ, ಸ್ಪಷ್ಟವಾಗಿ ಹೇಳಿದೆ.'

ಗೀತೆ ಎಲ್ಲರಿಗೂ ಬೇಕಾದ ಗ್ರಂಥ. ಎಲ್ಲ ಪಂಥದವರಿಗೂ ಆಧಾರವಾದ ವಿರಾಟಸ್ವರೂಪಿ. ಮೊದಲಲ್ಲಿ ಕಾಲಾನುಸಾರವಾಗಿ ತಮ್ಮತಮ್ಮ ರುಚಿಗೆ ತಕ್ಕಂತೆ ಆಚಾರ್ಯರು ಅದರಲ್ಲಿ ಜ್ಞಾನ ಭಕ್ತಿ ಪ್ರಪತ್ತಿಗಳನ್ನು ಕಂಡರು. ಸರ್ವಸಂಗಪರಿತ್ಯಾಗ ಎಂದರೆ ಬೈರಾಗಿ ವಿದ್ಯೆ ಎಂದವರಿಗೂ ಸನ್ಯಾಸವೆಂದರೆ ಕರ್ಮಸನ್ಯಾಸ ಎಂದವರಿಗೂ ಅದೇ ಆಶ್ರಯ. ವೈದಿಕ ಯಜ್ಞಕರ್ಮಕ್ಕೂ ಜ್ಞಾನದ ನಿಷ್ಕಾಮಕರ್ಮಕ್ಕೂ ಅಲ್ಲೇ ತಾರು. ಗಾಂಧೀಜೀ ಈಗ ಅನಾಸಕ್ತಿಯೋಗವೇ ಗೀತೆಯ ಸಂದೇಶ

ಎನ್ನುತ್ತಿದಾರೆ. ಅನಾಸಕ್ತಿಯಿಂದ ಕರ್ಮ ಮಾಡುವುದೇ ಯೋಗ ಎಂದು ಇವರ ಮತ. ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ನಿಷ್ಕಾಮಕರ್ಮ ಎಂಬ ಮಾತು ನಮ್ಮಲ್ಲಿ ರೂಢಿಯಿತ್ತು. ನೈಷ್ಕರ್ಮ್ಯ ಸಿದ್ಧಿಗೆ, ಮೋಕ್ಷಕ್ಕೆ ನಿಷ್ಕಾಮಕರ್ಮ ಹಾದಿ ಎಂದು ಹೇಳಿತ್ತು. ಅದನ್ನೇ ಇನ್ನೂ ಸರಳವಾಗಿ ಅನಾಸಕ್ತಿಯೋಗ ಎಂದಿದಾರೆ ಗಾಂಧೀಜಿ. ಇವರು ಬರೆದಿರುವ ಗೀತಾವ್ಯಾಖ್ಯೆಗೆ ಅದೇ ಹೆಸರು. ಕರ್ಮಫಲತ್ಯಾಗ ಎಂದರೆ ಕರ್ಮತ್ಯಾಗವೂ ಅಲ್ಲ, ಕರ್ತೃತ್ವತ್ಯಾಗವೂ ಅಲ್ಲ. ನಮ್ಮ ಅಧಿಕಾರ ಬರೀ ಕರ್ಮಮಾಡುವುದು; ಫಲ ನಮ್ಮ ಕೈಯೊಳಗಿನದಲ್ಲ–ಎಂಬುದರ ಅರ್ಥ ನಾವು ಮಾವು ನಟ್ಟರೆ ಬೇವು ಆದೀತೆಂದಾಗಲಿ ಬಿತ್ತಿದ ಕಡೆ ಭೂಮಿಯೆ ಮಾಯವಾದೀತೆಂದಾಗಲಿ ಅಲ್ಲ. ನಾವು ಮಾಡುವ ಕೆಲಸದ ಫಲವೇನು ಎಂಬುದೇ ಗೊತ್ತಿಲ್ಲದ ಕರ್ಮಕ್ಕೆ ಕಣ್ಣೇ ಇಲ್ಲ. ನಮ್ಮ ಕರ್ಮ ಕುರುಡೂ ಅಲ್ಲ, ಕುಹಕವೂ ಅಲ್ಲ. 'ಮಾಡುವ ಕೆಲಸದ ಗುರಿ ಕಣ್ಣಿಗೆ ಕಟ್ಟಬೇಕು.' ಕರ್ಮದ ಹಾದಿಯಲ್ಲಿ ಕೈಗೆ ಬಂದ ಕಹಿಯ ತುತ್ತನ್ನು ಬಾಯಿಗೆ ಇಡುವ ಧೈರ್ಯ ಬೇಕು. ಇದಕ್ಕೆ ಎದೆ ಬೇಕು. ಎದೆಯಲ್ಲಿ 'ನಿಸ್ವಾರ್ಥ ಬೇಕು.' ಅಷ್ಟು ಸಾಲದು. ತನ್ನ ಕಲ್ಯಾಣಕೃತಿಯ ಅಂತಿಮ ಪರಿಣಾಮದಲ್ಲಿ ತನಗೆ ಅಚಲ ಶ್ರದ್ಧೆ ಬೇಕು. 'ಕಾಲಕ್ರಮದಲ್ಲಿ ಅದು ನಿರ್ದಿಷ್ಟ ಫಲವಾಗಿ ಪರಿಣಮಿಸೀತು ಎಂಬ ನಂಬಿಗೆ ಬೇಕು.' ಇಷ್ಟೆಲ್ಲ ಆದರೂ ಸಾಲದು. ಅನೇಕ ವೇಳೆ ತುತ್ತು ಬಾಯಿಗೆ ಬರುವುದೇ ಇಲ್ಲ. ಬರಿಯ ಕೈಕೆಸರು ಅದು ದಷ್ಟೇ ಆಗುತ್ತದೆ. ಆಗ ಸಾವಧಾನ ಬೇಕು; ತಾಳ್ಮೆ ಬೇಕು. ಅರಳಿಯ ಮರಕ್ಕೆ ನಾಲ್ಕು ಪ್ರದಕ್ಷಿಣೆ ಹಾಕಿ ಹೊಟ್ಟೆ ಮುಟ್ಟಿ ನೋಡಿಕೊಳ್ಳುವ ಆತುರಗಾತಿಯ ರೀತಿ ಸಲ್ಲದು. ಇವೆಲ್ಲವೂ ಅನಾಸಕ್ತಿಯೋಗದ ಲಕ್ಷಣ.

ಫಲದ ಆಸೆ ಬಿಟ್ಟರೆ ಫಲವೇನು ಜಾರಿ ಹೋಗುತ್ತದೆಯೆ? ಇಲ್ಲ. 'ಗೀತೆಯಲ್ಲಿ ಇಂಥ ಅರ್ಥ ಎಲ್ಲೂ ಇಲ್ಲ. ಉಳಿದವರಿಗಿಂತ ಫಲತ್ಯಾಗಿಗೇ ನಿಜವಾಗಿ ಸಾವಿರಪಾಲು ಹೆಚ್ಚಾಗಿಯೇ ಫಲ ಸಿಗುತ್ತಿದೆ. ಗೀತೆಯು ಹೇಳುವ ಫಲಪರಿತ್ಯಾಗ ಅಖಂಡಶ್ರದ್ಧೆಯ ಅಗ್ನಿಪರೀಕ್ಷೆ. ಯಾವಾಗಲೂ ಫಲ–ಪರಿಣಾಮವನ್ನು ಕುರಿತು ಯೋಚಿಸುವವನು ಸಾಮಾನ್ಯವಾಗಿ

ಕರ್ತವ್ಯಭ್ರಷ್ಟನಾಗುತ್ತಾನೆ. ಅಲ್ಲಿಂದ ಧೀರತೆ ಉಡುಗುತ್ತದೆ. ಅದರ ಹಿಂದೆಯೇ ಕ್ರೋಧ. ಕಡೆಗೆ ಅಕಾರ್ಯಗಳನ್ನು ಮಾಡುತ್ತಾನೆ. ಒಂದರಿಂದ ಮತ್ತೊಂದು; ಅದರಿಂದ ಮೂರನೆಯದು. ಹೀಗೆ ಕರ್ಮದ ಸುಳಿಯಲ್ಲಿ ಸಿಗುತ್ತಾನೆ. ಫಲಚಿಂತನೆ ಮಾಡುವವನ ಗತಿ ವಿಷಯಾಂಧನ ಗತಿ. ಅವನ ಹಾಗೆಯೆ ಸಾರಾಸಾರ ವಿವೇಚನೆ, ನೀತಿ–ಅವಿನೀತಿ, ವಿವೇಕಗಳನ್ನು ಬಿಟ್ಟು ಫಲಸಿದ್ಧಿಗಾಗಿ ಮನಸಿಗೆ ಬಂದ ಉಪಾಯಗಳನ್ನು ಅನುಸರಿಸಿ ಅದನ್ನೇ ಧರ್ಮವೆಂದು ತಿಳಿಯುತ್ತಾನೆ. ಫಲದಾಸೆ ಉಳ್ಳವನು ಪತಿತ ನಾಗುತ್ತಾನೆ. ಕರ್ಮತ್ಯಾಗಿಯೂ ಪತಿತನಾಗುತ್ತಾನೆ. ಅಸಕ್ತನಾಗಿ ಕರ್ಮ ಆಚರಿಸಿ ಫಲತ್ಯಾಗ ಮಾಡುವವನಿಗೇ ಅಭ್ಯುದಯ.

ಗೀತೆಯ ಮುಖ್ಯ ಸಂದೇಶ ಇದು: 'ಮನುಷ್ಯ ತನ್ನ ವಿಧಿಗೆ ತಾನೇ ಕರ್ತ. ತನಗೆ ಬೇಕಾದ ಕರ್ಮವನ್ನು ಮಾಡಬಹುದು. ಬೇಕಾದ ರೀತಿಯಲ್ಲಿ ಮಾಡಬಹುದು. ಆದರೆ ಫಲದ ಗೋಜಿಗೆ ಹೋಗಬಾರದು. ಅಲ್ಲೇ ಇರುವುದು ನಂಜು, ನೋವು.' 'ಪಂಜಾಬ್‌ಮೇಲ್ ನಂತೆ ಚಕ ಚಕ ಕೆಲಸಮಾಡಬೇಕು.' ಆದರೆ ಡಬ್ಬಿಗಳಂತೆ ನಮ್ಮ ಕೆಲಸಕ್ಕೆ ಜೋತು ಬೀಳಬಾರದು. ಗಾಡಿ ನಡೆಸುವ ಡ್ರೈವರನಂತೆ ಇರಬೇಕು. ಬೇಕಾದಾಗ ಬ್ರೆಕ್‌ಹಾಕಿ ನಿಲ್ಲಿಸುವಂತೆ ಇರಬೇಕು. 'ನಮ್ಮ ನಿಗ್ರಹವನ್ನು ಕಾಯ್ದು ಕೊಂಡು ಶಾಂತವಾಗಿ ಕೆಲಸಮಾಡಬೇಕು. ತೂಕ ತಪ್ಪಬಾರದು.' ಇಷ್ಟ ಬಂದಾಗ ಕೈಕಾಲನ್ನು ಚಿಪ್ಪಿನೊಳಗೆ ಎಳೆದುಕೊಳ್ಳುವ ಆಮೆಯಂತೆ 'ಬೇಕಾದಾಗ ಕೆಲಸದಿಂದ ಮುಕ್ತರಾಗುವ ತೂಕ ಹಿಡಿಯಬೇಕು.'

ಅನಾಸಕ್ತಿ–ನಿಷ್ಕಾಮಬುದ್ಧಿ ಅಂದರೆ ಬರಿಯ ಬಾಯಿಮಾತೇ? ಮಂತ್ರದ ಮಾವಿನಕಾಯೇ? ಇದು ಬರಿಯ ಬುದ್ಧಿಗೆ ಸಿಗುವುದಿಲ್ಲ. ಹೃದಯಮಂಥನ ಬೇಕು. ಈ ತ್ಯಾಗಶಕ್ತಿ ಗಳಿಸಲು ಜ್ಞಾನಬೇಕು. ವೇದಾದಿಗಳನ್ನು ಬಾಯಿಪಾಠ ಮಾಡಿ ಭೋಗಾದಿಗಳಲ್ಲಿ ಮುಳುಗಿದ, ಶೀಲದಲ್ಲಿ ಶುಚಿಯಿಲ್ಲದ ಪಾಂಡಿತ್ಯದಲ್ಲಿಲ್ಲ ಜ್ಞಾನ. ಅದೆಲ್ಲ ಒಣ ವೇದಾಂತ. ಶುಷ್ಕ, ಶೂನ್ಯ. ಜ್ಞಾನ ಶುಷ್ಕವಾಗಬಾರದೆಂದೇ ಗೀತೆಯಲ್ಲಿ ಅದಕ್ಕೆ ಭಕ್ತಿಯ ಶ್ರುತಿ ಕೂಡಿಸಲ್ಪಟ್ಟಿದೆ. ಭಕ್ತಿಗೇ ಅಗ್ರಸ್ಥಾನ ಕೊಟ್ಟಿದೆ.

'ನಾ ತಪಸ್ಕಾಯ ನಾ ಭಕ್ತಾಯ ಕದಾಚನ-ಗೀತೆ ಶ್ರದ್ಧೆ ಇಲ್ಲದರಿಗೆ ಅಲ್ಲ; ಭಕ್ತರಿಗೆ.

ಸಾಬರಮತಿಯಲ್ಲಿ ಇದ್ದಾಗ ದಿನಾಲೂ ಬೆಳಗ್ಗೆ ಪ್ರಾರ್ಥನೆಯ ಹೊತ್ತಿನಲ್ಲಿ ಗಾಂಧೀಜೀ ಪ್ರವಚನ ಮಾಡುವ ಪದ್ಧತಿ ಇಟ್ಟುಕೊಂಡಿದ್ದರು. ಪ್ರವಚನಗಳಿಗೆ ಯಾವುದಾದರೂ ಒಂದು ಗೀತಾ ಶ್ಲೋಕ ಮೂಲವಾಗುತ್ತಿತ್ತು. ಪಂಡಿತರ ಕಾಲಕ್ಷೇಪದಂತೆ ವ್ಯಾಕರಣ ತರ್ಕಗಳಲ್ಲಿ ಗಾಂಧೀಜೀ ಕಾಲಕಳೆಯುತ್ತಿರಲಿಲ್ಲ. ಅದರಲ್ಲಿ ಯಾವುದಾದರೂ ಒಂದು ಸಿದ್ಧಾಂತವನ್ನು ಪ್ರತಿಪಾದಿಸುವ ಕುದಿ ಇರುತ್ತಿರಲಿಲ್ಲ. ಆ ದಿನ ಪ್ರಾರ್ಥನೆಯಲ್ಲಿ ಹೇಳಿದ ಗೀತಾಧ್ಯಾಯದ ಬಗ್ಗೆ ಒಂದೆರಡು ಮಾತು. ಪೀಠಿಕೆಯ ಹಾಗೆ; ಆ ಅಧ್ಯಾಯದ ಅರ್ಥದ ಬಾಗಿಲು ತೆರೆವ ಹಾಗೆ.

ಅವುಗಳಲ್ಲಿ ಕೆಲವನ್ನು ಮಹದೇವ ದೇಸಾಯಿ ಜಗತ್ತಿಗಾಗಿ ಕಾದಿಟ್ಟಿದಾರೆ.

'ಒಂಬತ್ತನೆಯ ಅಧ್ಯಾಯದಲ್ಲಿ ಸರ್ವದುಃಖನಿವಾರಿಣಿಯಾದ ಅಮೃತಾಂಜನ ಇದೆ. ಆದಿಭೌತಿಕವಷ್ಟೇ ಅಲ್ಲದೆ ಆಧ್ಯಾತ್ಮಿಕವಾದ ರೋಗಗಳಿಂದಲೂ ಪೀಡಿತರಾದ ನಮಗೆ ಸರ್ವರೋಗಹರವಾದ ದಿವ್ಯೌಷಧ ಅದು. ದೇವರನ್ನು ನಂಬಿದವರಿಗೆ ನೋವಿಲ್ಲ, ನಾಶವಿಲ್ಲ. ಗೀತೆಯ ಕಾಲಕ್ಕೆ ವರ್ಣಾಶ್ರಮವು ನಿಜಾರ್ಥವನ್ನೂ ಪವಿತ್ರತೆಯನ್ನೂ ಕಳೆದುಕೊಂಡು ಈಗಿನ ಮೇಲುಕೀಳುಗಳ ಗೊಂದಲದಲ್ಲಿ ಕಾಲಿಟ್ಟಿದ್ದಿತು ಎಂದು ಈ ಅಧ್ಯಾಯದಿಂದ ತಿಳಿಯಬಹುದಾಗಿದೆ. ಆದರೆ ಗೀತೆಯ ಅಭಯ ಹಸ್ತವು ಆ ಭೇದಗಳೆಲ್ಲವನ್ನೂ ಮೀರಿದೆ. ಅವರಿವರೆನ್ನದೆ ಎಲ್ಲರಿಗೂ ದೇವರು ತನ್ನ ಅಭಯಹಸ್ತವನ್ನು ನೀಡಿದಾನೆ. ಮಾನವರು ಸುಲಭಾಪರಾಧಿಗಳು. ಸಾಧಾರಣ ಮನುಷ್ಯರಿಗಷ್ಟೇ ಅಲ್ಲ. ಪಾಪಯೋನಿಗಳಿಗೂ ಪಾಪಸಂಭವರಿಗೂ ಆ ವರವು ಕರುಣಿಸಲ್ಪಟ್ಟಿದೆ. ಆ ಆಶ್ವಾಸನ ಕೊಡಲ್ಪಟ್ಟಿದೆ. ಅಲ್ಲಿಗೇ ಮುಗಿಯಲಿಲ್ಲ. ಅತಿ ಚೇತನ್ನ ದುರಾಚಾರೋ-ಪಾಪದಲ್ಲೇ ಮುಳುಗಿದ್ದರೂ ಬಾಧಕವಿಲ್ಲ. ನಮ್ಮ ಯೋಗಕ್ಷೇಮ ಆತನಿಗೆ ಸೇರಿದುದು. ಆದರೆ ನಮ್ಮಲ್ಲಿ ಯಾರು ಪಾಪಾತ್ಮರಲ್ಲದವರು? ಯಾರು

ದುರಾಚಾರಿಗಳಲ್ಲದವರು? ಯಾರ ಕಡೆ ಯಾರು ಬೆರಳು ಮಾಡಿ ತೋರಿಸ ಬಲ್ಲರು? ಆ ಧೈರ್ಯ ಯಾರಿಗೆ ಉಂಟು?

ನಮೋ ಭಕ್ತಃ ಪ್ರಣಶ್ಯತಿ–ನನ್ನನ್ನು ನಂಬಿದವರು ಯಾರೂ ನಾಶ ವಾಗರು. ಪ್ರತಿಜಾನೀಹಿ–ಇದನ್ನು ಗಟ್ಟಿಯಾಗಿ ತಿಳಿ. ಹೀಗೆ ಭಗವಂತನು ಮುಕ್ತಕಂಠನಾಗಿ ಹೇಳಿದಾನೆ. ಆದರೆ ಯಾವ ಪ್ರಯತ್ನವನ್ನೂ ಮಾಡದೆ ಬರಿಯ ನಂಬಿದರೆ ಸಾಕೆ? ಸಾಲದು. ಅಷ್ಟುಮಾತ್ರದಿಂದಲೇ ನಮ್ಮ ಪಾಪ ವೆಲ್ಲ ಹರಿಯುತ್ತದೆ ಎಂದು ಯಾರೂ ತಿಳಿಯಬಾರದು. ಇಂದ್ರಿಯವಿಷಯ ಗಳ ಮೋಹವನ್ನು ಗೆಲ್ಲಲು ಪೂರಾ ಪ್ರಯತ್ನಪಟ್ಟು ಕಷ್ಟದಲ್ಲಿಯೂ ಕಂಬನಿಯಲ್ಲಿಯೂ ದೇವರನ್ನು ಮೊರೆ ಹೋದವನಿಗೆ ಆ ಸಮಾಧಾನ, ಆ ಯೋಗಕ್ಷೇಮ. ಆ ಔಷಧಿ ಸಿಕ್ಕೀತು.'

ಹನ್ನೊಂದು ಹನ್ನೆರಡು:

'ಅದ್ಭುತವಾದ ಈ ವಿಶ್ವರೂಪ ಸಂದರ್ಶನಕ್ಕಿಂತ ನಮ್ಮ ಮನಸ್ಸನ್ನು ದೇವರ ಕಡೆ ಸೆಳೆಯಲು ಮತ್ತೇನು ಬಲವತ್ತರ ಸಾಧನ ಇದ್ದೀತು! ಹೀಗೆ ನಮ್ಮ ಮನಸ್ಸನ್ನು ಭಕ್ತಿಗೆ ಹದಗೊಳಿಸಿ ಹಸನುಮಾಡಿ ಹನ್ನೆರ ಡನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ನಮಗೆ ಭಕ್ತಿಯ ಸಾರಸಂಗ್ರಹ ವನ್ನೇ ಕೊಟ್ಟಿದಾನೆ. ಆ ಅಧ್ಯಾಯ ಬಹಳ ಚಿಕ್ಕದು, ಅತಿಸಂಗ್ರಹ. ಸಂಕಟದ ಸಮಯದಲ್ಲಿ ಸಹಾಯವಾಗಿ ತಟ್ಟನೆ ನೆನಪುಮಾಡಿಕೊಳ್ಳಲು ಅನುಕೂಲ ಆಗುವಂತೆ ಸುಲಭವಾಗಿ ಬಾಯಿಪಾಠ ಮಾಡಬಹುದು.

ಗೀತೆಯ ಭಕ್ತಿ ಮಿಥ್ಯಾವಸ್ತುವೂ ಅಲ್ಲ. ಅಂಧಶ್ರದ್ಧೆಯೂ ಅಲ್ಲ. ಅಲ್ಲಿ ಬಂದಿರುವ ಕೆಲವು ಮಾತು ಬಾಹ್ಯೋಪಚಾರಕ್ಕೆ ಸಂಬಂಧಿಸಿವೆ. ನಿಜ. ಭಕ್ತರು ಜಪಮಾಲೆ ತಿಲಕ ಅರ್ಘ್ಯ ಮೊದಲಾದ ಉಪಾಯ ಹೂಡಿ ದರೆ ಹೂಡಲಿ. ಅವು ಭಕ್ತಿಯ ಲಕ್ಷಣಗಳೇನು ಅಲ್ಲ. ಯಾರೊಡನೆಯೂ ಹಗೆ ಇಲ್ಲದೆ, ಕಾರುಣ್ಯನಿಧಿ ಆಗಿ, ಅಹಂಕಾರ ಮಮಕಾರ ಬಿಟ್ಟು ಶೀತೋಷ್ಣ, ಸುಖದುಃಖಗಳನ್ನು ಸಮವಾಗಿ ತಿಳಿದು, ನಿತ್ಯಸಂತುಷ್ಟ ನಾದ ಸಹನಶೀಲನು ಭಕ್ತ. ಅವನಿಗೆ ದೃಢನಿಶ್ಚಯ ಭಗವದರ್ಪಿತ ಚಿತ್ತ ಗಳು ಬೇಕು. ಲೋಕಕ್ಕೆ ಅವನಿಂದ ಹೆದರಿಕೆ ಇಲ್ಲ. ಅವನು ಲೋಕಕ್ಕೆ

ಅಂಜುವಹಾಗಿಲ್ಲ. ಇದು ಶುಭ, ಅದು ಅಶುಭ ಎಂಬುದಿಲ್ಲ. ಶತ್ರುಮಿತ್ರ ಎಂಬುದಿಲ್ಲ. ಎಲ್ಲರೂ ಸಮ. ಮಾನಾಪಮಾನವೂ ಅಷ್ಟೆ. ಇಂಥವನಿಗೆ ನಿಂದೆ ಸ್ತುತಿಗಳು ಎರಡೂ ಒಂದೇ. ಮೌನ ಸ್ಥಿರಬುದ್ಧಿಗಳು ಅವನ ಸ್ವಭಾವ. ಇಂಥ ಪವಿತ್ರ ಭಕ್ತಿ ಆಸಕ್ತರಿಗೆ ಸಾಧ್ಯವೇ?'

ಹದಿನಾಲ್ಕು–ಹದಿನೈದು :

'೧೪ನೆಯ ಅಧ್ಯಾಯದ ಗುಣತ್ರಯ ವಿಭಾಗವು ೩೦ ವರ್ಷದ ಕೆಳಗೆ ನಾನು ಓದಿದ್ದ ಹೆನ್ರಿ ಡ್ರಮ್ಮಂಡರ ಆಧ್ಯಾತ್ಮ ಪ್ರಪಂಚದಲ್ಲಿ ಪ್ರಾಕೃತಿಕ ನಿಯಮ ಎಂಬ ಪುಸ್ತಕವನ್ನು ನೆನಪು ಮಾಡುತ್ತಿದೆ. ನಿಯಮಗಳು ಬೇಕಾದಷ್ಟು ಇವೆ ಆಗಲಿ ಮುಖ್ಯ ವಿಭಾಗಗಳು ಮೂರು. ಈ ಅಧ್ಯಾಯವು ಮನುಷ್ಯಜೀವನವನ್ನು ನಡೆಯಿಸುವ ನಿಯಮಗಳನ್ನು ತಿಳಿಸುತ್ತದೆ.

೧೫ರಲ್ಲಿ ಪರಿಪೂರ್ಣ ಮಾನವನ–ಪುರುಷೋತ್ತಮನ–ಚಿತ್ರ ಇದೆ. ಈ ಅಧ್ಯಾಯದಿಂದ ನಾವು ತಿಳಿಯಬೇಕಾದುದು ಮಾನವನ 'ಸ್ವರ್ಗಾರೋಹಣ' ರಹಸ್ಯ. ಮನುಷ್ಯರಲ್ಲಿ ಯಾರೂ ಒಂದೇ ಗುಣದವರಿಲ್ಲ. ಸತ್ವ ರಜಸ್ ತಮಸ್ ಮೂರೂ ಎಲ್ಲರಲ್ಲಿಯೂ ಇವೆ. ನಾವೆಲ್ಲ, ಪ್ರತಿಯೊಬ್ಬರೂ ಸತ್ವಗುಣ ಪ್ರಧಾನವಾದ ಸ್ಥಿತಿಗೆ ಏರಬೇಕು. ಕಡೆಗೆ ಮೂರೂ ಗುಣಗಳನ್ನು ಮೀರಿ 'ಪುರುಷೋತ್ತಮ'ರಾಗಬೇಕು. ಭೌತಿಕ ಪ್ರಪಂಚದ ಉದಾಹರಣೆ ಹೀಗೊಂದು ಹೇಳಬಹುದು. ನೀರು ನೋಡಿ; ಘನ ಸ್ವರೂಪದಲ್ಲಿ ನೆಲದ ಮೇಲೆಯೆ ಇರುತ್ತದೆ. ಮೇಲೇರಲಾರದು. ಅದನ್ನೇ ಹಬೆಯಾಗಿ ಮಾಡಿದರೆ ಮೇಲೆ ಏರುತ್ತದೆ. ಮೇಲೇರಿ ಆಕಾಶದಲ್ಲಿ ಸೇರಿ ಅಲ್ಲಿ ಮೋಡವಾಗುತ್ತದೆ; ಮತ್ತೆ ಮಳೆಯಾಗಿ ಭೂಮಿಗೆ ಇಳಿದು ಫಲದಾಯಿನಿಯೂ ವರಪ್ರಸಾದಿನಿಯೂ ಆಗುತ್ತದೆ. ನಾವು ಎಲ್ಲರೂ ನೀರಿನಂತೆ. ನಮ್ಮ ಒಳಗಿನ ಅಹಂಕಾರ ಸಾಯುವಂತೆ ನಮ್ಮನ್ನು ಹಬೆ ಆಗಿಸಿಕೊಳ್ಳಬೇಕು. ಆಗ ನಾವೂ ಅನಂತನಾದ ಪರಮೇಶ್ವರನಲ್ಲಿ ಬೆರೆತು ಜಗದ್ಧಿತ ಆದೀತು.'

ಗಾಂಧೀಜೀ ಆರೋಗ್ಯಕ್ಕಾಗಿ ನಂದೀ ಬೆಟ್ಟದಲ್ಲಿ ವಾಸವಾಗಿದ್ದರಲ್ಲ.

ಅಲ್ಲಿಯೂ ದಿನವೂ ಪ್ರಾರ್ಥನೆ ನಡೆದೇ ಇತ್ತು. ನಂದೀ ಬೆಟ್ಟವನ್ನು ಬಿಡುವಾಗ ಕಡೆಯದಿನ ಬೆಳಗಿನ ಪ್ರಾರ್ಥನೆಯಲ್ಲಿ ಸ್ವಯಂಸೇವಕರಿಗೆಲ್ಲ ಗಾಂಧೀಜೀ ಸ್ವಯಂಗೀತೆಯ ಪ್ರತಿಗಳನ್ನು ಹಂಚಿದರು. ಎಲ್ಲದರಲ್ಲಿಯೂ ಅವರ ಸ್ವಹಸ್ತಾಕ್ಷರ. ಆದಿನ ಮೂರನೆಯ ಅಧ್ಯಾಯ. ಅದರ ಬಗ್ಗೆಯೇ ಮಾತಾಡಿದರು.

'ಗೀತೆ ನಮಗೆ ಒಂದು ನಡೆನುಡಿಯ ಕೈಪಿಡಿ. ನಿಮಗೆ ಸಂದೇಹ ಬಂದಾಗ, ಅಶಾಂತಿ ಆಪತ್ತು ಕಾಡಿದಾಗ ಗೀತೆಯನ್ನು ಶರಣುಹೋಗಿರಿ. ಮೂರನೆಯ ಅಧ್ಯಾಯಕ್ಕಿಂತ ಹೆಚ್ಚಿನ ಶಾಂತಿ ಉಂಟೆ? ಯಜ್ಞ ಚಕ್ರದ ರಹಸ್ಯವೆಲ್ಲ ಅದರಲ್ಲಿ ಅಡಗಿದೆ. ದೇವರು ನರನನ್ನು ಹುಟ್ಟಿಸಿದ. ಹುಟ್ಟಿಸಿ ಅವನ ಕತ್ತಿಗೆ ಯಜ್ಞದ ತಾಳೀ ಕಟ್ಟಿದ. ಯಜ್ಞ ಅಂದರೆ ತ್ಯಾಗ. ಎರಡೂ ಅಷ್ಟೇ. ಆತ್ಮಶುದ್ಧಿಗಾಗಿ. ಯಜ್ಞದಿಂದಲೇ ಕುಲವೃದ್ಧಿ ಎಂದು ಭಗವಂತನು ಹೇಳಿದಾನೆ. ಯಜ್ಞ ಎಂದರೆ ಸೇವೆ. ಗೀತೆ ಹೇಳಿಲ್ಲವೆ? ಕೇವಲ ತನಗಾಗಿಯೆ ಕರ್ಮ ಮಾಡುವವನು ಕಳ್ಳ. ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ–ದೇವತೆಗಳನ್ನು ಯಜ್ಞದಿಂದ ನೀವು ಪೋಷಿಸಿರಿ. ಅವರೂ ನಿಮ್ಮನ್ನು ಪೋಷಿಸಿಯಾರು. ಇಷ್ಟ ಭೋಗಗಳನ್ನು ಕೊಟ್ಟಾರು. ಆರಯ್ದು ನೋಡಿದರೆ ಯಜ್ಞ ಎಂಬುದು ಜಗದ್ಧಿತಕ್ಕಾಗಿ ಮಾಡಿದ ಆತ್ಮತ್ಯಾಗ. ನಮಗೆ ಕಷ್ಟಬಂದರೆ ಬರಲಿ. ಅದರಿಂದ ಇತರರಿಗೆ ಸುಖವಾದರೆ ಸಾಕು. ಸಂಗಾತಿಗಳಿಗಾಗಿ ನರಕೋಟಿಗಾಗಿ ಆತ್ಮತ್ಯಾಗ ಮಾಡುವುದೇ ಪವಿತ್ರಪ್ರೇಮ-ಉದಾತ್ತ ಸೇವೆಗಳ ಪರಮಾವಧಿ. ಅತ್ಯುಚ್ಚ ಪ್ರೇಮ ಎಂದರೆ ಅಹಿಂಸೆಯ ಉದಾತ್ತಸೇವೆ. ಸಾವು ಬಾಳುಗಳ ನಡುವೆ ಸದಾ ಕದನ ಆಗುತ್ತಿದೆ. ಅದು ನಿತ್ಯಯುದ್ಧ. ಸಾವು ಬದುಕುಗಳ ಅಂತಿಮ ಪರಿಣಾಮ ಸಾವು ಅಲ್ಲ. ಬದುಕು. ಏಕೆ? ಸಾವಿನ ನಡುವೆ ಬಾಳು ಬದುಕುತ್ತಿದೆ; ಸಾಗುತ್ತಲೇ ಇದೆ. ಅಹಿಂಸೆಯ ಹೆಚ್ಚಳಕ್ಕೆ ಇದೇ ಪ್ರತ್ಯಕ್ಷ ಪ್ರಮಾಣ. ಯಜ್ಞದಿಂದ ಅಲ್ಲದೆ ಅಹಿಂಸೆಯ ಈ ವಿಜಯವು ಅನ್ಯಥಾ ಸಾಧ್ಯವಿಲ್ಲ. ಯಜ್ಞಕ್ಕಿಂತ ಹೆಚ್ಚಿನ ನಿಯಮ ಇಲ್ಲ. ಅದು ಸೇವಾ ನಿಯಮ–ಕೈಂಕರ್ಯ.

ಈಗ ನಾವು ಗೀತಾಪಾಠವನ್ನು ಮರೆತಿದೇವೆ. ನಮ್ಮ ಮಕ್ಕಳಿಗೆ ಅಂತೂ ಅದರ ಗಂಧವನ್ನೇ ತೋರಿಸುವುದಿಲ್ಲ. ಹೀಗಿರುವಾಗ ಗೀತಾ ನಾಯಕ ಕೃಷ್ಣನ ಬೆಲೆ ನಮಗೆ ಹೇಗೆ ತಿಳಿದೀತು? ಪ್ರತಿ ಗೋಕುಲಾ ಷ್ಟಮಿಯ ದಿನವೂ ಕೃಷ್ಣನನ್ನು ನೆನೆದು ಗೀತೆ ಓದಿ ಅದರ ತತ್ವಗಳನ್ನು ಆಚರಿಸುವ ಪ್ರಯತ್ನ ಮಾಡಿದ್ದರೆ ನಮಗೆ ಈಗ ಬಂದಿರುವ ಗತಿ ಬರು ತ್ತಿತ್ತೆ? ಶ್ರೀಕೃಷ್ಣನು ನಿಜವಾದ ಸಮಾಜಸೇವಕ. ತನ್ನ ಬದುಕನ್ನೆಲ್ಲ ಜನಸೇವೆಯಲ್ಲಿಯೆ ಕಳೆದ. ನಾಯಕನಾಗಿ ಪಡೆಗಳನ್ನು ನಡೆಸಬಹುದಾ ಗಿತ್ತು ಕುರುಕ್ಷೇತ್ರದಲ್ಲಿ. ಹಾಗೆ ಮಾಡದೆ ಅರ್ಜುನನ ಸಾರಥಿಯಾಗಲು ಒಪ್ಪಿಕೊಂಡ. ಅವನ ಜೀವನವೆಲ್ಲ ಇಡಿಗೆ ಇಡಿಯೆ ಅವಿಚ್ಛಿನ್ನ ಕರ್ಮದ ಒಂದು ಗೀತೆ ಆಗಿದೆ. ಚಕ್ರವರ್ತಿ ದುರ್ಯೋಧನನ ಮೃಷ್ಟಾನ್ನಬಿಟ್ಟು ದರಿದ್ರ ವಿದುರನ ಗಂಜಿಗೆ ಬಾಯೊಡ್ಡಿದ. ಬಾಲ್ಯದಲ್ಲಿ ದನ ಕಾಯ್ದು ಇಂದಿಗೂ ಗೋಪಾಲ ಎನಿಸಿಕೊಂಡಿದಾನೆ. ಕೃಷ್ಣನಿಗೆ ನಿದ್ದೆ ಇಲ್ಲ, ನಿರು ದ್ಯೋಗ ಇಲ್ಲ. ಪ್ರಪಂಚದ ಯೋಗಕ್ಷೇಮವನ್ನೇ ನಿದ್ದೆಯಿಲ್ಲದೆ ಹೊತ್ತು ಕಾಪಾಡಿದ. ಗೀತೆಯಲ್ಲಿ ಕೃಷ್ಣ ಭಕ್ತಿಪಥ ತೋರಿದಾನೆ. ಭಕ್ತಿ ಎಂದರೆ ಕರ್ಮ. ಲೋಕಮಾನ್ಯ ಟಿಳಕರು ಹೇಳಿಲ್ಲವೆ? ಜ್ಞಾನಕ್ಕಾಗಲಿ ಭಕ್ತಿಗೆ ಆಗಲಿ ಕರ್ಮವೇ ದಾರಿ. ಇಷ್ಟೇ; ಆ ಕರ್ಮ ಸ್ವಾರ್ಥಕ್ಕಾಗಿ ಮಾಡ ಬಾರದು. ಪರಹಿತಕ್ಕಾಗಿ ಮಾಡಬೇಕು. ಸ್ವಾರ್ಥ ಕರ್ಮವು ಬಂಧನ. ಪರಾರ್ಥ ಕರ್ಮವು ಅದನ್ನು ಬಿಡಿಸುತ್ತದೆ.'

ಗಾಂಧೀಜಿಗೆ ಮೊದಲು ಗೀತೆಯ ಪರಿಚಯ ಆದುದು ಇಂಗ್ಲೀಷು ಭಾಷಾಂತರದ ಮೂಲಕ. ತರುವಾಯ ಅವರ ಭಿನ್ನ ಭಿನ್ನ ಮತ ಪರಿಚಯವೂ ಸತ್ಯಶೋಧನೆಯೂ ಬೆಳೆದಿವೆ. ಎಲ್ಲ ಧರ್ಮಗ್ರಂಥಗಳನ್ನೂ ನೋಡಿದಾರೆ. ಬೈಬಲ್ಲಿನ ಹಲವು ಭಾಗವನ್ನು ಓದಿ ಮುಗ್ಧರಾಗಿದಾರೆ. ಇಸ್ಲಾಮಿನಲ್ಲಿ ಅಹಿಂಸೆಗೆ ಸ್ಥಾನ ಇದೆ ಎಂಬ ಸಾಹಸ ಮಾಡಿದಾರೆ. ಆದರೆ ಅವರಿಗೆ ಚುಕ್ಕಾಣಿ ಗೀತೆಯೇ.

'ಗೀತೆಯ ದ್ವಿತೀಯಾಧ್ಯಾಯದ

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೆ**
**ಸಂಗಾತ್ ಸಂಜಾಯತೆ ಕಾಮಃ ಕಾಮಾತ್ ಕ್ರೋಧೋಭಿಜಾಯತೆ ||**

**ಕ್ರೋಧಾತ್ ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿ ವಿಭ್ರಮಃ**
**ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ||**

ಎಂಬ ಶ್ಲೋಕಗಳು ಮನಸ್ಸಿಗೆ ನಾಟಿದವು' ಗಾಂಧೀಜಿಗೆ. ಅವರಿಗೆ 'ಆ ಶ್ಲೋಕಗಳ ದನಿ ಇಂದಿಗೂ ಕಿವಿಯಲ್ಲಿ ಗುಂಯು ಅನ್ನುತ್ತಿದೆ. ಗೀತೆಯ ತತ್ವ ಎಲ್ಲ ಎರಡನೆಯ ಅಧ್ಯಾಯದಲ್ಲಿ ಅಡಕವಾಗಿದೆ. ಮೂರನೆಯದರಲ್ಲಿ ಆ ಸಂದೇಶದ ಹಾದಿ ಇದೆ. ಹೀಗೆಂದರೆ ಉಳಿದ ಅಧ್ಯಾಯಗಳಿಗೆ ಬೆಲೆ ಕೀಳು ಎಂದಲ್ಲ. ಪ್ರತಿ ಅಧ್ಯಾಯಕ್ಕೂ ಅದರದರ ಬೆಲೆ ಇದ್ದೇ ಇದೆ.' ಮಾನವನ ಗುರಿ ಎರಡನೆಯ ಅಧ್ಯಾಯದಲ್ಲಿ ವರ್ಣಿತವಾಗಿದೆ. ಮಾನವನು 'ಸ್ಥಿತಪ್ರಜ್ಞ' ನಾಗಬೇಕು. 'ಬ್ರಾಹ್ಮೀ ಸ್ಥಿತಿ' ಯನ್ನು ಪಡೆಯಬೇಕು. ಅದುವೆ ಲಕ್ಷ್ಯ. ಮೂರನೆಯ ಅಧ್ಯಾಯದಲ್ಲಿ ಉಪಾಯ ನಿರೂಪಣೆ. ಅಲ್ಲಿಂದ ಮುಂದೆ ಅದೇ.

ಗೀತೆ ಎಲ್ಲರಿಗೂ ಬೇಕಾದ ಗ್ರಂಥ ಎಂದು ಹೇಳಿತು. ಆ ಸರ್ವ ಜನಾದರಣೆಯ ಗುಟ್ಟು ಎಲ್ಲ ಧರ್ಮಗ್ರಂಥಗಳ ಗುಟ್ಟು. 'ಸ್ವಾನುಭವದ ಸತ್ಯ ಚಿತ್ರಗಳು' ಅವು. 'ತಮ್ಮ ತತ್ವಗಳಿಗೆ ಅನುಸಾರವಾಗಿ ಆಯಾ ಜನ ಸಾಧ್ಯವಿದ್ದಷ್ಟು ನಡೆದುಕೊಂಡಿದಾರೆ. ಕೃತಿಕರ್ತ್ರರು ತಮ್ಮ ಕೃತಿಗಳಲ್ಲಿ ಪ್ರಾಣತುಂಬಿದಾರೆ. ಭಕ್ತರು ಅವನ್ನು ಅನುಸರಿಸಿ ಬಾಳಿ ಅವಕ್ಕೆ ಪುಷ್ಟಿ ಕೊಟ್ಟಿದಾರೆ. ಗೀತೆಯ ಗುಟ್ಟಾದರೂ ಇದೇ.'

ಗೀತೆಯಲ್ಲಿ ಸಂಪ್ರದಾಯವಾದ ಇದೆಯೆ? ಎಂದು ಪಂಡಿತರು ಒಬ್ಬರು ಎರಡು ಲೇಖನ ಬರೆದು ಅದನ್ನು ಗಾಂಧೀಜಿಗೆ ಪರಾಮರ್ಶೆಗಾಗಿ ಕಳಿಸಿದರು. ಅವರು ಆಗ ಯರವಡಾ ಜೈಲಿನಲ್ಲಿ ಇದ್ದರು. ಅದಕ್ಕೆ ಬರೆದ ಉತ್ತರ ಸ್ವಾರಸ್ಯವಾಗಿ ಇದೆ. 'ಗೀತೆಯ ಬಗ್ಗೆ ನೀವು ಬರೆದ ಎರಡೂ ಲೇಖನ ಓದಿದೆ. ಚೆನ್ನಾಗಿವೆ. ನಾನು ಬೇರೆ ಹಾದಿಯಿಂದ ಬಂದ ನಿರ್ಣಯಕ್ಕೇ ನೀವೂ ಬಂದಿದೀರಿ. ಆದರೆ ನಿಮ್ಮದು ಪಾಂಡಿತ್ಯದ ದಾರಿ. ನನ್ನದು ಹಾಗಲ್ಲ.' ವ್ಯಾಕರಣ ತರ್ಕಗಳಲ್ಲ ಗಾಂಧೀಜಿಯ ಒರೆಗಲ್ಲು— ಜೀವನ.

ನಾವು ಬುದ್ಧಿವಿಲಾಸ ಪ್ರಿಯರು. ಬರೀ ಪೃಥಕ್ಕರಣವಾದಿಗಳು.

ಆಚರಣೆ ನಂಬಿಗೆಗಳು ಇಲ್ಲ. ಸಿದ್ಧಾಂತಗಳ ಬಾಯಿಪಾಠದಲ್ಲಿ ನಮ್ಮನ್ನು ಮೀರಿಸಿದವರು ಇಲ್ಲ. ಗಾಂಧೀಜೀ ನಮ್ಮ ಹಾಗೆ ಸಿದ್ಧಾಂತಿ ಅಲ್ಲ. ಜೀವನ–ಆಚಾರ, ನಂಬಿಗೆ ಅನುಭೂತಿ ಎಲ್ಲವೂ ಅವರಿಗೆ ಆಧಾರ. ಅವರಲ್ಲಿ ಪೃಥಕ್ಕರಣ ಇಲ್ಲ. ಸಾಮಂಜಸ್ಯ ಮೇಳನ. ಅವರ ದೃಷ್ಟಿ ವಸ್ತುಸಂಗ್ರಹದ್ದು ಅಲ್ಲ; ಲೋಕಸಂಗ್ರಹದ್ದು. ಒಂದು ಗೆರೆಯಲ್ಲಿ ಕಣ್ಣಿಗೆ ಕಾಣದೆ ಇದ್ದರೂ ಅನಂತ ಬಿಂದುಗಳು ಇವೆ. ಬಾಳಿನಲ್ಲಿ ಸತ್ಯವು ಕಾಣದೆ ಇದ್ದರೂ ಎಲ್ಲವನ್ನೂ ಕವಿದಿದೆ. ವಿಶ್ವದಲ್ಲಿಯೂ ಅಷ್ಟೆ. ಸತ್ಯ ಇಲ್ಲ ಎಂಬ ಸ್ಥಳವೇ ಇಲ್ಲ. ಆದುದರಿಂದಲೇ ಎಲ್ಲ ರಂಗಗಳಲ್ಲಿಯೂ ಸತ್ಯದರ್ಶನ ಮಾಡಿಕೊಳ್ಳಬೇಕು. ಅಂದರೆ ಬಾಳಿನಲ್ಲಿ ನಿರಂತರ ನಿರೀಕ್ಷೆ ಪರೀಕ್ಷೆ ಪರಿಷ್ಕರಣದ ಹಾದಿ ಹಿಡಿಯಬೇಕು. ಪ್ರಯತ್ನ ಶೀಲತೆ ಜಾಗರೂಕತೆಗಳ ಬದುಕು ಆಗಬೇಕು. ಅಭ್ಯಾಸಯೋಗವನ್ನು ಪಾಲಿಸಬೇಕು. ಸರ್ವಭೂತಗಳಿಗೆ ಕತ್ತಲು ಇದ್ದಲ್ಲಿ ತಾನು ಎಚ್ಚರದಿಂದ ಇರಬೇಕು. ಆ ಯೋಗಜೀವನದ ಮಾದರಿ ಗಾಂಧೀಜೀ.

ಅನಾಸಕ್ತಿಯಿಂದ ಮೋಕ್ಷ ದೊರೆತೀತೇ ಎಂಬ ಪ್ರಶ್ನೆ ಗಾಂಧೀಜಿಗೆ ದೊಡ್ಡದಾಗಿ ಕಂಡಿಲ್ಲ. ಅವರಿಗೆ ಮೋಕ್ಷದ ಬಗ್ಗೆ ಅಷ್ಟಾಗಿ ರಾಗವಿಲ್ಲ. ಮೋಕ್ಷದಲ್ಲಿ ಏನೋ ಸ್ವಾರ್ಥದ ದೋಷ ಇದ್ದ ಹಾಗೆ ಇದೆ ಎಂಬುದು ಅವರ ಅಭಿಪ್ರಾಯವೋ ಏನೋ. ಮೋಕ್ಷವೆಂದರೆ ದೇಹಾವಸಾನದ ತರುವಾಯ ದೊರೆವ ಸ್ಥಿತಿ ಎಂದು ಅವರು ತಿಳಿದಂತೆ ತೋರುವುದಿಲ್ಲ. ಇಲ್ಲಿ ಸಿಗಲಾರದ ಮೋಕ್ಷ ಅಲ್ಲಿ ಇನ್ನೇನು? ಬದುಕಿನೊಳಗೆ ಇಲ್ಲದ ಮುಕ್ತಿ ಸಾವಿನೊಳಗೆ ಇರಬಹುದೆ ಎಂದಿದಾನೆ ಕಬೀರದಾಸ. ಬಹುಶಃ ಅವರೂ ಹಾಗೆಯೆ ತಿಳಿದಿರಬೇಕು. 'ಒಮ್ಮೆ ಸಂಕಲ್ಪ ಮಾಡಿ ಕೂತು ಮುಕ್ತಿಸಾಧನೆಗಾಗಿ ಪೂರ್ಣ ಧ್ಯಾನಮಗ್ನನಾದೆನೆಂದರೆ ಸಿದ್ಧಿ ಆಗುವವರೆಗೆ ಕದಲಲಿಕ್ಕಿಲ್ಲ' ಎಂದಿದಾರೆ. ಅಲ್ಲದೆ ಹೀಗೂ ಇರಬಹುದು. ಗಾಂಧೀಜಿಗೆ ನಿಷ್ಠೆಯೇ ಸಾಕ್ಷಾತ್ಕಾರ. ಸಾಧನೆಯೂ ಸಿದ್ಧಿಯೂ ಅವರಿಗೆ ಒಂದೇ. ಅವರಿಗೆ ಸಾಧನೆಯೇ ಮೋಕ್ಷ. ಸಿದ್ಧಿ ಬಂದಾಗ ಬರಲಿ ಎಂಬ ಅನಾಸಕ್ತಿ.

ಆದರೆ ಗಾಂಧೀಜಿಯ ಅನಾಸಕ್ತಿಯಲ್ಲಿ ಪುಕ್ಕಲುತನ ಇಲ್ಲ. ತಾಟಸ್ಥ್ಯ ಇಲ್ಲ. ತಾನು ಒಬ್ಬನು ಒಳ್ಳೆಯವನು ಆದರೆ ಸಾಲದು. ತನ್ನ ಸುತ್ತಲಿನ ವಾತಾವರಣ ಒಳ್ಳೆಯದಾಗಬೇಕು. ಅಸತ್ಯ ಹಿಂಸೆಗಳು ಸುತ್ತಲೂ ಉರಿಯುವಾಗ ಸತ್ಯವಂತನ ಸತ್ಯ ಸುಮ್ಮನೆ ಇರುವುದರಲ್ಲಿ ಇಲ್ಲ. ತನ್ನ ಪಾಲಿನದಾಗಲಿ ಮಂದಿಯ ಮೇಲಿನದೆ ಆಗಲಿ ದೌರ್ಜನ್ಯ ವನ್ನು ಇದುರಿಸಬೇಕಾದುದು ಅವನ ಕರ್ತವ್ಯ. ಆತ್ಮರಕ್ಷಣೆ ಆತ್ಮೋನ್ನತಿ ಗಳು ಎಲ್ಲರಿಗೂ ಸಹಜವಾದ ಗುಣ. ಅನಾಸಕ್ತರಿಗೆ ತಾನು ಅವರು ಎಂಬ ಸ್ವಪರ ಭೇದ ಇಲ್ಲ. ನೆರೆಮನೆಯ ಹುಡುಗಿಯ ಮೇಲೆ ದುಷ್ಟ ಒಬ್ಬ ಅತ್ಯಾಚಾರ ಮಾಡಲು ಬಂದರೆ ಆಕೆ ನನ್ನ ತಂಗಿ ಅಲ್ಲ ಎಂದು ಸುಮ್ಮ ನಿರಬಹುದೇ? ಅದು ಮಾನವ ಧರ್ಮವೇ? ಅನ್ಯಾಯ ಯಾರಿಗೆ ನಡೆದರೆ ಏನು? ನ್ಯಾಯವಂತನು ನೋಡಿ ಸಹಿಸಬಲ್ಲನೇ? ಇದು ಅನಾಸಕ್ತಿ ಅಲ್ಲ. ನಿಜವಾಗಿ ಪೂರಾ ಆಸಕ್ತಿ. ಇಡೀ ಮಾನವ ಜೀವನದಲ್ಲೇ ದೃಢವಾದ ತೀವ್ರವಾದ ಆಸಕ್ತಿ.

ಮಾಲ್ಜೀ ದೇಸಾಯಿ ಗಾಂಧೀ ಶಿಷ್ಯರಲ್ಲಿ ಒಬ್ಬರು. ಗೀತೆಯ ಶ್ಲೋಕಗಳಲ್ಲಿ ಎರಡನ್ನು ಕೂಡಿಸಿ ಒಂದು ಶ್ಲೋಕ ಮಾಡಿ ಗಾಂಧೀಜಿಯ ಸಿದ್ಧಾಂತವನ್ನು ತಿಳಿಸಲು ಯತ್ನಿಸಿದಾರೆ.

**ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ**
**ಧರ್ಮಸಂಸ್ಥಾಪನಾರ್ಥಾಯ ತಸ್ಮಾತ್ ಯುದ್ಧ್ಯಸ್ವ ಭಾರತ ||**

ಭಾರತ ಎಂದಾಗ ಶ್ರೀಕೃಷ್ಣ ಪಾರ್ಥನಿಗೆ ಒಬ್ಬನಿಗೆಯೆ ಹೇಳಲಿಲ್ಲ. ಸಾಧಕ ನಾದ ಪ್ರತಿಯೊಬ್ಬ ಜೀವಿಗೂ ಹೇಳಿದಾನೆ. ಪಾರ್ಥರಲ್ಲದವರು ಯಾರು? ಭಾರತಯುದ್ಧ ದಾಯಾದಿಗಳ ಕಲಹ ಅಲ್ಲ; ರಾಜ್ಯದಾಹದ ರಣಕೇಳಿ ಅಲ್ಲ. ಜ್ಞಾನ ಅಜ್ಞಾನಗಳ ಘರ್ಷಣೆ. ಸತ್ಯ ಅಸತ್ಯಗಳ ಕಾದಾಟ. ಯುಧ್ಯಸ್ವ ಎಂಬ ಸ್ಪಷ್ಟವಾದ ಸಂದೇಶ ಇದೆ. ಅಪ್ಪಣೆ ಇದೆ. ಆದರೆ ಯಾತಕ್ಕಾಗಿ ಈ ಭಾರತನು ಯುದ್ಧ ಮಾಡಬೇಕು? ಧರ್ಮಸಂಸ್ಥಾಪನೆ ಗಾಗಿ. ಆಸಕ್ತಿಗೆ ಇದು ಪಥ್ಯವಾದೀತೇ?

ನಿಜವಾಗಿ ನೋಡಿದರೆ ಅನಾಸಕ್ತಿ ಮನುಷ್ಯನ ವಿಲಕ್ಷಣ ಗುಣ.

ಜನರಲ್ಲಿ ಉತ್ತಮರಾದವರನ್ನು ನಾವು ವಿವೇಕಿಗಳು ಎನ್ನುತ್ತೇವೆ. ವಿವೇಕ ಇಲ್ಲದ ವಿದ್ಯೆ ವ್ಯಾಸನೇ ಒಂದು ಹೇಳಿದರೂ ಅದರ ಬೆಲೆ ಏನು? ವಿವೇಕ ವಿಜಯ ಎಂದು ಆಧ್ಯಾತ್ಮಜೀವನದ ರೂಪಕ ಒಂದನ್ನು ನಮ್ಮಲ್ಲಿ ಆಡು ತ್ತಾರೆ. ಈ ವಿವೇಕ ಎಂಬುದು ಏನು? ಆತ್ಮಾನಾತ್ಮ ವಿವೇಕ, ಸದಸದ್ವಿ ವೇಕ ಎಂದು ಆಧ್ಯಾತ್ಮಜ್ಞಾನಕ್ಕೆ ಹೆಸರಿದೆ. ತನ್ನ ರಾಗರುಚಿಗಳಿಗೆ ಒಳ ಗಾಗದೆ, ತನ್ನ ಬಯಕೆಯೇ ಸರಿ ಎನ್ನದೆ, ತನಗೆ ಬೇಕಾದುದೇ ಸತ್ಯ ಎನ್ನದೆ, ಕಣ್ಣಿಗೆ ಕಾಣುವ ನೋಟದ ಹಿಂದಿನ ನೈಜವನ್ನು ಶಾಸ್ತ್ರೀಯ ವಾಗಿ ನಿಷ್ಪಾಕ್ಷಿಕವಾಗಿ ತಿಳಿದು, ಅದರಂತೆ ನಡೆಯುವುದೇ ವಿವೇಕ. ಮನುಷ್ಯನು ಯಾವುದರಲ್ಲಿಯಾದರೂ ಆಸಕ್ತನಾದರೆ ಆ ವಿವೇಕ ಸಾಧ್ಯವೇ? ಅಭಿಮಾನ ನ್ಯಾಯ ಹೇಳಬಹುದೇ? ನಿರಭಿಮಾನ ಅನಾಸಕ್ತಿ ಇಲ್ಲದೆ ವಿವೇಕ ಇಲ್ಲ. ಅಥವಾ ಅನಾಸಕ್ತಿಯೇ ವಿವೇಕ ಎಂದರೂ ಸರಿಯೆ.

ಈ ಅನಾಸಕ್ತಿ ಅಸಹಕಾರವಲ್ಲ. ವಿಷಯದಲ್ಲಿ ಅನಾಸಕ್ತಿ ಎಂದರೆ ವಿಷಯತ್ಯಾಗವಾಗಲಿ ವಿಷಯವಿಮುಖತೆ ಆಗಲಿ ಅಲ್ಲ. ತನ್ನ ಮನೆ ಮಾರು ಎಂಬ ಅಭಿಮಾನ ಇದ್ದವನು ಆಸಕ್ತ. ಇಡೀ ಜಗತ್ತೇ ತನ್ನ ಕುಟುಂಬ ಎಂದು ತಿಳಿದವನು ಅನಾಸಕ್ತ. ನಮ್ಮ ಅಭಿಮಾನ ಆಸಕ್ತಿ ಗಳನ್ನು ಹಿಗ್ಗಿಸಿ, ಅದರ ಕೋಟೆಯನ್ನು ಒಡೆದು, ವಿಶಾಲವಾದ ಸತ್ಯ ದಲ್ಲಿ ಆಸಕ್ತಿ ಇಡುವುದೇ ಅನಾಸಕ್ತಿ. ದೇವರಿಗೆ ಯಾವುದರಲ್ಲೇನು ಆಸಕ್ತಿ? ಅವನ ಅನಾಸಕ್ತ ಕರ್ಮದ ಶಕ್ತಿ ಎಂಥ ದೊಡ್ಡದು? ಅನಾ ಸಕ್ತಿಯೋಗದ ಬಲವೂ ಅಂಥದೇ.

ಗಾಂಧೀಜಿಯ ವಿಚಿತ್ರ ಪ್ರಭಾವದ ತಳ ಅಲ್ಲಿದೆ. ಅವರ ಇಂದ್ರಿಯ ಸಂಯಮ ಆ ಅನಾಸಕ್ತಿಯೋಗದ ಶಾರೀರ ಸ್ವರೂಪ. ಮನಸಿಗೆಬಂದಾಗ ಗಾಂಧೀಜೀ ಮನಸಿಗೆ ಬಂದಷ್ಟೇಹೊತ್ತು ನಿದ್ದೆ ಹೋಗಬಲ್ಲರು. ಸುತ್ತಲೂ ಕಾಂಗ್ರೆಸ್ಸಿನ ಗದ್ದಲ ಮೊಳಗುತ್ತಿರುವಾಗ ವೇದಿಕೆಯ ಮೇಲೆ ಕೂತೇ ಐದು ಹತ್ತು-ನಿಮಿಷ ಲೆಕ್ಕ ಇಟ್ಟು ನಿದ್ದೆಹೋಗುವುದುಂಟು. ರೈಲಿನಲ್ಲಿ ಕಾರಿನಲ್ಲಿ ಹಾಯಾಗಿ ನಿದ್ದೆಮಾಡುತ್ತಾರೆ. ಕಾರಿನಲ್ಲೇ ಮಲಗಿ ಬಿಡುತ್ತೀ

ರಲ್ಲ ಎಂದರೆ 'ಅದು ಸುಖವಾಗಿರುತ್ತದೆ; ಕಾರೇಕೆ, ಒಂಟಿಯುಮೇಲೆ ಕೂಡಾ ಮಲಗಿದ್ದೇನೆ' ಎನ್ನುತ್ತಾರೆ. ಪಂಡಿತ ಮೋತೀಲಾಲ ನೆಹರು ತೀರಿಕೊಂಡಾಗ ಗಾಂಧೀಜೀ ಅಲಹಾಬಾದಿನಲ್ಲಿಯೇ ಇದ್ದರು. ದಹನ ಕರ್ಮವನ್ನು ಮುಗಿಸಿ ಹಿಂದಿರುಗುವಾಗ ಮೋಟಾರಿನಲ್ಲಿ ಗಾಂಧೀಜೀ ನಿದ್ದೆಹೋದರು. ದಾರಿಯಲ್ಲಿ ಏನೋ ಹೆಚ್ಚುಕಡಮೆ ಆಗಿ ಮೋಟಾರು ಧಂ ಎಂದಿತು. ತಲೆ ಕೆಳಗಾಗಿ ಮಗುಚಿಬಿತ್ತು. ಎಲ್ಲರೂ ಕೆಳಗೆ ಬಿದ್ದರು. ಬಿದ್ದವರೆಲ್ಲ ಎದ್ದುಬಂದು ನೋಡಿದಾಗ ರಸ್ತೆಯ ಪಕ್ಕದಲ್ಲಿ ಗಾಂಧೀಜೀ ಹಾಯಾಗಿ ನಿದ್ದೆಹೋಗುತ್ತಿದ್ದರು. ಅವರು ಎದ್ದೇ ಇರಲಿಲ್ಲ. ಆಹಾರದಲ್ಲಿ ಏನೂ ಹೆಚ್ಚುಕಡಮೆ ಮಾಡದೆ ತಮ್ಮ ತೂಕ ಹೆಚ್ಚುಕಡಿಮೆ ಮಾಡಿ ಕೊಳ್ಳಲೂ ಬಲ್ಲರು. ಒಂದುಸಲ ಗಾಂಧೀಜಿಯ ತೂಕ ಬಹಳ ಇಳಿದು ಹೋಗಿತ್ತು. ೯೭ ಪೌಂಡು ಆಗಿತ್ತು. ಡಾಕ್ಟರ್ ಬಿಧಾನ ಚಂದ್ರರಾಯ್ ನೋಡಿದರು. ೭ ಪೌಂಡು ತೂಕ ಹೆಚ್ಚಾಗಬೇಕು; ಆಹಾರ ಹೆಚ್ಚು ಮಾಡಿರಿ ಎಂದು ಹೇಳಿದರು. ಗಾಂಧೀಜೀ ಅದಕ್ಕೆ ಒಪ್ಪಲಿಲ್ಲ. ಒಂದು ವಾರ ಆದಮೇಲೆ ತೂಕ ಮಾಡಿದಾಗ ೭ ಪೌಂಡು ತೂಕ ಹೆಚ್ಚಾಗಿತ್ತು.

ಅವರ ಸಮನಿಸಿಕೊಂಡು ಹೋಗುವ ಸ್ವಭಾವ (Compromising nature) ಅನಾಸಕ್ತಿಯ ಮನಸ್ಸ್ವರೂಪ. ಅನಾಸಕ್ತಿಗೆ ತನ್ನದೇ ಸರಿ ಎಂಬ ಹಟವಿಲ್ಲ. ಯಾತರ ಹೂವಾದರೇನು ನಾತರದು ಸಾಲದೇ ಎಂಬ ವೈಶಾಲ್ಯವಿದೆ. ಹರಿಯ ಸೇರಲು ಹಲವು ದಾರಿ ಎಂಬ ಅರಿವು ಇದೆ. ಇಂದು ಅಸಹಕಾರ ಮಾಡಿರಿ ಎಂದವರು ನಾಳೆ ಸಹಕಾರ ಮಾಡಿರಿ ಎಂದರು. ಹಾಗೆ ಅಂದಾಗಲೂ ಹೀಗೆ ಅಂದಾಗಲೂ ಎರಡೂ ಎರಡು ದಾರಿ ಸಿದ್ಧಿಗೆ. ಗಾಂಧೀಜೀ ಇಂಥ ವಿರೋಧಗಳ ಕೂಡಲಿ. ಹಿಂದೆ ಮುಂದೆ ಇಲ್ಲದ ಧ್ಯೇಯವಾದಿ ಆಗಿದ್ದೂ ಸಾಟಿ ಇಲ್ಲದ ವ್ಯವಹಾರ ಕುಶಲಿ. ಒಂದು ಕಡೆ ಮಿತಿಗಾಣದ ಕ್ಷಾತ್ರ ಧೈರ್ಯ; ಮತ್ತೊಂದೆಡೆ ಮೀನಮೇಷದ ವೈಶ್ಯ ವಿವೇಕ. ಇತ್ತ ಸುಧಾರಣೆಯ ಕ್ರಾಂತಿನಾಥ ಪರಶುರಾಮ; ಅತ್ತ ಸನಾತನ ಸಂಪ್ರದಾಯ ಸಂರಕ್ಷಕ ಶ್ರೀರಾಮ. ಹಳೆಯದರ ಪೂಜೆ ಬಿಟ್ಟಿಲ್ಲ; ಹೊಸದರ ಸೃಷ್ಟಿಗೋ ಎತ್ತಿದ ಕೈ. ವೈರಾಗ್ಯ ಚಕ್ರವರ್ತಿ ಆಗಿದ್ದೂ ರಾಗ

ಪೂರ್ಣವಾದ ರಾಜಕಾರಣದಲ್ಲಿ ಮುಳುಗಿದಾರೆ. ಪಾರಲೌಕಿಕದಲ್ಲಿ ಗುರಿ, ಕ್ರಿಯಾರಂಗ ತೀರಾ ಲೌಕಿಕ. ಬೆಳಿಗ್ಗೆ ಧ್ಯಾನದಲ್ಲಿ; ಮಧ್ಯಾಹ್ನ ಕಾಂಗ್ರೆಸ್ ಕಮಿಟಿಯಲ್ಲಿ. ಗಂಭೀರವಾದ ರಾಜಕೀಯ ಚರ್ಚೆ ನಡೆದಿದ್ದಾಗ ತಟ್ಟನೆ ರೋಗಿಗಳ ಆರೈಕೆಗಾಗಿ ಹೊರಟು ಹೋಗುತ್ತಾರೆ. ವೈಸರಾಯ್ ತಮ್ಮ ಸಂಧಾನವನ್ನು ಸಂಪೂರ್ಣವಾಗಿ ತಿರಸ್ಕರಿಸಿದಾಗ ನಗುನಗುತ್ತ ನಿದ್ದೆ ಹೋಗುತ್ತಾರೆ. ಆದರೆ ತಮ್ಮ ಅನುಯಾಯಿಗಳು ಯಾರಾದರೂ ಮರೆತು ದೇವಾಲಯ ಪ್ರವೇಶ ಮಾಡಿದರೆ—ಹರಿಜನರಿಗೆ ಪ್ರವೇಶ ಮಾಡಲು ಅಧಿಕಾರ ಇಲ್ಲದ ಗುಡಿಗಳಿಗೆ ತಮ್ಮವರು ಯಾರೂ ಹೋಗಬಾರದು ಎಂದು ಗಾಂಧೀಜಿಯ ಅಪ್ಪಣೆ—ಕಠೋರವಾದ ಉಪವಾಸವನ್ನೇ ಮಾಡುತ್ತಾರೆ. ಸನ್ಯಾಸಿಯ ವೈರಾಗ್ಯ, ಗೃಹಸ್ಥನ ಪ್ರೇಮ ಧರ್ಮಗಳ ಹದವಾದ ಬೆರಿಕೆ. ವಸಿಷ್ಠಮಹರ್ಷಿಯ ಧರ್ಮಜೀವನ—ಚಾಣಕ್ಯ ಮಂತ್ರಿಯ ಲೌಕಿಕ ಚಾತುರ್ಯಗಳ ಅಪೂರ್ವ ಮೇಳನ. ಅನಾಸಕ್ತಿಯೋಗವೇ ಈ ಅದ್ಭುತ ಪರಿಣಾಮದ ಗುಟ್ಟು. ಅಂತೇ ಗಾಂಧೀಜಿಯ ಪ್ರಭಾವ ಅನಿರ್ವಚನೀಯವಾದುದು. *

ಜಗದ್ಧಿತಾಯ ಆತ್ಮನೋ ಮೋಕ್ಷಾಯ ಎಂಬ ಆದರ್ಶ ಎಲ್ಲರಿಗೂ ಒಪ್ಪಿಗೆ ಇದೆ. ಇಹ ಪರ—ಸ್ವಕಾರ್ಯ ಸ್ವಾಮಿಕಾರ್ಯ—ವ್ರತಸುಖ ಇವೆಲ್ಲ ಆ ರೀತಿಯ ಕಲ್ಪನೆ. ವ್ಯಕ್ತಿ ಕಲ್ಯಾಣ ವಿಶ್ವಕಲ್ಯಾಣಗಳೆರಡೂ ದೀಪ—ಪ್ರಭೆಗಳಂತೆ. ಬರಿಯ ಆತ್ಮಕಲ್ಯಾಣವು ಅರ್ಥವಿಲ್ಲದ ಶಬ್ದ, ನಿರ್ಗಂಧ ಚಂದನ; ಆತ್ಮಜ್ಞಾನ ಇಲ್ಲದ ವಿಶ್ವಕಲ್ಯಾಣವು ಲೋಕಸಂಗ್ರಹದ ಹೆಸರಿನ ಸೋಗು ಶಬ್ದ ಇಲ್ಲದಲ್ಲಿ ಅರ್ಥ ಅರಿಸಿದಂತೆ. ಇವೆರಡೂ ಹಾದಿ ಅಪೂರ್ಣವಾದವು. ನಮ್ಮ ಹಿರಿಯರು ಮೊದಲಿನದಕ್ಕೆ ಪಟ್ಟಕಟ್ಟಿ ಎರಡನೆಯದನ್ನು ಮರೆತರು. ಸಮಾಜಸೇವೆಯ ಇಂದಿನ ಕರ್ಮವಾದಿಗಳು ಎರಡನೆಯದು ಒಂದೇ ಸತ್ಯ ಎಂದು 'ಸೊಣಗನಂ ಸಿಂಹಾಸನವೇರಿಸಿ' ದರು. ಗಾಂಧೀಜೀ

ನೆತ್ತ ದಾ ಹಾಸಂಗಿ ಎತ್ತ ಬಿದ್ದರು ದಾಯ।
ತತ್ವದ ನೆಲೆಯ ನರಿದಾತ ನೊಲಿದು ತಾ।
ನೆತ್ತಿರ್ದಡೇನು ಸರ್ವಜ್ಞ॥

ಇವೆರಡನ್ನೂ ಮೇಳಯಿಸಿದಾರೆ. ಉಳಿದವರು ಪರಮೈಕಾಂತದ ವೈಯು ಕ್ತಿಕ ನಿಷ್ಠೆಯೆಂದು ಕಲಿಸಿದುದನ್ನು ಅವರು ವಿಶ್ವಕಲ್ಯಾಣದ ಸಮಷ್ಟಿ ಸಾಧನೆಯಾಗಿ ಮಾಡಿದಾರೆ. 'ಎಲ್ಲರದೂ ಒಂದೇ ಆತ್ಮ. ನಾನು ಹೇಗೆ ಪಾಪಕರ್ಮದಿಂದ ಬೇರೆ ಆಗಲಿ? ಹೇಗೆ ಅಲಿಪ್ತನಾಗಲಿ? ನನ್ನ ಸತ್ಯಾ ಗ್ರಹ ಪ್ರಯೋಗದಲ್ಲಿ ಇಡೀ ಮಾನವ ಜಾತಿಯನ್ನೇ ನಾನು ಸೇರಿಸಿ ಕೊಳ್ಳಲು ಬಯಸುತ್ತೇನೆ.' ಇಲ್ಲಿ ತನ್ನ ಪಾಪವು ಹರಿಯಲಿ. ತನಗೆ ಮೋಕ್ಷ ಸಿಗಲಿ ಎಂಬ ಭಾವ ಇಲ್ಲ. ಮಂದಿಯ ಪಾಪ ತನ್ನ ತಲೆಯ ಮೇಲೆ ಇರಲಿ. ನನ್ನ ನಾಯಿ ಮಾಡಿದ ತಪ್ಪಿಗೆ ತನಗೆ ಪ್ರಾಯಶ್ಚಿತ್ತ ಆಗಲಿ ಎಂಬ ಭಾವ. ಜಗತ್ತೆಲ್ಲ ಸುಖವಾಗದೆ ನನಗೆ ಏಕೆ ಸುಖ? ಎಲ್ಲರೂ ಪುಣ್ಯಶಾಲಿಗಳಾಗದೆ ನನಗೆ ಏಕೆ ಪುಣ್ಯ ಎಂಬ ವಿಶಾಲದೃಷ್ಟಿ. ಆ ಜಗದ್ಧಿತದಲ್ಲೇ ಆತ್ಮ ಕಲ್ಯಾಣವೂ ಇದೆ. ಅದಕ್ಕಾಗಿಯೇ ಅವರಿಗೆ ಗೀತೆಯು ಹಿಂಸೆಯ ಉಪ ದೇಶ ಅಲ್ಲ. ಅಹಿಂಸೆಯ ಸಂದೇಶ. ವ್ಯಕ್ತಿವಿಕಾಸಕ್ಕೆ ಬೇರೆ ಸಾಧನೆ ಇದ್ದರೂ ಇದ್ದಾವು. ಮಾನವಕೋಟಿಯ ಸಾಮೂಹಿಕ ವಿಕಾಸಕ್ಕೆ ಸರ್ವ ಮಾನವ ಪ್ರಗತಿ ಅಹಿಂಸೆ ವಿನಾ ಬೇರೆ ದಾರಿಯೇ ಇಲ್ಲ.

ಅಂತಲೇ ಗಾಂಧೀಜಿಗೆ 'ಭಗವತ್ಸೇವೆಯೇ ಧರ್ಮ. ಅಂದರೆ ಜನ ತೆಯ ಸೇವೆ; ಶುದ್ಧಪ್ರೇಮ.' ಅದು ರಾಗದ್ವೇಷ ಇಲ್ಲದ ಅನಾಸಕ್ತ ಪ್ರೇಮ. ಜಗತ್ತೆಲ್ಲ ಭಗವಂತನ ಸ್ವರೂಪವೇ ಅಲ್ಲವೇ! ನಶ್ವರವಿರಲಿ ಶಾಸ್ವತವಿರಲಿ, ಸತ್ಯವಿರಲಿ ಮಿಥ್ಯೆಯಾಗಲಿ—ಜಗತ್ತು ದೇವರ ಸೃಷ್ಟಿ. ಅವನ ಪ್ರಾಕಟ ರೂಪ. ಕಲಾವಿದನ ಕಲಾಕೃತಿಯಲ್ಲಿ ಅವನನ್ನು ಕಾಣದೆ ಬೇರೆ ಎಲ್ಲಿಯೋ ಅರಸುವುದು ಸಹೃದಯತೆಯ ಲಕ್ಷಣವೆ? ರಸಿಕತೆಯ ಗುರುತೆ?

ಮೇಲೆ ಮೇಲೆ ಮನುಷ್ಯ ಪಶುವಾಗಿದಾನೆ. ಎಷ್ಟೇ ವಿದ್ವಾಂಸ ನಾದರೂ ಇಂದ್ರಿಯ ಗ್ರಾಮವು ಎಳೆಯುತ್ತದೆ. ಆದರೂ ಒಳಗೆ ಸತ್ಯವು ಒಂದು ಹುದುಗಿದೆ. ನಮ್ಮ ಭಾವನಾ ತರಂಗಗಳಲ್ಲಿ ಬೆರೆತು ತೇಲಿ ಬರು ತ್ತದೆ ಆ ನಿತ್ಯಸತ್ಯ. ಕ್ಷುದ್ರ ಮಾನವನೂ ದೇವದೇವನಾಗಬಲ್ಲ. ಬೀಜ ದಲ್ಲಿ ಮರ ಅಡಗಿದಂತೆ ಕೀಳು ಮನುಷ್ಯನಲ್ಲೂ ಮಹಾಪುರುಷ

ಅಡಗಿದಾನೆ. ಆ ಪುರುಷೋತ್ತಮನ ಇರವಿನ ಅರಿವು ಮುಕ್ತಿ. ಇದಕ್ಕೆ ಆತ್ಮಶುದ್ಧಿ. 'ಆತ್ಮಶುದ್ಧಿ ಇಲ್ಲದೆ ಆತ್ಮವತ್ ಸರ್ವಭೂತಾನಿಯ ಐಕ್ಯ ಸಾಧನೆ ಇಲ್ಲವೇ ಇಲ್ಲ. ಆತ್ಮಶುದ್ಧಿ ಇಲ್ಲದೆ ಅಹಿಂಸಾಧರ್ಮ ಇಲ್ಲ. ಪರಮಾತ್ಮ ದರ್ಶನವೂ ಇಲ್ಲ.' ಆತ್ಮಶುದ್ಧಿ ಎಂದರೆ ನಿರ್ವಿಕಾರ. ಕಾಯಾ ವಾಚಾ ಮನಸಾ ರಾಗದ್ವೇಷನಿಗ್ರಹ. ಅಂದರೆ ಅನಾಸಕ್ತಿ. ಆತ್ಮ ಮೋಕ್ಷಕ್ಕಾಗಿ ಆತ್ಮಶುದ್ಧಿ. ಜಗದ್ಧಿತಕ್ಕಾಗಿ ಸ್ವಾರ್ಥತ್ಯಾಗ.

ಮಾನವನು ಹುಲು ಮರ್ತ್ಯನಲ್ಲ. ಯೋಗಭ್ರಷ್ಟನಾದ ದೇವತೆ. ಸ್ವರ್ಗವು ಮಾನವನ ಆತ್ಮಜ್ಯೋತಿ. ಅವನು ಹಚ್ಚಿದ ಜ್ಞಾನದ ನಿತ್ಯ ನಂದಾದೀಪ. ಆ ದಿಪವನ್ನು ಇಲ್ಲಿ—ಈ ಭೂಮಿಯ ಮೇಲೆ—ಹಚ್ಚಲು ಬೇಕು. ಆ ಕ್ಷೀರಸಾಗರದ ಆನಂದ ಇಲ್ಲಿ ಹರಿಯಲು ಬೇಕು.

ಇದು ಬರಿಯ ಕನಸೇ ಆಗಬಹುದು. ಉಳಿದ ಎಲ್ಲ ವೇದಾಂತದ ಕನಸುಗಳಂತೆ ಇದೂ ಒಂದು ಮನೋಹರವಾದ ಕನಸು. ಅವಕ್ಕೂ ಇದಕ್ಕೂ ಭೇದ ಇಷ್ಟೇ. ಅದರಲ್ಲಿ ಮಾನವನು ವೈಕುಂಠಕ್ಕೆ ಏರಬೇಕು. ಇದರಲ್ಲಿ ವೈಕುಂಠವನ್ನು ಇಲ್ಲಿಯೇ ಸ್ಥಾಪಿಸುವ ಮಹಾಸಾಹಸ.

ಅದೇ ಗಾಂಧೀಜಿಯ ಕನಸು. ಅನಾಸಕ್ತಿಯೋಗವೇ ಅದರ ಹಾದಿ.

ಈ ಹಾದಿ ಹಿಡಿದು ಗಾಂಧೀಜೀ ತಮ್ಮ ಹೆಸರನ್ನು ಋಷಿ, ಮುನಿ, ದೃಷ್ಟಾರರ ಪಟ್ಟಿಯಲ್ಲಿ ಸೇರಿಸಿದಾರೆ. ಅದಕ್ಕೆ ಅವತಾರದ ಬಣ್ಣ ಬಳಿದಿದಾರೆ. ಜಗತ್ತಿನ ಮೂಲೆಮೂಲೆಯಲ್ಲೂ ಅವರ ಅನಾಸಕ್ತಿಯ ಅಮರ ತೇಜಸ್ಸು ಹರಡಿದೆ.



## ಕರುಣಾಳು ಬೆಳಕೆ

ಸಾಧಾರಣವಾಗಿ ಮನುಷ್ಯನ ನೋಟ ಹೊರಗೆ ಹರಿಯುತ್ತದೆ. ಪ್ರಪಂಚದ ಕೊನೆಗಾಣದ ಚೆಲುವು ನಲವುಗಳನ್ನು ನೋಡಿ ಮುಗ್ಧನಾಗುತ್ತಾನೆ. ಅವನ ಕಣ್ಣು ಆ ಚೆಲುವಿನಲ್ಲಿ ನೆಟ್ಟುಹೋಗುತ್ತದೆ; ಕಣ್ಣಿನ ಹಿಂದೆ ಮನಸ್ಸು ಹರಿದು ಆ ನೆಲವಿನಲ್ಲಿ ಆಡುತ್ತದೆ. ಬರೀ ಹೊರಗೇ ಅಲ್ಲದೆ ಒಳಗೆ ಏನಾದರೂ ಉಂಟೇ ಎಂಬ ಕುತೂಹಲವೇ ಹುಟ್ಟುವುದಿಲ್ಲ.

ಸ್ವಲ್ಪ ವಿಚಾರಪರರಾದವರಿಗೆ ಒಮ್ಮೊಮ್ಮೆ ಇದರೊಳಗೆ ಏನಾದರೂ ಉಂಟೋ ಎಂಬ ಪ್ರಶ್ನೆ ಬರುತ್ತದೆ. ಸಕ್ಕರೆ ಸವಿ, ಆಲಯು ಬಯಲುಗಳ ಕೂಟಪ್ರಶ್ನೆ ಕನಕದಾಸನಿಗೆ ಬಿದ್ದಂತೆ ಈ ಹೊಗೆಯಲ್ಲಿ ಬೆಂಕಿಯಿಲ್ಲದೆ ಉಂಟೆ ಅನಿಸುತ್ತದೆ. ಒಳಗುಹೊರಗುಗಳು ಬೆಳಕು ನೆಳಲು ಗಳಂತೆ. ಈ ಜಿಜ್ಞಾಸೆಯಲ್ಲಿ ನಮ್ಮನ್ನು ಮೀರಿದ ಮಹಾಶಕ್ತಿಯೊಂದು ಇದೆ ಎನಿಸುತ್ತದೆ. ಅದನ್ನು ಹಲವು ಜನ ಹಲವು ರೀತಿಯಲ್ಲಿ ಅರ್ಥ ಮಾಡಿಕೊಂಡಿದಾರೆ. ಅದನ್ನು ನಿರಾಕಾರ ನಿರ್ಗುಣವಾದ ' ತತ್ ' ಎಂದವರುಂಟು; ಸಾಕಾರಸಗುಣವಾದ ' ನಾರಾಯಣ 'ನೆಂದವರುಂಟು. ಇನ್ನೂ ಅನೇಕ ವಿಧದಲ್ಲಿ ಕರೆದವರುಂಟು. ಹಾಗೆಲ್ಲ ಯಾವದೂ ಇಲ್ಲ ಬರೀ ನಿಸರ್ಗ ಇದು ಎಂದವರೂ ಇಲ್ಲದಿಲ್ಲ.

ಯಾರು ಏನೇ ಹೇಳಲಿ ಗಾಂಧೀಜಿಗೆ ಮಾತ್ರ ದೇವರು ಸತ್ಯ, ಎಲ್ಲದರ ನೆಲೆ. ಆ ನಂಬಿಗೆಯೇ ಅವರ ಅದ್ಭುತ ಜೀವನದ ತಳಹದಿ. ಅವರ ಎಲ್ಲ ಕೆಲಸಕ್ಕೂ ಭಗವಂತನೇ ಸಾಕ್ಷಿ. 'ಯಾವುದನ್ನೂ ನೋಡದೆ ಬಿಡದ ಸರ್ವಸಾಕ್ಷಿಯೊಬ್ಬನ ಇರವನ್ನು' ಅವರು 'ಗುರುತಿಸಿಕೊಳ್ಳದ ಗಳಿಗೆಯೇ ಇಲ್ಲ.' ಅವರ ಸರ್ವ ಬಲವೂ ಅವನೇ. 'ದೇವರು ನೀಡಿದ ಬಲವಲ್ಲದೆ ನನಗೆಲ್ಲಿಯ ಬಲ?' 'ನನ್ನ ಮಹಾಸ್ತ್ರವೆಂದರೆ ಮೂಕ ಪ್ರಾರ್ಥನೆ.' ಅದೇ ಅವರ ಚರಮಬಲ. ಆದುದರಿಂದಲೇ ಕೈಮೀರಿ ಬಂದಾಗ ದಾರಿಗಾಣದಾದಾಗ, ಧರ್ಮಸಂದೇಹ ಕಂಡಾಗ ಅವರು ಅದನ್ನು 'ದೇವರ ದಿವ್ಯ ಹಸ್ತಗಳಲ್ಲಿ ಒಪ್ಪಿಸು'ತ್ತಾರೆ. 'ರಾಮನೇ ನಿರ್ಬಲರ ಬಲ'ವಲ್ಲವೆ. ಧರ್ಮ ಸಮ್ಮೂಢನಾದ ನರನಿಗೆ ಶ್ರೀಕೃಷ್ಣನು ಎಷ್ಟು ಸತ್ಯವೂ ಸಮೀಪವೂ ಆಗಿದ್ದನೋ ಗಾಂಧೀಜಿಗೂ ದೇವರು ಹಾಗೆಯೇ. ಶಿಷ್ಯಸ್ತೇಹಂ ಶಾಧಿಮಾಂ ತ್ವಾಂ ಪ್ರಪನ್ನಂ ಎಂದು ಅವನು ಗೀತಾಚಾರ್ಯರನ್ನು ಮೊರೆ ಹೋದ. ಗಾಂಧೀಜಿಯ ಬಾಳಿನಲ್ಲಿ ಅದು ದಿನಾಲೂ ನಡೆವ ದೃಶ್ಯ.

'ಎಲ್ಲರಿಗೂ ದೇವರಲ್ಲಿ ನಂಬಿಗೆಯಿದೆ. ಅನೇಕ ವೇಳೆ ನಂಬಿಗೆ ಇದೆ ಎಂಬುದು ಅವರಿಗೇ ಗೊತ್ತಿರುವದಿಲ್ಲ. ಮನುಷ್ಯನಿಗೆ ತನ್ನಲ್ಲಿ ನಂಬಿಗೆ ಇಲ್ಲವೇ? ಅದನ್ನೇ ಪರಕೋಟಿ ಪಾಲು—ಅನಂತವಾಗಿ ಬೆಳೆಸಿದರೆ ಅದೇ ದೇವರು. ಚೇತನಾಚೇತನ ಪ್ರಾಣಿಸ್ತೋಮ ಸಾಕಲ್ಯವೇ ದೇವರು.' ನಮ್ಮ ಸುತ್ತಲೂ ಇರುವದೆಲ್ಲ ಸದಾ ಬದಲಾಗುತ್ತಿದೆ, ಸದಾ ಸಾವಿಗೆ ಬಲಿಯಾಗುತ್ತಿದೆ. ಇದೆಲ್ಲದರ ನಡುವೆ ಬದಲಾಗದ, ಎಲ್ಲವನ್ನೂ ಹಿಡಿದಿಡುವ, ಸೃಷ್ಟಿಸುವ ಸಾಯಿಸುವ, ಪುನಃ ಸೃಷ್ಟಿಸುವ ಮಹಾಚೈತನ್ಯ ಶಕ್ತಿಯೊಂದಿದೆ. ಆ ಶಕ್ತಿಯೇ ದೇವರು. ಇಂದ್ರಿಯಗಳಿಗೆ ಗೋಚರವಾಗುವ ಯಾವ ವಸ್ತುವೂ ಶಾಶ್ವತವಲ್ಲವೆಂಬುದು ತಿಳಿಯುತ್ತಲಿದೆ. ಅಂತಲೇ ದೇವರೊಬ್ಬನೇ ನಿಜ.' ಆ ಶಕ್ತಿ 'ಅವರ್ಣನೀಯ, ಗೂಢ. ಅದು ಸರ್ವವ್ಯಾಪಿ. ಕಣ್ಣಿಗೆ ಕಾಣದಿದ್ದರೂ ಆ ಶಕ್ತಿ ಇದೆ ಎಂದು ನನಗೆ ಅನಿಸುತ್ತಿದೆ. ಅದನ್ನು ಪ್ರಮಾಣ ಮಾಡಿಕೊಡಲು ಸಾಧ್ಯವಿಲ್ಲ. ಇಂದ್ರಿಯ ಗೋಚರವಾದ ಪದಾರ್ಥಗಳ ಹಾಗಲ್ಲ ಅದು. ಅದು ಇಂದ್ರಿಯಾತೀತ.'

'ಈ ಕ್ಷಣಿಕದಲ್ಲಿ ಹುದುಗಿರುವ ಪರಮ ತತ್ವ ಯಾವಾಗಲೂ ಪ್ರಕಟವಾಗುತ್ತಿದೆ. ಅದರ ಅನ್ವೇಷಣವೇ ಪರಮ ಪುರುಷಾರ್ಥ.'

ಈ ಮಾತನ್ನು ತರ್ಕದಿಂದ ಸಾಧಿಸಬಂದೀತೇ? ಬುದ್ಧಿಗೆ ದೇವರು ಎಟಕುತ್ತಾನೆಯೇ? ಈ ಸಂದೇಹ ಇಂದಿನದಲ್ಲ. ಮನುಷ್ಯನ ಜೊತೆಯಲ್ಲೇ ಹುಟ್ಟಿದ ಪ್ರಶ್ನೆ ಅದು. ಆಸ್ತಿಕತೆ ನಾಸ್ತಿಕತೆಗಳು ಅದರ ಪರಿಣಾಮ. ಬರೀ ಬುದ್ಧಿಗೆ ನಾಸ್ತಿಕತೆಯೊಂದು ತೆರೆ. ಆ ತೆರೆಯನ್ನು ಹರಿದು ಬುದ್ಧಿಯಿಂದ ಬ್ರಹ್ಮವನ್ನು ಅರಿತವರು ಒಬ್ಬಿಬ್ಬರು ಇದ್ದಾರೆ. 'ಆದರೆ ಬರೀ ಬುದ್ಧಿಗೆ ಎಟಕುವ ದೇವರು ದೇವರಲ್ಲ. ಹೃದಯವನ್ನಾಳಿ ಅದನ್ನು ಶುದ್ಧ ಮಾಡಬಲ್ಲವನಾದರೆಯೇ ದೇವರು. ಇಂದ್ರಿಯಾತೀತವಾದ ಅನುಭವವೇ ಅದರ ಸತ್ಯಸಾಕ್ಷಿ. ಹೊರಗಣ ಸಾಕ್ಷ್ಯದಿಂದ ಅದನ್ನು ಪ್ರಮಾಣಿಸಲಾಗದು. ತನ್ನೊಳಗೆ ದೇವರನ್ನು ಗುರುತಿಸಿಕೊಂಡವರ ಬಾಳು ಬದುಕಿನಲ್ಲಿ ಕಾಣುವ ಭೇದದಲ್ಲಿ—ಆ ಬದಲಾವಣೆಯಲ್ಲಿ ಅದರ ಪ್ರಮಾಣವಿದೆ. ಇಂಥ ಪ್ರಮಾಣವು ಎಲ್ಲ ದೇಶದ ಎಲ್ಲ ಕಾಲದ ಋಷಿ ಪೈಗಂಬರರ ಧಾರಾವಾಹಿಯಾದ ಅನುಭವದಲ್ಲಿ ಕಂಡುಬರುತ್ತದೆ. ಈ ಪ್ರಮಾಣವನ್ನು ತಿರಸ್ಕರಿಸುವದೆಂದರೆ ತನ್ನನ್ನೇ ತಾನು ನಂಬದಂತೆ.'

ಬುದ್ಧಿಗೆ ನಿಲುಕದ್ದು ತರ್ಕಕ್ಕೆ ಸಿಲುಕದ್ದು ಬರೀ ಶೂನ್ಯ. ಅಂಥ ದೇವರಿಂದೇನಾಗಬೇಕು. ಹೀಗೆ ಮನುಷ್ಯ ಬುದ್ಧಿಗೆ ಹೊಳೆಯುತ್ತದೆ. ಸಾಮ್ಯವಾದಿಗಳಾದ ತರುಣರನೇಕರಿಗೆ ಕರ್ಮವೇ ದೇವರಾಗಿ ಕಾಣುತ್ತಾನೆ. ಕ್ರಿಯೆ—ಪ್ರತಿಕ್ರಿಯೆ, ಕರ್ಮ—ಕಾರಣ—ಕರ್ಮಗಳ ಚಕ್ರವೇ ಅದರ ಸತ್ಯ. ಹೃದಯ ಪರಿವರ್ತನ ಸುಳ್ಳು. ಒಂದು ವೇಳೆ ನಡೆಯಲ್ಲಿ ವ್ಯತ್ಯಾಸ ಕಂಡರೆ ಅದು ಭೌತಿಕ ವ್ಯಾವಹಾರಿಕ ಕಾರಣಗಳ ಲೌಕಿಕ ವ್ಯಾಪಾರ. ನಮ್ಮ ಕೈಲಾಗದಾಗ ನಾವು ತಗ್ಗುತ್ತೇವೆ, ಕೈಲಾದರೆ ಹಾರುತ್ತೇವೆ; ಆದರೆ ಅಡಿ ಇಲ್ಲದಿರೆ ಮುಡಿ. ಇದರಲ್ಲಿ ದೆವರೇನು ಅವನ ಅನುಗ್ರಹವೇನು? ಇಸ್ಲಾಮಿಯಾ ಕಾಲೇಜಿನ ಪ್ರೊಫೆಸರರೊಬ್ಬರು ಇಂಥ ಸಂದೇಹಗಳನ್ನು ಒಮ್ಮೆ ಗಾಂಧೀಜಿಯ ಮುಂದೆ ಇಟ್ಟರು. ಗಾಂಧೀಜಿಗೆ ತುಂಬಾ ನೋವಾಯಿತು. ದೇವರದು ಕಾಣದ ಕೈಯಾದರೂ ಸಲುಹುವ ಕೈ,

ವಿಪತ್ತಿನಲ್ಲಿ ಪೊರೆಯುವ ಕೈ. ಅದರ ಬಗ್ಗೆ ಚರ್ಚಿಸುತ್ತ ಕೂತರೆ ಬಂದ ಫಲವೇನು? ಗಾಂಧೀಜೀ ಹೇಳಿದರು.

'ಇದು ಚರ್ಚೆಗೆ ಯೋಗ್ಯವೆ? ತರ್ಕದಿಂದ ಇದನ್ನು ಸಿದ್ಧಮಾಡಿ ಇತರರನ್ನು ಒಪ್ಪಿಸುವದೆಂದರೆ ನಾನು ಸೋತೆ ನನ್ನ ಕೈಲಾಗದು. ಆದರೆ ಇದುಮಾತ್ರ ನಿಜ: ನೀನೂ ನಾನೂ ಈ ಕೋಣೆಯಲ್ಲಿ ಕೂತು ಮಾತಾಡುತ್ತಿರುವದು ಎಷ್ಟು ದಿಟವೋ ಅದಕ್ಕಿಂತ ಹೆಚ್ಚಾಗಿ ನನಗೆ ದೇವರ ಅಸ್ತಿತ್ವ ದಿಟ. ಗಾಳಿನೀರಿಲ್ಲದೆ ನಾನು ಬದುಕಿದರೂ ಬದುಕಬಹುದು, ದೇವರನ್ನು ಬಿಟ್ಟು ಬಾಳಲಾರೆ, ಬದುಕಲಾರೆ. ನನ್ನ ಕಣ್ಣು ಕಿತ್ತಿಹಾಕಿರಿ, ನಾನೇನು ಸಾಯುವದಿಲ್ಲ; ನನ್ನ ಮೂಗೇ ಕುಯ್ಯಿರಿ ನನಗೆ ಸಾವು ಬಾರದು. ನನ್ನ ಭಕ್ತಿ ಆಸ್ತಿಕ್ಯಗಳನ್ನು ಮುರಿ ನಾನು ಸತ್ತೆ.'

ಇಂಥ ಗಾಢ ಭಕ್ತಿಗೆ 'ಅಚಲ ವಿಶ್ವಾಸವು ಬೇಕು.' ಅದೇ ಪಿಠಿಕೆ. 'ಎಲ್ಲವನ್ನೂ ಮೀರಿ ನಿಲ್ಲುವ ನಂಬಿಗೆಯೇ ನಮ್ಮ ಸನಾತನೋಪಾಯ. ನನ್ನ ಭಕ್ತಿ ನನ್ನನ್ನು ಕುತ್ತಿನಿಂದ ಕಾಯ್ದಿದೆ, ಕಾಯುತ್ತಿದೆ. ಎಂದೂ ಅದು ನನ್ನ ಕೈ ಬಿಟ್ಟಿಲ್ಲ. ಅದು ಯಾವಾಗಲೂ ಯಾರನ್ನೂ ಕೈ ಬಿಟ್ಟಿದ್ದಿಲ್ಲ.' 'ಭಕ್ತಿ ಬಾಹ್ಯ ಪ್ರಮಾಣ ಸಾಧ್ಯವಲ್ಲ. ಆದ್ದರಿಂದ ಪ್ರಪಂಚದ ನೈತಿಕ ನಿಯಮವನ್ನೂ ಸತ್ಯಪ್ರೇಮಗಳೇ ಆ ನಿಯಮದ ಶಿಖರಗಳೆಂಬುದನ್ನೂ ನಂಬುವದೇ ರಾಜಮಾರ್ಗ.'

ಆದರೂ ತರ್ಕದಿಂದ ಸ್ವಲ್ಪಮಟ್ಟಿಗೆ ದೇವರ ಅಸ್ತಿತ್ವವನ್ನು ಸಾಧಿಸಲೂ ಬಹುದು.' 'ನಾವು ಇರುವುದೂ ನಮ್ಮ ತಂದೆ ತಾತಂದಿರೂ ಅವರ ಹಿರಿಯರೂ ಇದ್ದುದೂ ನಿಜವಾದರೆ ಇಡೀ ಸೃಷ್ಟಿಯ ತಂದೆಯೊಬ್ಬನ ಅಸ್ತಿತ್ವವನ್ನು ನಂಬುವದು ಸರಿ.' 'ಸಾಧಾರಣವಾಗಿ ನಮ್ಮನ್ನು ಯಾರು ಆಳುತ್ತಾರೆಂಬುದೂ ಹೇಗೆ ಅಥವಾ ಏಕೆ ಆಳುತ್ತಾರೆಂಬುದೂ ನಮಗೆ ತಿಳಿಯದು. ಏನೋ ಒಂದು ಪ್ರಭುತ್ವವು ನಮ್ಮನ್ನು ಆಳುತ್ತಿದೆಯೆಂಬುದು ಮಾತ್ರ ಗೊತ್ತು. ಮೈಸೂರಿನ ಪ್ರವಾಸದಲ್ಲಿ ನಾನು ನೋಡಿದ ರೈತರಲ್ಲಿ ಅನೇಕರಿಗೆ ತಮ್ಮ ಪ್ರಭುವು ಯಾರೆಂಬದೇ ಗೊತ್ತಿರಲಿಲ್ಲ. ಯಾರೋ ದೇವಾಂಶಸಂಭೂತರೊಬ್ಬರು ಆಳುತ್ತಿದಾರೆಂದು ಹೇಳಿದರು. ಈ ಬಡಜನರಿಗೆ ತಮ್ಮ ಮಹಾರಾಜರು ಯಾರೆಂಬದೇ ಗೊತ್ತಿರದಿದ್ದರೆ ಅಲ್ಪನಾದ

ನನಗೆ ರಾಜರ ರಾಜನಾದ ದೇವರ ನೆಲೆ ತಿಳಿಯದೆ ಇದ್ದರೆ ಅಚ್ಚರಿಯೇನು? ಮೈಸೂರಿನ ಆ ಬಡಜನಕ್ಕೆ ಗೊತ್ತಿದ್ದ ರೀತಿಯಲ್ಲಿ ಈ ಜಗತ್ತಿನಲ್ಲಿ ಕ್ರಮವೊಂದು ಇದೆಯೆಂದೂ ಚರಾಚರವನ್ನೆಲ್ಲ ಆಳುವ ವ್ಯತ್ಯಾಸ ರಹಿತವಾದ ನಿಯಮವೊಂದು ಇದೆಯೆಂದೂ ನನಗೆ ಅನಿಸುತ್ತದೆ. ಆ ನಿಯಮವೇನು ಕುರುಡಲ್ಲ; ಚೇತನ ಪ್ರಾಣಿಗಳನ್ನು ಕುರುಡ ನಿಯಮವು ಆಳಲಾರದು. ಸಮಸ್ತ ಪ್ರಾಣವನ್ನೂ ಆಳುವ ಆ ನಿಯಮವೇ ದೇವರು. ದೇವರು ಬೇರೆ ಅವನ ನಿಯಮ ಬೇರೆ ಅಲ್ಲ, ಎಲ್ಲಾ ಒಂದೇ.'

ಈ ಶಕ್ತಿ, ಈ ನಿಯಮ ಕಠೋರವೋ ಕರುಳಿನದೋ? ಅದು ಕೇವಲ ಕರುಣಾಪೂರ್ಣವಾದುದು. ಅಗಾಧವಾದ 'ನಾಶನ ನಡುವೆ' ಅನಂತವಾಗಿ 'ಅಮೃತಪ್ರಾಣ ಸಾಗುತ್ತಲೇ ಇರುವದನ್ನು ನಾನು ನೋಡುತ್ತಿಲ್ಲವೆ? ಅಸತ್ಯದ ನಡುವೆ ಸತ್ಯವೂ ಕತ್ತಲೆಯ ನಡುವೆ ಬೆಳಕೂ ತಲೆಯೆತ್ತಿ ನಿಂತೇ ಇವೆ. ಇದರಿಂದಲೇ ಗುರುತಿಸಿಕೊಳ್ಳಬಹುದು: ದೇವರು ಅಮೃತ, ದೇವರು ಜ್ಯೋತಿ, ಸತ್ಯ.' ಗಾಂಧೀಜಿಗೆ ದೇವರು ಕಲ್ಯಾಣಗುಣ ಸಂಪನ್ನ, ನೀತಿಯ ನಿಕ್ಷೇಪ. ಅವನ ನಿಯಮ ಕಠೋರವಾದುದು; ಬಿತ್ತಿದ್ದನ್ನೇ ಬೆಳೆದುಕೊಡುವ ನಿಷ್ಠುರತೆ ಅದರದು. ಮಾಡಿದವನಿಗೆ ಮಣಿಯಂಥ ಕಡುಬನ್ನು ತಿನಿಸಿಯೇ ಬಿಟ್ಟೀತು. ಆದರೆ ಅವನು ನಿಗ್ರಹದ ನಿಯಮವನ್ನು ಮೀರಿನಿಂತಿದಾನೆ; ಅವನು ಅನುಗ್ರಹ ಸಮರ್ಥ. 'ದೇವರು ಪ್ರೇಮಮಯ, ಶುಭದ ಶಿವದ ಗೋಪುರ.' 'ಅವನು ತಾಳ್ಮೆಯ ಮೂರ್ತಿ' ಈ ಹಾದಿಯ ಮೇಲೆ ಗಾಂಧೀಜೀ ದೇವರು ಸಗುಣನೆಂಬ ನಿಲುಕಿಗೆ ಬರುತ್ತಾರೆ.'

ದೇವರ ಕಲ್ಯಾಣಗುಣಗಳಲ್ಲಿ ಆರ್ತತ್ರಾಣಪರಾಯಣತೆಯೇ ಮುಖ್ಯವೆಂದು ಸಗುಣವಾದವು ಹೇಳುತ್ತಿದೆ. ಕೋತಿಯ ಮರಿ ತನ್ನ ತಾಯಿ ಹೊಟ್ಟೆಗೆ ಅಪಚಿಕೊಂಡರಾಯಿತು; ಅದರ ಇಡೀ ಯೋಗಕ್ಷೇಮ ತಾಯಿಗೆ ಸೇರಿದುದು. ಭಕ್ತ ಭಗವಂತರ ಮಾತೂ ಹಾಗೆಯೇ. ಗಾಂಧೀಜೀ ಈ ಮರ್ಕಟ ಕಿಶೋರ ನ್ಯಾಯಕ್ಕಿಂತ ತುಸು ಮುಂದೆ ಹೋಗುತ್ತಾರೆ. ಅವರಿಗೆ 'ರಾಮ ನಿರ್ಬಲರ ಬಲ.' ಅವನಿಗೆ ಸಾವಿರ ಕಣ್ಣು. ನಮಗೆ

ತಿಳಿಯುದೆಯೇ ನಮ್ಮನ್ನು ಕಾಯುತ್ತಾನೆ. 'ಮನುಷ್ಯ ಎಷ್ಟು ಪ್ರಯತ್ನ ಮಾಡಿದರೂ ವಿಕಾರಹೊಂದುತ್ತಾನೆಂಬದು ನಮಗೆ ಗೊತ್ತಿದೆ.' ಇಂದ್ರಿಯ ಗ್ರಾಮವು ಬಲವಾನ್; 'ಅಂಥ ಹೊತ್ತಿನಲ್ಲಿ ದೇವರು ಅಡ್ಡನಿಂತು ಕಾಯುವದನ್ನೂ ನಾವು ಬಲ್ಲೆವು. ಈಶ್ವರಾನುಗ್ರಹದಿಂದ ಕರ್ತನಿಗೂ ಆತನಿಗೆ ಹೊಂದಿದವರಿಗೂ ಹತ್ತದೆ ಹೋಗುವ ಕೆಲವು ಕರ್ಮಗಳಿವೆ. ಹಾಗೆ ತಪ್ಪಿ ಹೋದಮೇಲೆ ಸರಿಯಾದ ತಿಳಿವು ಬಂದೊಡನೆ ಆ ರಕ್ಷಣೆ ಗಾಗಿ ಅವನು ಈಶ್ವರಾನುಗ್ರಹವನ್ನು ಮನನ ಮಾಡಿಕೊಳ್ಳುತ್ತಾನೆ.' ಆ ಘಟನೆಗಳಲ್ಲಿ 'ನನ್ನ ಪ್ರಯತ್ನಕ್ಕಿಂತ ನನ್ನ ಅದೃಷ್ಟವೇ ನನ್ನನ್ನು ಕಾಯ್ದಿತು.' ಅನೇಕ ವೇಳೆ ನಮ್ಮ ಪ್ರಯತ್ನ ಸೊನ್ನೆ. 'ಆ ಸಮಯದಲ್ಲಿ ದೇವರು ಕಾಪಾಡಿದನೆಂಬದು ನನಗೆ ತಿಳಿಯದು. ಅನುಭವದಿಂದಲೇ ಅದು ತಿಳಿದೀತು.' ಒಂದುಸಲ ಪಾಪದಲ್ಲಿ ಕಾಲಿಡಲಿದ್ದಾಗ ಗಾಂಧೀಜಿಯ ಗೆಳೆಯನೊಬ್ಬನ 'ಹೃದಯದಲ್ಲಿ ದೇವರು ಪ್ರವೇಶಿಸಿದ.' ಅದಕ್ಕೆ ಅಡ್ಡಿ ಯಾಗಿ ನಿಂತ. ಇನ್ನೊಂದು ಪ್ರಸಂಗದಲ್ಲಿ ಒಬ್ಬ ತುಂಟ ಅಡಿಗೆಯ ಪರಿಚಾ ರಕ ಅವರಿಗೆ 'ದೇವರು ಕಳಿಸಿದ ದೂತ' ನಾದ; ಅವರನ್ನು ಅಧರ್ಮದಿಂದ ಉಳಿಸಿದ. ಒಮ್ಮೆ ಅವರ ಮಗ ಮಣಿಲಾಲನಿಗೆ ತುಂಬಾ ಕಾಯಿಲೆಯಾ ಗಿತ್ತು. ಗಾಂಧೀಜಿಗೆ ಜಲಚಿಕಿತ್ಸೆಯಲ್ಲಿ ತುಂಬಾ ನಂಬಿಗೆ. ಎಲ್ಲರೂ ಈ ವೈದ್ಯವನ್ನು ಹುಚ್ಚು ಎಂದರು. ಗಾಂಧೀಜೀ ತಮ್ಮ ಪಿತ್ತವನ್ನೇ ಕೊನೆ ಸಾಗಿಸಿದರು. ಮಣಿಲಾಲ ಬದುಕಿದ. 'ಅದು ದೇವರ ಕೃಪೆ.' ಇನ್ನೊಮ್ಮೆ ಜಾಂಜಿಬಾರಿನಲ್ಲಿ ಇವರು ಪ್ರಯಾಣ ಮಾಡುತ್ತಿದ್ದ ಹಡಗಿನ ಕಪ್ತಾನ ಇವರನ್ನು ನೀಗ್ರೋ ವಿಹಾರವೊಂದಕ್ಕೆ ಕರೆದೊಯ್ದ. ಅಲ್ಲಿ ಕುಂಟಲ ಗಿತ್ತಿಯೊಬ್ಬಳು ಇವರಿಗೆ ಒಂದು ಕೋಣೆ ತೋರಿಸಿ ಒಳಗೆ ನೂಕಿದಳು. 'ನಾಚಿಕೆಯಿಂದ ನಾನು ದಂಗುಬಡಿದು ಮೂಕನಾಗಿ ನಿಂತೆ. ಪಾಪ, ಆ ಹೆಂಗುಸು ನನ್ನನ್ನು ಏನೆಂದುಕೊಂಡಳೋ ದೇವರೇ ಬಲ್ಲ. ಕಪ್ತಾನ ಕರೆ ದಾಗ, ಒಳಗೆ ಹೋದವನು ಹೋದಂತೆಯೆ ಹೊರಗೆ ಬಂದೆ. ದಯಾಪೂರ್ಣ ನಾದ ದೇವರೇ ಆ ದಿನ ನನ್ನನ್ನು ಕಾಪಾಡಿದ.'

ಆ ನಾಚಿಕೆಯಲ್ಲಿ ದೇವರ ಕೃಪೆಯಿದೆ. 'ಈಶ್ವರನೇ ಆ ಅಡಿಗೆಯವ ನನ್ನು ಪ್ರೇರಿಸಲಿಲ್ಲವೆನ್ನಲು ಬಂದೀತೇ?' ಆ ಗೆಳೆಯನ ಎದೆಯಲ್ಲಿ ದೇವರು

ಮೂಡದಿದ್ದರೆ ವೇಶ್ಯಾಗೃಹದ 'ಭೀಭತ್ಸ ವಿನೋದದಲ್ಲಿ ಕಡುಜಾಣ' ನಾದ ಅವನಿಗೆ ಇವರ ಮೇಲೇಕೆ ಕನಿಕರ ಹುಟ್ಟಬೇಕು? ಮೊಂಡಬಾಲದ ನರಿ ಇನ್ನೊಂದರ ಬಾಲ ಉದ್ದವಾಗಿದ್ದರೆ ಸಹಿಸೀತೇ? ವಿಗ್ರಹದ ಹೊಕ್ಕಳಲ್ಲಿ ಕೈಯಿಟ್ಟು ಚೇಳು ಕಡಿಸಿಕೊಂಡ ಕೋಮಟಿಗೆ ಹಿಂದಿನವರು ಕಡಿಸಿಕೊಳ್ಳದೆ ಇರಲಿ ಎಂಬ ಸದ್ಬುದ್ಧಿ ಹುಟ್ಟೀತೇ? 'ದೇವರು ಸಣ್ಣ ಪುಟ್ಟ ಸಂದರ್ಭಗಳಲ್ಲೂ, ಕ್ಷುದ್ರ ವಿಷಯದಲ್ಲೂ ಪ್ರಕಟವಾಗುತ್ತಲೇ ಇದಾನೆ.' ನಮ್ಮ ಕ್ಷುದ್ರ ಬುದ್ಧಿಗೆ ಅದರ ಅರಿವು ಆಗುವದಿಲ್ಲ, ಅಷ್ಟೆ.

ಇಂಥ ಪ್ರಸಂಗ ಎಷ್ಟೋ ಎಲ್ಲರ ಬಾಳಿನಲ್ಲೂ ನಡೆಯುತ್ತವೆ. ಘೋರವಾದ ಆಪತ್ತಿನಲ್ಲಿ ಶುದ್ಧಸ್ವಭಾವಿಗೆ ತಪ್ಪದೆ ನೆರವು ಒದಗುತ್ತದೆ. 'ಈಶ್ವರ ರಕ್ಷಿತನಿಗೆ ಯಾವಾಗಲೂ ಅಪಾಯವಿಲ್ಲ.' ನ ಮೇ ಭಕ್ತಃ ಪ್ರಣಶ್ಯತಿ ಎಂದು ದೇವರು ಅಭಯ ಕೊಟ್ಟಿಲ್ಲವೆ? ಕಬೀರದಾಸನಿಂದ ದೇವರೇ ಅರಿವೆ ಕೊಂಡನಂತೆ. ಭಕ್ತ ರಾಮದಾಸನ ಸೆರೆ ಬಿಡಿಸಲು ಜೀವ ಉಳಿಸಲು ರಾಮಲಕ್ಷ್ಮಣರು ಹಣವನ್ನು ತಂದುಕೊಟ್ಟರು. ಪುರಂದರದಾಸರ ಬಳಿ ಮೂಗುತಿ ವ್ಯಾಪಾರಕ್ಕೆ ದೇವರೇ ಬಂದ. ಒಬ್ಬ ಭಕ್ತನ ಮನೆಗೆ ಆಹಾರ ಪದಾರ್ಥ ಹೊತ್ತಿಗೆ ಸರಿಯಾಗಿ ಎಲ್ಲಿಂದಲೋ ಬಂದು ಅವರ ಮಾನ ಉಳಿಯಿತು. ಇನ್ನೊಂದು ಕಡೆ ಅಬಲೆಯ ಮೇಲೆ ದುಷ್ಟರು ಕೈ ಮಾಡಿದಾಗ ಯಾರೋ ಬಂದು ಕಾಪಾಡಿದರು. ಇಂಥದರಲ್ಲೆಲ್ಲ ಪಕ್ವ ಹೃದಯ ದೇವರ ಕೈಯನ್ನು ಕಂಡಿತು. ಇನ್ನೂ ಹಣ್ಣಾಗದ ಮನಸ್ಸಿಗೆ ಅದರ ಗುರುತು ಹತ್ತಲಿಲ್ಲ. ಅದೃಶ್ಯಲಕ್ಷ್ಮಿ ಬರುವಾಗ ಆಕೆಯ ಗೆಜ್ಜೆಯ ಕಾಲು ಗಲ್ಲುಗಲ್ಲೆನ್ನುತ್ತದೆ. ಆದರೆ ಆಕೆ ಹೆಜ್ಜೆಯ ಮೇಲೆ ಹೆಜ್ಜೆಯಿಕ್ಕುತ ಮೆಲುವಾಗಿ ನಡೆಯುತ್ತಾಳೆ. ಕಾಲಿಟ್ಟರೆ ಹೂವಿನಂತೆ ಮೆದುವಾದ ನಮ್ಮ ಸುಖಸ್ವಪ್ನ ಕೆಟ್ಟೀತಲ್ಲ ಎಂಬ ಹದ ಆಕೆಯದು. ಎಚ್ಚರವಿಲ್ಲದೆ ಆ ಗೆಜ್ಜೆ ಕೇಳಬಾರದು.

ಇಂಥ ಅನೇಕ 'ಘಟನೆಯಲ್ಲಿ ದೇವರ ಕೈವಾಡ ಸ್ಪಷ್ಟವಾಗಿ ಕಂಡುಬರುತ್ತದೆ. ನನ್ನ ಬಾಳಿನಲ್ಲಿ ಇಂಥವು ಎಷ್ಟೋ ಆಗಿವೆ. ಪದೇ ಪದೇ ಆಗುತ್ತವೆ. ಇವು ಬರೀ ಆಕಸ್ಮಿಕ ಘಟನೆಯಲ್ಲ.' ಕಳೆದ ವರ್ಷ

ಗಾಂಧೀಜಿಯ ದಕ್ಷಿಣ ಆಫ್ರಿಕದ ಜರ್ಮನ್ ಗೆಳೆಯ ಕಾಲೆನ್‌ಬಾಕ್‌ರು ಸೇವಾಗ್ರಾಮಕ್ಕೆ ತಮ್ಮ ಹಳೆಯ ಗೆಳೆಯನ ಭೇಟಿಗಾಗಿ ಬಂದಿದ್ದರು. ಅದೇ ಹೊತ್ತಿಗೆ ಇಂಗ್ಲಂಡಿನ ಪ್ರಸಿದ್ಧ ಡಾಕ್ಟರ್ ಚೆಸ್ಟರ್‌ಮನ್ ಬಂದಿದ್ದರು. ಆಗ ಕಾಲೆನ್‌ಬಾಕರಿಗೆ ಕಾಯಿಲೆ. ಚೆಸ್ಟರ್‌ಮನ್ ಹೊರಟು ಹೋದ ಮೇಲೆ ರೋಗ ಬಲವಾಯಿತು. ಸುಶೀಲಾ ನಾಯರಿಗೆ ಅದು ಸಾಧ್ಯವಾಗದಾಗಿ ಬೇರೆ ಯಾರಾದರೂ ಡಾಕ್ಟರರನ್ನು ಕರೆಸಲು ತಾರು ಮಾಡಬೇಕೆನ್ನುವಷ್ಟರಲ್ಲಿ ಚೆಸ್ಟರ್‌ಮನ್ ಆಶ್ರಮದಲ್ಲಿ ಕಾಲಿಟ್ಟರು. ಮರಳಿ ಬರುವದು ಅವರ ಲೆಕ್ಕದಲ್ಲಿರಲಿಲ್ಲ. ಹಾಗೇ ಇಂಗ್ಲಂಡಿಗೆ ಹೊರಡಬೇಕಾಗಿತ್ತು. ಅಂಥವರು ಯೋಗಾಯೋಗವಾಗಿ ಬಂದದ್ದು ನಮಗೆಲ್ಲ ಅಚ್ಚರಿಯಾಯಿತು. ಇದು 'ಆಕಸ್ಮಿಕ ಘಟನೆಯಲ್ಲ' ಎಂದು ಗಾಂಧೀಜೀ ತಮ್ಮ ನಂಬಿಗೆಯನ್ನು ತಿಳಿಸಿದರು.

ದೇವರನ್ನು ಪ್ರತ್ಯಕ್ಷವಾಗಿ ಕಾಣಬೇಕೆಂಬ ಹಂಬಲವೂ ಗಾಂಧೀಜಿಗೆ ಇಲ್ಲದೆ ಇಲ್ಲ. 'ಇದಿರು ಬದಿರು ನಿಂತು' ಕಣ್ಣಮುಂದೆ 'ದೇವರನ್ನು ನೋಡಬೇಕೆಂದು, ಮುಕ್ತಿ ಪಡೆಯಬೇಕೆಂದು' ಅವರು ಮೂವತ್ತು ವರುಷದಿಂದ ಒಂದೇಸವನೆ ಹೆಣಗುತ್ತಿದಾರೆ. ಅದಕ್ಕಾಗಿ ಬ್ರಹ್ಮಚರ್ಯ, ಅಹಿಂಸೆ, ತ್ಯಾಗ, ಆಹಾರಸಂಯಮಗಳನ್ನು ಅವಲಂಬಿಸಿ, 'ಅಸಿಧಾರಾ ವ್ರತ'ವನ್ನು ಪಾಲಿಸಿದಾರೆ. ಇಷ್ಟು ತೀವ್ರ ತಪಸ್ಸು ನಡೆಸಿಯೂ ಅವರಿಗೆ 'ಪರಮತತ್ವದ ಪೂರ್ಣದರ್ಶನವಾಗಿಲ್ಲ; ಹಣಿಕಿ ಹಾಕಿದಂತೆ' ಆಗಿದೆ. ಇದರ ಪರಿಣಾಮ ಅವರ ನುಡಿಯಲ್ಲಿ ಆದಂತೆ ಕಾಣುತ್ತದೆ. 'ದೇವರು ಸತ್ಯಸ್ವರೂಪಿ' ಎಂದು ಮೊದಮೊದಲು ಹೇಳುತ್ತಿದ್ದವರು 'ಸತ್ಯವೇ ಬ್ರಹ್ಮ' ಎನ್ನುತ್ತಿದಾರೆ ಈಗ. 'ಈಶ್ವರನು ಸತ್ಯವೆಂಬುದಕ್ಕಿಂತ ಸತ್ಯವೇ ಈಶ್ವರ ಎನ್ನುವದೇ ಸರಿ' ಎನ್ನುತ್ತಿದಾರೆ. ಸಾಕಾರದಲ್ಲಿದ್ದ ಅವರ ನಂಬಿಗೆ ನಿರಾಕಾರದ ಕಡೆಗೆ ಹರಿಯುತ್ತಿದ್ದಂತೆ ಕಾಣುತ್ತಿವೆ. ಈ ಅಂತವಂತ ಜಗತ್ತಿನ ಅನಂತಕಾರಣ, ಈ ಮರ್ತ್ಯವಿಶ್ವದ ಅಮೃತಾಧಾರ, ಈ ಕಾಲರೂಪ ದೇಶಾದಿ ಮರ್ಯಾದಿತ ಪ್ರಪಂಚದ ಅತೀತ ಸತ್ಯವೇ ಈಶ್ವರನೆಂದು ಅವರು ತಿಳಿದಿದಾರೆ. ಆ ತತ್ವವನ್ನು ಬಾಳಿನಲ್ಲಿ ತರುವದೇ ಮಾನವನ ಗುರಿ, ಅದೇ ಅವನ ಧರ್ಮ. 'ಭಕ್ತನ ಪ್ರತಿಯೊಂದು ಕರ್ಮದಲ್ಲೂ ಆ ನಂಬಿಗೆ

ಪ್ರಕಟವಾಗಬೇಕು.' ಮಾಡಿದುದೆಲ್ಲ ಅದರ ದ್ಯೋತಕವಾಗಬೇಕು. ಆ ಶ್ರುತಿಗೆ ಪೋಷಯಿಸದ ಕೆಲಸ ಸಲ್ಲದು.

'ದೇವರು ಪ್ರತ್ಯಕ್ಷವಾಗಿ ರೂಪುಗೊಂಡು ನಮಗೆ ಕಾಣಬಾರನೆಂದು' ಗಾಂಧೀಜಿಗೆ ಈಚೆಗೆ 'ನಂಬಿಗೆ'ಯಾಗಿದೆ. ಮೊದಲ ಸಾರಿ ನಾನೀ ಮಾತು ಕೇಳಿದುದು ಎರಡು ವರ್ಷದ ಕೆಳಗೆ ಅಮೇರಿಕದ ಡಾಕ್ಟರ್ ಮೋಟ್‌ರು ಸೇವಾಗ್ರಾಮಕ್ಕೆ ಬಂದಿದ್ದಾಗ. ಡಾಕ್ಟರರು ಅಮೇರಿಕಾ ದೇಶದ ಪ್ರಸಿದ್ಧ ತತ್ವಜ್ಞಾನಿಗಳು. ಅನುಭಾವಿ ಜಾತಿ. ಅವರು ಆಡಿದ ಮಾತಿನಲ್ಲಿ ಬಹುಭಾಗ ಆಧ್ಯಾತ್ಮದ ಪ್ರಶ್ನೆಗಳೇ ಇದ್ದವು. ಅವರು–ನಿಮ್ಮ ಜೀವನದ ದುರ್ಭರ ಪ್ರಸಂಗದಲ್ಲಿ ನಿಮಗೆ ಶಾಂತಿ ಕೊಟ್ಟುದು ಏನು–ಎಂದಾಗ ಗಾಂಧೀಜೀ 'ದೇವರಲ್ಲಿ ನಿಶ್ಚಲವಾದ ಭಕ್ತಿ' ಎಂದವರು, ನಿಮಗೆ ಯಾವಾಗಲಾದರೂ ಸಾಕ್ಷಾತ್ಕಾರದ ಅನುಭವವಾಗಿದೆಯೇ ಎಂದಾಗ ಹಾಗೆ ಉತ್ತರ ಕೊಟ್ಟರು. ಹಾಗಾದರೆ ಗಾಂಧೀಜಿಯ ಅಪಾರ ಭಕ್ತಿ ವ್ಯರ್ಥವೇ? ಅವರ ಶುದ್ಧ ಹೃದಯದ ಪ್ರಾರ್ಥನೆಗೆ ದೇವರ ಉತ್ತರವಿಲ್ಲವೇ ಎನಿಸಿತು. ಅವರಿಗೆ ಶ್ರೀರಾಮಭಕ್ತಿ ಬಹಳ. ಗಾಂಧೀಜೀ ಮುಂದೆ ಹೇಳಿದರು: 'ಆಪತ್ತಿನಲ್ಲಿ ದೇವರು ಕ್ರಿಯಾರೂಪವಾಗಿ ಅವತರಿಸುತ್ತಾನೆ.' ಅಂದರೆ, ದೇವರ ಹೊರತು ಅನ್ಯಕಾರಣದಿಂದ ಆಗಲಾರದ ಕೆಲವು ಪ್ರಸಂಗ ನಡೆಯುತ್ತವೆ. 'ಹೌದು. ಅವು ನಮಗೆ ತಿಳಿಯದೆಯೇ ಆಕಸ್ಮಾತ್ತಾಗಿ ಆಗಿಹೋಗುತ್ತವೆ.' 'ದೇವರು ವ್ಯಕ್ತಿ ಎಂದು ನಾನು ತಿಳಿದಿಲ್ಲ; ದೇವರು ಒಂದು ಭಾವ, ಒಂದು ಅರಿವು.

ಗಾಂಧೀಜೀ ಒಮ್ಮೆ ಅಸ್ಪೃಶ್ಯತಾನಿವಾರಣೆಗಾಗಿ ೨೧ ದಿನದ ದೀರ್ಘೋಪವಾಸ ಮಾಡಿದರು. ಅದಕ್ಕೆ ಸಂಬಂಧಿಸಿ ಅವರಿಗೆ ಅಂಥದೊಂದು ವಿಲಕ್ಷಣ ಅನುಭವವಾಯಿತು. ಗಾಂಧೀಜಿಗೆ ಹಿಂದಿನ ರಾತ್ರಿ ನಿದ್ದೆಹೋದಾಗ 'ಮರುದಿನ ಬೆಳಗ್ಗೆ ಉಪವಾಸವೊಂದನ್ನು ಹಿಡಿಯಬೇಕಾದೀತೆಂಬ ವಿಚಾರ ಲೇಶಮಾತ್ರವೂ ಇರಲಿಲ್ಲ. ರಾತ್ರಿ ಹನ್ನೆರಡು ಗಂಟೆಯ ಹೊತ್ತಿನಲ್ಲಿ ಏನೋ ಯಾರೋ ನನ್ನನ್ನು ತಟ್ಟನೆ ಎಬ್ಬಿಸಿದಂತಾಯಿತು. ಒಳಗಿಂದಲೋ ಹೊರಗಿಂದಲೋ ಸರಿಯಾಗಿ ಹೇಳಲು ಸಾಧ್ಯವಿಲ್ಲವಾಗಲಿ, ಅಂತೂ 'ನೀನು ಉಪವಾಸಮಾಡು' ಎಂದು ಕಿವಿಯಲ್ಲಿ

ಒಂದು ವಾಣಿ ಹೇಳಿದಹಾಗಾಯಿತು. 'ಎಷ್ಟು ದಿನ' ಎಂದು ಕೇಳಿದೆ. ಆ ಧ್ವನಿ ಮತ್ತೆ '೨೧ ದಿನ' ಎಂದಿತು. 'ಯಾವಾಗ ಮೊದಲಾಗಬೇಕು?' ನನ್ನ ಪ್ರಶ್ನೆ. 'ನಾಳೆ ಮೊದಲು ಮಾಡು' ಅದರ ಉತ್ತರ. ಹಾಗೇ ನಿರ್ಧಾರ ಮಾಡಿ ನಾನು ಸದ್ದಿಲ್ಲದೆ ನಿದ್ದೆಹೋದೆ. ಮರುದಿನ ಬೆಳಗ್ಗೆ ಪ್ರಾರ್ಥನೆ ಮುಗಿವವರೆಗೆ ನನ್ನ ಸಂಗಾತಿಗಳಿಗೆ ಯಾರಿಗೂ ಅದನ್ನು ಹೇಳಲಿಲ್ಲ. ಅವರ ಕೈಯಲ್ಲಿ ನನ್ನ ನಿರ್ಧಾರ ತಿಳಿಸಲು ಒಂದು ಚೀಟಿಕೊಟ್ಟೆ. ಆ ಉಪ ವಾಸದಲ್ಲಿ ಡಾಕ್ಟರರು ತುಂಬಾ ಹೆದರಿದರು. ನಾನು ಉಳಿಯುವದೇ ಕಷ್ಟ ವೆಂದರು. ಆದರೆ ನನ್ನೊಳಗಿನ ಏನೋ ಒಂದು ಹೇಳುತ್ತಿತ್ತು: ಹೆದರ ಬೇಡ, ನೀನು ಕೊನೆಸಾಗಿಸಬಲ್ಲೆ, ಕೊನೆ ಸಾಗಿಸು. ಅಂಥ ಅನುಭವ ಆದುದು ಅದೊಂದೇ ಸಲ. ಹಿಂದೆ ಆಗಿಲ್ಲ, ಅದರ ಮುಂದೆ ಮತ್ತೆ ಆಗಿಲ್ಲ.'

ಆ ಧ್ವನಿ ಕೇಳಿಬಂದಾಗ ಗಾಂಧೀಜಿಯ 'ಮನಸ್ಸು ಅದನ್ನೊಪ್ಪಲು ಸಿದ್ಧವಿರಲಿಲ್ಲ. ಆ ಉಪವಾಸಕ್ಕೊ ಮನಸ್ಸಿರಲಿಲ್ಲ. ಆದರೆ ಆ ಅನುಭವ ಸ್ಪಷ್ಟಾತಿಸ್ಪಷ್ಟವಾಗಿತ್ತು.' ಇಂಥ ಸಂದೇಶವನ್ನೇ ಗಾಂಧೀಜೀ ಅಂತ ರ್ವಾಣಿಯೆನ್ನುತ್ತಾರೆ. ಈ ಅಂತರ್ವಾಣಿ ಎಲ್ಲರಲ್ಲೂ ಇದೆ. 'ಅದರ ಧ್ವನಿ ಕೇಳಲು ಶಿಕ್ಷಣ, ಸಾಧನೆಬೇಕು.' ಮನಸಿಗೆ ಬಂದ ಭ್ರಾಂತಿಯೆಲ್ಲಾ ಅಂತ ರ್ವಾಣಿಯಲ್ಲ. ನಿಗ್ರಹ ಜೀವನವಿಲ್ಲದೆ ಬರುವ ವಾಣಿ ಪಿತ್ತದ ಆಟ. ಇದೇ ಅಲ್ಲ, ಗಾಂಧೀಜೀ ಮಾಡಿದ ಮಹತ್ವದ ಕೆಲಸವೆಲ್ಲ ಹೀಗೆ ಆಕಸ್ಮಿಕ ಸ್ಫೂರ್ತಿಯಿಂದ, 'ದೈವ ಪ್ರೇರಣೆ' ಯಿಂದ ಆಗಿದೆ. ೧೯೩೦ರ ದಂಡಿ ದಂಡ ಯಾತ್ರೆ ತೆಗೆದುಕೊಳ್ಳಿರಿ. 'ಉಪ್ಪಿನ ಸತ್ಯಾಗ್ರಹ ಹೇಗೆ ಪರಿಣಮಿಸೀ ತೆಂಬದರ ವಿಚಾರ ನನಗೇನೂ ಇರಲಿಲ್ಲ. ಪಂಡಿತ ಮೋತೀಲಾಲರೂ ಉಳಿದ ಗೆಳೆಯರೂ ಕಾತರರಾಗಿದ್ದರು. ನಾನೇನು ಮಾಡುವೆನೆಂಬುದೇ ಅವರಿಗೆ ತಿಳಿಯಲಿಲ್ಲ. ನನಗೆ ಗೊತ್ತಿದ್ದರಲ್ಲವೇ ನಾನು ಅವರಿಗೆ ಹೇಳುವದು. ಮಿಂಚಿನಂತೆ ಬಂತು ಅದು; ದೇಶವನ್ನು ಅಲ್ಲಿಂದಿಲ್ಲಿಗೆ ಅಲ್ಲಾಡಿಸಿಬಿಟ್ಟಿತು.' ಹರತಾಳದ ಜನ್ಮವೂ ಹಾಗೇ. '೧೯೧೯ರ ಎಪ್ರಿಲ್ ೬ನೆ ತಾರೀಖಿನ ದಿನ ಹರತಾಳದ ದಿನವೆಂದು ಹಿಂದಿನ ದಿನದವರೆಗೆ ನನಗೇ ಗೊತ್ತಿರಲಿಲ್ಲ. ರಾತ್ರಿ ಕನಸಿನಲ್ಲಿ ಅದು ಬಂತು—ಧ್ವನಿಯಾಗಲಿ ದರ್ಶನವಾಗಲಿ ಆಗಲಿಲ್ಲ

ಅದೇ ಸರಿಯೆಂದು ಅನಿಸಿತು. ಬೆಳಗ್ಗೆ ರಾಜಾಜಿಗೆ ಹೇಳಿದೆ. ಅವರೂ ಒಪ್ಪಿದರು. ಪರಿಣಾಮ ಎಲ್ಲರಿಗೂ ತಿಳಿದೇ ಇದೆ.'

'ಇದೇನು ಹೊಸದಲ್ಲ. ದೇವರವಾಣಿ ನನಗೆ ಕೇಳಿಬಂದು ಬಹಳ ದಿನವಾಯಿತು. ಈ ಮಾತನ್ನು ಹೇಗೆ ಪ್ರಮಾಣ ಮಾಡಿಕೊಡಬೇಕೋ ನನಗೆ ತಿಳಿಯದು. ದಿನ ಕಳೆದಂತೆ, ವಯಸ್ಸು ಆದಹಾಗೆ ಆ ವಾಣಿ ಹೆಚ್ಚು ಹೆಚ್ಚು ಸ್ಪಷ್ಟವಾಗಿ ಕೇಳಬರುತ್ತಿದೆ. ಎಷ್ಟೆಷ್ಟು ದೂರ ನನ್ನ ಶರಣಾಗತಿಯೋ ಅಷ್ಟಷ್ಟು ಹೆಚ್ಚು ನನ್ನ ಸಂತೋಷ.'

ಭಕ್ತಿಯ ಹಾದಿಯಲ್ಲಿ ಗಾಂಧೀಜಿಯ ದೇವರು ಎಷ್ಟು ಸುಲಭನೋ ತತ್ವದ ರೀತಿಯಲ್ಲಿ ಅಷ್ಟು ಉಕ್ಕಿನ ಕಡಲೆ. 'ಜಗತ್ತು ನಶ್ವರವಿದ್ದರೂ ಅದರಲ್ಲಿ ಅವಿನಾಶಿಯಾದ ಏನೋ ಒಂದಿದೆ. ಆ ಮಿಥ್ಯೆಯಲ್ಲಿ ಅಷ್ಟು ಸತ್ಯವೂ ಇದೆ. ಆದ್ದರಿಂದ ಜಗತ್ತು ಮಿಥ್ಯೆಯೂ ಹೌದು, ಸತ್ಯವೂ ಹೌದು ಎನ್ನುತ್ತೇನೆ. ನಾನು ಅದ್ವೈತಿಯಿದ್ದೂ ದ್ವೈತವನ್ನು ಒಪ್ಪುತ್ತೇನೆ. ನನ್ನನ್ನು ನೀವು ಅನೇಕಾಂತವಾದಿ ಅಥವಾ ಸ್ಯಾದ್ವಾದಿ ಎನ್ನಬಹುದು. ಆದರೆ ನನ್ನ ಸ್ಯಾದ್ವಾದ ಪಂಡಿತರದಲ್ಲ. ಆನೆಯನ್ನು ಏಳು ಜನ ಕುರುಡರು ಮುಟ್ಟಿ ಏಳು ರೀತಿಯಾಗಿ ವರ್ಣಿಸಿದರೆಂದು ಒಂದು ಕತೆಯಿದೆ. ಅವರು ಹೇಳಿದುದು ಅವರ ಪಾಲಿಗೆ ಸರಿ, ಇನ್ನೊಬ್ಬನಿಗೆ ತಪ್ಪು. ಕಣ್ಣಿದ್ದವನಿಗೆ ಅವರಲ್ಲಿ ಪ್ರತಿಯೊಬ್ಬನದೂ ಸರಿಯೂ ಹೌದು ತಪ್ಪೂ ಹೌದು. ಇದರೊಳಗಿನ ತತ್ವ ಸತ್ಯ ಅನಂತರೂಪಿ ಎಂಬದು. ಈ ಅನೇಕಾಂತವಾದಕ್ಕೆ ಸತ್ಯ ಅಹಿಂಸೆಗಳೇ ಆಧಾರ. ಇದರಿಂದ ದೇವರು ಸೃಷ್ಟಿಕರ್ತನೆಂಬದೂ ಸರಿ, ಅಲ್ಲವೆಂದರೂ ಸರಿಯೆ. ರಾಮಾನುಜನ ಹಾದಿಯಲ್ಲಿ ದೇವರ ಸೃಷ್ಟಿ ಶಕ್ತಿಯನ್ನು ಸಮರ್ಥಿಸುತ್ತೇನೆ. ಜೈನರ ಶಾಸ್ತ್ರಗಳನ್ನು ಹಿಡಿದು ದೇವರ ಶಕ್ತಿ ಅಸೃಷ್ಟಿಯೆಂದೂ ತಿಳಿಯುತ್ತೇನೆ. ನಿಜವಾಗಿ ನಾವೆಲ್ಲ ಅವರ್ಣನೀಯನನ್ನು ವರ್ಣಿಸಬಯಸುತ್ತೇವೆ, ಅಚಿಂತ್ಯನನ್ನು ಚಿಂತಿಸುತ್ತೇವೆ, ಅಜ್ಞೇಯನನ್ನು ತಿಳಿಯಬಯಸುತ್ತೇವೆ. ಅಂತಲೇ ಮಾತು ಸಾಲದೆ ಬರುತ್ತದೆ, ತಪ್ಪಾಗುತ್ತದೆ, ವಿರುದ್ಧವೂ ಆಗುತ್ತದೆ. ಅದಕ್ಕಾಗಿಯೇ ವೇದಗಳು 'ನೇತಿ ನೇತಿ' ಎಂದು ಬ್ರಹ್ಮನನ್ನು ವರ್ಣಿಸುತ್ತವೆ. ಅವನು ಏಕಂ–ಒಬ್ಬನೇ ಆದರೂ ಬಹುಧಾ–ಅನೇಕವೂ ಆಗಿದಾನೆ; ಅಣುವಿಗಿಂತ ಅಣುವಾಗಿಯೂ

ಮಹತ್ತಿಗಿಂತ ಮಹತ್ತಾಗಿದಾನೆ; ಸಮುದ್ರದ ಒಂದು ಹನಿಯಲ್ಲೂ ಅವಸಿದಾನೆ. ಆದರೆ ಸಪ್ತ ಸಮುದ್ರಗಳೂ ಅವನನ್ನು ಮುಚ್ಚಲಾರವು.'

'ಈ ಅನೇಕಾಂತವಾದವೇ ನನಗೆ ಮುಸ್ಲಿಮನನ್ನೂ ಕ್ರೈಸ್ತನನ್ನೂ ಅವನವನ ನಿಟ್ಟಿನಿಂದ ನೋಡುವಂತೆ ಕಲಿಸಿತು.' 'ಒಬ್ಬರಧರ್ಮವನ್ನೊಬ್ಬರು ಹಳಿವುದು, ಸ್ವೇಚ್ಛೆಯಾಗಿ ಆಡುವದೂ, ಸುಳ್ಳು ಹೇಳುವದೂ, ನಿರಪರಾಧಿಗಳ ತಲೆ ಒಡೆವುದೂ, ಮಸೀದೆ ಮಂದಿರಗಳನ್ನು ಅಪವಿತ್ರಗೊಳಿಸುವದೂ ಆಸ್ತಿಕತೆಯಲ್ಲ; ನಾಸ್ತಿಕತೆ.' ಕಾಶಿಯಲ್ಲೂ ಇಲ್ಲ ಕಾಬಾದಲ್ಲೂ ಇಲ್ಲ; ಅಲ್ಲಿಲ್ಲ ಇಲ್ಲಿಲ್ಲ ಎಲ್ಲೆಲ್ಲೂ ಇರುವನೆಂದು ಹೇಳಿದ ಕಬೀರದಾಸನಂತೆ ಗಾಂಧೀಜೀ 'ಇಸ್ಲಾಮಿನ ಅಲ್ಲಾ, ಕ್ರೈಸ್ತರ ಗಾಡ್, ಹಿಂದೂಗಳ ಈಶ್ವರ–ಎಲ್ಲರೂ ಒಂದೇ. ಹಿಂದೂ ಧರ್ಮದಲ್ಲಿ ದೇವರಿಗೆ ಅನೇಕ ಹೆಸರಿದ್ದಂತೆ ಇಸ್ಲಾಮಿನಲ್ಲೂ ದೇವರಿಗೆ ಬಹಳ ಹೆಸರಿವೆ. ಈ ಹೆಸರೆಲ್ಲ ಒಂದೊಂದು ಗುಣದ ರೂಪ, ಇಡೀ ವ್ಯಕ್ತಿಯಲ್ಲ. ದೈವಭಕ್ತಿಯಲ್ಲಿ ಸರ್ವಧರ್ಮಕ್ಕೂ ಸಮಾನ ಗೌರವವಿರಬೇಕು. ನನ್ನ ಧರ್ಮವೇ ಶ್ರೇಷ್ಠ ಇತರರ ಧರ್ಮ ಹೇಯವೆಂಬ ಭಾವನೆ ಅಸಹನೆಯ ಪರಮಾವಧಿ; ಅಸಹನೆ ಹಿಂಸೆಯಮರಿ.' 'ಪರಮಧರ್ಮದಲ್ಲಿ ಎಲ್ಲವೂ ಬಂತು; ಹಿಂದೂ, ಇಸ್ಲಾಂ, ಕ್ರೈಸ್ತ, ಎಲ್ಲಾ. ಇವೆಲ್ಲವನ್ನೂ ಮೀರಿದುದು ಅದು. ಅದರ ಹೆಸರು ಸತ್ಯ.' ಇತರ ಧರ್ಮಗಳನ್ನು ಸುಮ್ಮನೆ ಸಹಿಸುವದಲ್ಲ. ಪರಮತ ಗುಣಗ್ರಹಣ ಗಾಂಧೀಜಿಯ ಸ್ವಭಾವ. ಮಹಮ್ಮದ ಪೈಗಂಬರನ ಗುಣಗಳನ್ನೂ ಇಸ್ಲಾಮೀ ಸತ್ಪುರುಷರ ಕತೆಗಳನ್ನೂ ಅವರು ಮೇಲಿಂದ ಮೇಲೆ ನೆನೆಯುತ್ತಾರೆ. ಕ್ರೈಸ್ತನಬಗ್ಗೆ ತುಂಬಾ ಆದರ. ಅವರ ಬಾಳಿನ ಮೇಲೆ ಅವನ ಪ್ರಭಾವ ತುಂಬಾ ಬಿದ್ದಿದೆ. ಪಾರ್ಸೀ ಜನರ ಅವೆಸ್ತಾವನ್ನು ಆದರಿಸುತ್ತಾರೆ. ತಮ್ಮ ಮಟ್ಟಿಗೆ ತಮಗೆ ಗೀತೆಯ ವಾಕ್ಯವೇ ಸತ್ಯ–ಸ್ವಧರ್ಮೇ ನಿಧನಂ ಶ್ರೇಯಃ. ಹಿಂದೂ ಧರ್ಮವೇ ಅವರ ಹಾದಿ. ಅಲ್ಲಿ ಭಕ್ತಿ ಪ್ರಪತ್ತಿ–ಪ್ರಾರ್ಥನೆಗಳೇ ಅವರ ಊರುಗೋಲು.

'ದೇವರು ಬಳಿಯಲ್ಲೇ ಇದಾನೆಂದು ಅನಿಸುತ್ತದೆಯಾಗಲಿ ದೂರದಲ್ಲೇ ಇರುವಹಾಗಿದೆ. ನನಗೆ ನೇರಾದ ಹಾದಿ ತೋರಿಸಲೊಲ್ಲ, ಸರಿಯಾಗಿ

ನಡೆಯಿಸಲೊಲ್ಲ. ಗೋಪಿಯರನ್ನು ಗೋಳಾಡಿಸಿದ ಕೃಷ್ಣನಂತೆ ಕಾಣಿಸಿಕೊಂಡೂ ಮರೆಯಾಗುತ್ತಾನೆ, ಮರೆಯಾದವ ಮತ್ತೆ ಕಾಣಿಸುತ್ತಾ ಗೋಳಾಡಿಸುತ್ತಾನೆ.

'ಪ್ರಾಣಕ್ಕೆ ಎರವಾಗಿಯಾದರೂ ಪಾಪದೊಡನೆ ಹೋರಾಡದೆ ದೇವರನ್ನು ತಿಳಿದುಕೊಳ್ಳಲಾರೆನೆಂಬುದು ನನಗೆ ಗೊತ್ತಿದೆ. ನನ್ನ ಅಲ್ಪಾನುಭವದಿಂದ ಈ ನಂಬಿಗೆಯ ಕೋಟೆಯನ್ನು ಕಟ್ಟಿದೇನೆ. ಎಷ್ಟೆಷ್ಟು ಪವಿತ್ರನಾಗುತ್ತೇನೋ ಅಷ್ಟಷ್ಟು ದೇವರಿಗೆ ಹತ್ತಿರವಾಗುತ್ತೇನೆ ಎಂಬ ನಂಬಿಗೆ ಇದೆ. ಇಂದು ನನ್ನ ಭಕ್ತಿ ಬರೀ ಕ್ಷಮಾಯಾಚನೆ. ಅದೇ ಹಿಮಾಲಯದಂತೆ ಅಚಲವೂ ಅದರ ಉತ್ತುಂಗ ಶಿಖರದಂತೆ ಧವಳವೂ ತೇಜಃಪುಂಜವೂ ಆದರೆ ಹೇಗಿರಬೇಡ ಅದು! ನ್ಯೂಮನ್‌ನೊಡನೆ ನಾವೂ ಹೇಳುವ—

ಕರುಣಾಳು ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ,
ಕೈ ಹಿಡಿದು ನಡಸೆನ್ನನು.
ಇರುಳು ಕತ್ತಲೆಯ ಗವಿ; ಮನೆ ದೂರ; ಕನಿಕರಿಸಿ
ಕೈ ಹಿಡಿದು ನಡಸೆನ್ನನು.
ಹೇಳಿ ನನ್ನಡಿಯಿಡಿಸು; ಬಲು ದೂರ ನೋಟವನು
ಕೇಳೆನೊಡನೆಯೆ–ಸಾಕು ನನಗೊಂದು ಹೆಜ್ಜೆ.
ಮುನ್ನ ಇಂತಿರದಾದೆ; ನಿನ್ನ ಬೇಡದೆ ಹೋದೆ,
ಕೈ ಹಿಡಿದು ನಡಸು ಎನುತ.
ನನ್ನ ದಾರಿಯ ನಾನೆ ನೋಡಿ ಹಿಡಿದೆನು;–ಇನ್ನು,
ಕೈ ಹಿಡಿದು ನಡಸು ನೀನು.
ಮಿರುಗು ಬಣ್ಣಕೆ ಬೆರೆತು, ಭಯ ಮರೆತು, ಕೊಬ್ಬಿದೆನು;
ಮೆರೆದಾಯ್ತು; ನೆನೆಯದಿರು ಹಿಂದಿನದನೆಲ್ಲ.
ಇಷ್ಟು ದಿನ ಸಲಹಿರುವೆ ಮೂರ್ಖನನು ಮುಂದೆಯೂ
ಕೈ ಹಿಡಿದು ನಡಸದಿಹೆಯಾ?
ಕಷ್ಟದಡವಿಯ ಕಳೆದು, ಬೆಟ್ಟ ಹೊಳೆಗಳ ಹಾದು,
ಇರುಳನ್ನು ನೂಕದಿಹೆಯಾ?
ಬೆಳಗಾಗ ಹೊಳೆಯದೇ ಹಿಂದೊಮ್ಮೆ ನಾನೊಲಿದು
ಈ ನಡುವೆ ಕಳೆಕೊಂಡ ದಿವ್ಯಮುಖ ನಗುತ?'

('ಶ್ರೀ'ಯವರ ಭಾಷಾಂತರ)

---